# ಮಾಸ ಸಂಭ್ರಮ

## 1. ಪ್ರಾರ್ಥನೆ

ಓಂ ತತ್ಸತ್ ಶ್ರೀ ನಾರಾಯಣನೀ

ಓಂ ತತ್ಸತ್ ಶ್ರೀ ನಾರಾಯಣನೀ ಪುರುಷೋತ್ತಮ ಗುರು ನೀ। ಸಿದ್ಧ ಬುದ್ಧ ನೀ ಸ್ಕಂದ ವಿನಾಯಕ। ಸವಿತಾ ಪಾವಕ ನೀ।।ಪ।। ಬ್ರಹ್ಮ ಮಜ್ದ ನೀ ಯಹ್ವ ಶಕ್ತಿ ನೀ। ಏಸು ಪಿತಾ ಪ್ರಭು ನೀ। ರುದ್ರ ವಿಷ್ಣು ನೀ ರಾಮಕೃಷ್ಣ ನೀ। ರಹೀಮ ತಾವೋನೀ।।1।। ವಾಸುದೇವ ಗೋವಿಶ್ವರೂಪಿ ನೀ ಚಿದಾನಂದ ಹರಿ ನೀ। ಅದ್ವಿತೀಯ ನೀ ಅಕಾಲ ನಿರ್ಭಯ ಆತ್ಮಲಿಂಗ ಶಿವ ನೀ।।

ಯಂ ಶೈವಾಃ ಸಮುಪಾಸತೇ ಶಿವ

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ। ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ। ಅರ್ಹನ್ನಿತ್ಯಥ ಜೈನ ಶಾಸನರತಾಃ ಕರ್ಮೇತಿ ಮೀಮಾಂಸಕಾಃ। ಸೋಯಂವೋ ವಿದಧಾತು ವಾಂಛಿತ ಫಲಂ ತ್ರೈಲೋಕ್ಯನಾಥೋ ಹರಿಃ।।

ಶೈವಾನಾಮೀಶ್ವರೋ ವಿಷ್ಣುಃ

ಶೈವಾನಾಮೀಶ್ವರೋ ವಿಷ್ಣುಃ। ವೈಷ್ಣವಾನಾಂ ಚ ಸಮ್ಮತಃ। ದೇವೀತಿ ಶಾಕ್ತತಂತ್ರೇ ಚ। ಬುದ್ಧೋ ಬೌದ್ಧ ಸುಪೂಜಿತಃ।।ಪ।। ಅರ್ಹಂತೋ ಜೈನಧರ್ಮಸ್ಯ। ಕ್ರೈಸ್ತಾನಾಂ ಕ್ರಿಸ್ತ ಏವ ಚ। ಜಿಹೋವಶ್ಚ ಯಹೂದ್ಯಾನಾಂ। ಅಲ್ಲಾ ಮಾಹಮ್ಮದಸ್ಯ ಚ।।1।। ಫರ್ರೈರಾಹೂರ ಮಸ್ದೇತಿ। ಫಾರಸೀಕೈರ್ವಿಕಥ್ಯತೇ।। ಏವಂ ಯಜ್ಜ್ಯೋತಿರಾಭಾತಿ। ತಜ್ಜ್ಯೋತಿಶ್ಯಂಕರೊತು ನಃ।।2।।

ಯಂ ವೈದಿಕಾ ಮಂತ್ರ

ಯಂ ವೈದಿಕಾ ಮಂತ್ರ ದೃಶಃ ಪುರಾಣಾಃ। ಇಂದ್ರಂ ಯಮಂ ಮಾತರಿಶ್ವಾನಮಾಹುಃ । ವೇದಾಂತಿನೋಟಿ ನಿರ್ವಚನೀಯಮೇಕಂ। ಯಂ ಬ್ರಹ್ಮ ಶಬ್ದೇನ ವಿನಿರ್ದಿಶಂತಿ ।। ಶೈವಾಯಮೀಶಂ ಶಿವ ಇತ್ಯವೋಚನ್। ಯಂ ವೈಷ್ಣವಾ ವಿಷ್ಣುರಿತಿಸ್ತುವಂತಿ । ಬುದ್ಧಸ್ತಥಾರ್ಹನ್ನಿತಿ ಬೌದ್ಧಜೈನಾಃ। ಸತ್ ಶ್ರೀಅಕಾಲೇತಿ ಚ ಸಿಖ್ಖಸಂತಃ ।। ಶಾಸ್ತೇತಿ ಕೇಚಿತ್ ಕತಿಚಿತ್ ಕುಮಾರಃ। ಸ್ವಾಮೀತಿ ಮಾತೇತಿ ಪಿತೇತಿ ಭಕ್ತ್ಯಾ । ಯಂ ಪ್ರಾರ್ಥಯಂತೇ ಜಗದೀಶಿತಾರಂ। ಸ ಏಕ ಏವ ಪ್ರಭುರದ್ವಿತೀಯಃ ।।



# ಚೈತ್ರಮಾಸ

ಚೈತ್ರಮಾಸ ಬಂದಿದೆ ರಾಗ: ಕಮಾಚ್

ಚೈತ್ರಮಾಸ ಬಂದಿದೆ ನೋಡಾ ಚುದ್ರೋದಯದಂತೆ। ಎಲ್ಲೆಲ್ಲೂ ಹೊಸ ಹೊನಲು ಹೊಮ್ಮುತಾ ಚಿಮ್ಮುತಾ।।ಪ।। ನವಜಾತ ಶಿಶುವಾಗಿ ನವತರುಣ ತಾನಾಗಿ। ನವ ನಿಧಿಯ ಮೈತುಂಬಿ ತಾ ಬರುವನು (2ಸಾರಿ)।।ಚೈತ್ರ।। ಹೊಸತನವ ಹೊಸಮನವ ತುಂಬಿ ಬರುವನು।।1।। ಶೃಂಗಾರದ ಪ್ರತಿರೂಪ ಬಂಗಾರದ ನಿಜರೂಪ। ಇವ ತರುವ ಚಿಗುರು ಎಲೆಗಳ ಬಣ್ಣದ ಮೇಲೆ। ಸುಖ ಸಾಗರವು ಸಂತಸವು ಜೀವನ ಲೀಲೆ(2ಸಾರಿ)।।2।। ನಮ್ಮ ಕವಿಗಳಿಗಿವ ಚೈತನ್ಯ ಇವನಿಹವೇ ಬಹುಮಾನ್ಯ। ಎಂದೆಂದಿಗೂ ಇವ ಜೊತೆಗಿರೆ ಜೀವನ ಧನ್ಯ। ನಮ್ಮ ಋತು ಕಳೆದು ಋತುವಳಿದು ಬೆಳಗಿ ಬರುವನು (2ಸಾರಿ) ।।3।।



## 2. "ಶ್ರೀ ವಿಷ್ಣು" ಮಾಸನಿಯಾಮಕ

ಶುಕ್ಲಾಂಬರಧರಂ ವಿಷ್ಣುಂ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ। ಪ್ರಸನ್ನ ವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ।।

ಶಾಂತಾಕಾರಂ ಭುಜಗಶಯನಂ

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ। ವಿಶ್ವಾಧಾರಂ ಗಗನ ಸದೃಶಂ ಮೇಘವರ್ಣಂ ಶುಭಾಂಗಂ। ಲಕ್ಷ್ಮೀಕಾಂತಂ ಕಮಲ ನಯನಂ ಯೋಗಿಹೃದ್ಯಾನಗಮ್ಯಂ। ವಂದೇ ವಿಷ್ಣುಂ ಭವಭಯ ಹರಂ ಸರ್ವಲೋಕೈಕ ನಾಥಂ।। ಮೇಘಶ್ಯಾಮಂ ಪೀತ ಕೌಶೇಯ ವಾಸಂ। ಶ್ರೀವತ್ಸಾಂಕಂ ಕೌಸ್ತುಭೋದ್ಭಾಸಿತಾಂಗಂ ಪುಣ್ಯೋಪೇತಂ ಪುಂಡರೀಕಾಯತಾಕ್ಷಂ। ವಿಷ್ಣುಂ ವಂದೇ ಸರ್ವಲೋಕೈಕ ನಾಥಮ್।। ಸಂಶಂಖಚಕ್ರಂ ಸಕಿರೀಟಕುಂಡಲಂ ಸಪೀತವಸ್ತ್ರಂ ಸರಸೀರುಹೇಕ್ಷಮ್। ಸಹಾರವಕ್ಷಸ್ಥಳ ಶೋಭಿತಂ ಕೌಸ್ತುಭಂ ನಮಾಮಿ ವಿಷ್ಣುಂ ಶಿರಸಾ ಚತುರ್ಭುಜಮ್।।

ಪ್ರಾತಃಸ್ಮರಾಮಿ ಭವಭೀತಿ

ಪ್ರಾತಃಸ್ಮರಾಮಿ ಭವಭೀತಿ ಮಹಾರ್ತಿ ಶಾಂತ್ಯೈ ನಾರಾಯಣಂ। ಗರುಡ ವಾಹನಮಬ್ಜನಾಭಮ್। ಗ್ರಾಹಾಭಿಭೂತ ವರವಾರಣ ಮುಕ್ತಿಹೇತುಂ। ಚಕ್ರಾಯುಧಂ ತರುಣವಾರಿಜ ಪತ್ರನೇತ್ರಮ್।।1।। ಪ್ರಾತರ್ನಮಾಮಿ ಮನಸಾವಚಸಾ ಚ ಮೂರ್ಧ್ನಾ ಪಾದಾರವಿಂದ ಯುಗಲಂ ಪರಮಸ್ಯ ಪುಂಸಃ ನಾರಾಯಣಸ್ಯ ನರಕಾರ್ಣವತಾರಣಸ್ಯಂ ಪಾರಾಯಣ ಪ್ರವಣ ವಿಪ್ರಪರಾಯಣಸ್ಯ।।2।। ಪ್ರಾತರ್ಭಜಾಮಿ ಭಜತಾಮಭಯಂಕರಂ ತಂ ಪ್ರಾಕ್ಸರ್ವಜನ್ಮಕೃತಪಾಪ ಭಯಾಪಹತ್ಯೈ। ಯೋ ಗ್ರಾಹವಕ್ತ್ರ ಪತಿತಾಂಘ್ರಿಗಜೇಂದ್ರ ಘೋರಶೋಕ ಪ್ರಣಾಶನ ಕರೋಧೃತ ಶಂಖಚಕ್ರಃ।।3।।

ನಮಸ್ತೇ ಪುಂಡರೀಕಾಕ್ಷ

ನಮಸ್ತೇ ಪುಂಡರೀಕಾಕ್ಷ ನಮಸ್ತೇ ಪುರುಷೋತ್ತಮ। ನಮಸ್ತೇ ಸರ್ವಲೋಕಾತ್ಮನ್ ನಮಸ್ತೇ ತಿಗ್ಮಶತ್ರಿಣೇ।।1।। ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣ ಹಿತಾಯಚ। ಜಗನ್ನಾಥಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ।।2।। ಬ್ರಹ್ಮತ್ವೇ ಸೃಜತೇ ವಿಶ್ವಂ ಸ್ಥಿತೌಪಾಲಯತೇ ನಮಃ। ರುದ್ರರೂಪಾಯ ಕಲ್ಪಾಂತೇ ನಮಸ್ತುಭ್ಯಂ ತ್ರಿಮೂರ್ತಯೇ।।3।। ದೇವಾಯಕ್ಷಾಸುರಾಃ ಸಿದ್ಧಾಃ ನಾಗಾಃ ಗಂಧರ್ವಕಿನ್ನರಾಃ। ಪಿಶಾಚಾ ರಾಕ್ಷಸಾಶ್ಚೈವ ಮನುಷ್ಯಾಃಪಶವಶ್ಚಯೇ।।4।। ಪಕ್ಷಿಣಃ ಸ್ಥಾವರಾಶ್ಚೈವ ಪಿಪೀಲಿಕ ಸರೀಸೃಪಾಃ। ಭೂಮ್ಯಾಪೋಽಥಗ್ನಿರ್ನಭೋ ವಾಯುಃ ಶಬ್ದಃ ಸ್ಪರ್ಶಸ್ತಥಾರಸಃ।।5।। ರೂಪಂ ಗಂಧೋ ಮನೋಬುದ್ಧಿರಾತ್ಮಾ ಕಾಲಸ್ತಥಾ ಗುಣಾಃ। ಏತೇಷಾಂ ಪರಮಾರ್ಥಶ್ಚ ಸರ್ವಮೇತತ್ ತ್ವಮಚ್ಯುತ।।6।।

ವಿದ್ಯಾವಿದ್ಯೇಭವಾನ್ ಸತ್ಯಮಸತ್ಯಂ ಚ ವಿಷಾಮೃತೇ। ಪ್ರವೃತ್ತಿಂ ಚ ನಿವೃತ್ತಿಂ ಚ ಕರ್ಮವೇದೋದಿತಂ ಭವಾನ್॥7॥ ಸಮಸ್ತ ಕರ್ಮ ಭೋಕ್ತಾ ಚ ಕರ್ಮೋಪ ಕರಣಾನಿ ಚ। ತ್ವಮೇವ ವಿಷ್ಣೋ ಸರ್ವಾಣಿ ಸರ್ವಕರ್ಮಫಲಂ ಚ ಯತ್॥8॥ ಮಯ್ಯನ್ಯತ್ರ ತಥಾಶೇಷ ಭೂತೇಷು ಭುವನೇಷು ಚ। ತವೈವ ವ್ಯಾಪ್ತಿರೈಶ್ವರ್ಯಗುಣ ಸಂಸೂಚಿಕಾ ಪ್ರಭೋ॥9॥ ತ್ವಾಂ ಯೋಗಿನಶ್ಚಿಂತಯಂತಿ ತ್ವಾಂ ಯಜಂತೇಚ ಯಜ್ವಿನಃ। ಹವ್ಯಕವ್ಯ ಭುಜೇಕಸ್ತ್ವಂ ಪಿತೃದೇವಸ್ವರೂಪಭೃತ್॥10॥ ರೂಪಂ ಮಹತ್ತೆ ಸ್ಥಿತ ಮತ್ರ ವಿಶ್ವಂ ತತಶ್ಚ ಸೂಕ್ಷ್ಮಂ ಜಗದೇತದೀಶ। ರೂಪಾಣಿ ಸೂಕ್ಷ್ಮಾಣಿ ಚ ಭೂತಭೇದಾ ಸ್ತೇಷ್ವಾಂತರಾತ್ಮಾಖ್ಯ ಮತೀವ ಸೂಕ್ಷ್ಮಮ್॥11॥ ತಸ್ಮಾಚ್ಚ ಸೂಕ್ಷ್ಮಾದಿ ವಿಶೇಷಣಾನಾಮಗೋಚರೇಯತ್ಪರಮಾರ್ಥ ರೂಪಂ। ಕಿಮಪ್ಯಚಿಂತ್ಯಂ ತವ ರೂಪಮಸ್ತ ತಸ್ಮೈ ನಮಸ್ತೇ ಪುರುಷೋತ್ತಮಾಯ ॥12॥ಸರ್ವಭೂತೇಷು ಸರ್ವಾತ್ಮನ್ ಯಾ ಶಕ್ತಿಪರಾ ತವ। ಗುಣಾಶ್ರಯ ನಮಸ್ತಸ್ಮೈ ಶಾಶ್ವತಾಯೈ ಸುರೇಶ್ವರ॥13॥ ಯಾऽತೀತ ಗೋಚರಾ ವಾಚಾಂ ಮನಸಾ ಚಾ ವಿಶೇಷಣಾ। ಜ್ಞಾನಿಜ್ಞಾನ ಪರಿಚ್ಛೇದ್ಯಾ ತ್ವಾಂ ವಂದೇ ಚೇಶ್ವರೀಪರಾಂ॥14॥ ಓಂ ನಮೋ ವಾಸುದೇವಾಯ ತಸ್ಮೈ ಭಗವಂತೇ ಸದಾ। ವ್ಯತಿರಿಕ್ತಂನಯಸ್ಯಾಸ್ತಿವ್ಯತಿರಿಕ್ತೋऽಖಿಲಸ್ಯಯಃ॥15॥

ಅವಿನಯಮಪನಯ

ಅವಿನಯಮಪನಯ ವಿಷ್ಣೋ ದಮಯ ಮನಃ ಶಮಯ ವಿಷಯಮೃಗತೃಷ್ಣಾಮ್ ಭೂತದಯಾಂ ವಿಸ್ತಾರಯ ತಾರಯ ಸಂಸಾರಸಾಗರತಃ॥1॥ ದಿವ್ಯಧುನೀಮಕರಂದೇ ಪರಿಮಲ ಪರಿಭೋಗಸಚ್ಚಿದಾನಂದೇ। ಶ್ರೀಪತಿಪದಾರ ವಿಂದೇ ಭವಭಯಖೇದಚ್ಛಿದೇ ವಂದೇ॥2॥ ಸತ್ಯಪಿ ಭೇದಾಪಗಮೇ ನಾಥ ತವಾಹಂ ನ ಮಾಮಕೀನಸ್ತ್ವಮ್। ಸಾಮುದ್ರೋ ಹಿ ತರಂಗಃ ಕ್ವಚನ ಸಮುದ್ರೋ ನ ತಾರಂಗಃ॥3॥ ಉದ್ಧೃತನಗ ನಗಭಿದನುಜ ದನುಜಕುಲಾಮಿತ್ರ ಮಿತ್ರಶಶಿದೃಷ್ಟೇ। ದೃಷ್ಟೇ ಭವತಿ ಪ್ರಭವತಿ ನ ಭವತಿ ಕಿಂ ಭವತಿರಸ್ಕಾರಃ॥4॥ ಮಸ್ತ್ಯಾದಿಭಿರವ ತಾರೈರವತಾವತಾ ಸದಾ ವಸುಧಾಮ್। ಪರಮೇಶ್ವರ ಪರಿಪಾಲ್ಯೋ ಭವತಾ ಭವತಾಪ ಭೀತೋऽಹಮ್॥5॥ ದಾಮೋದರ ಗುಣಮಂದಿರ ಸುಂದರವದನಾರವಿಂದ ಗೋವಿಂದ। ಭವಜಲಧಿಮಥನಮಂದರ ಪರಮಂ ದರಮಪನಯ ತ್ವಂ ಮೇ॥6॥ ನಾರಾಯಣ ಕರುಣಾಮಯ ಶರಣಂ ಕರವಾಣಿ ತವಕೌ ಚರಣೌ। ಇತಿ ಷಟ್ಪದೀ ಮದೀಯೇ ವದನಸರೋಜೇ ಸದಾ ವಸತು॥7॥

ವಿಷ್ಣೋ ಸೃಜಿಷ್ಣೋ ಗ್ರಸಿಷ್ಣೋ ವಿವಂದೇ ಕೃಷ್ಣ ಸದುಷ್ಣ ವಧಿಷ್ಣೋ ಸುದೃಷ್ಣೋ॥

ವಿಷ್ಣು ವಿಷ್ಣು ಎಂದರೆ ವಿಶ್ವವ್ಯಾಪಕನಾದ್ದರಿಂದ। ವಿಷ್ಣು ವೆನಿಸಿಕೊಂಡ ॥ ಕೇಶವಾಯ ನಮಃ।

ವಿಷ್ಣುತೀರ್ಥದಲಿ ವಿಷ್ಣುವಿದ್ದಾನೆ ರಾಮರಾಮ। ವಿಷ್ಣುತೀರ್ಥದಲಿ ಮಿಂದೆ
ವಿಷ್ಣುವಿನ ದಯದಿಂದೆ ರಾಮ ರಾಮ॥ ಕಾಶಿಯ ಹಾದಿಯಲಿ॥

ವಿಷ್ಣು ಚಕ್ರವು ಬಂದು। ಸುತ್ತಿ। ಮೂರು ಸೃಷ್ಟಿಯನೆಲ್ಲ ತಿರುಗಿ ಬೆನ್ನಟ್ಟಿ। ಕೃಷ್ಣಾ ಸಲಹೆಂದು ಮೊರೆಯಿಟ್ಟ
। ಮುನಿ। ಶ್ರೇಷ್ಟಗಿಷ್ಟರ ಮೇಲೆ ಅಭಯವ ಕೊಟ್ಟೆ ।।ಅಚ್ಯುತಾನಂತ॥

ಭ್ರಷ್ಟನೆನಿಸಬೇಡ ಕೃಷ್ಣ ಇಷ್ಟು ಮಾತ್ರ ಬೇಡಿಕೊಂಬೆ। ಶಿಷ್ಟರೊಡನೆ ಇಟ್ಟು ಕಷ್ಟು ಬಿಡಿಸೊ ವಿಷ್ಣುವೆ ॥ಈಶ ನಿನ್ನ॥

ಸೃಷ್ಟಿಗೆ ಕರ್ತನೆ ದುಷ್ಟಕಂಸನ ಕೊಂದು ಶಿಷ್ಟ ಪರಿಪಾಲನೆನಿಸಿದ।
ಶಿಷ್ಟಪರಿಪಾಲ ನೆನಿಸಿದ ಶ್ರೀಕೃಷ್ಣ। ವಿಷ್ಣುವೇ ನಮ್ಮ ಕುಲದೈವ ॥ರಂಗ ಬಾರೋ॥

ವಿಷ್ಣುಪಾದವ ನೋಡಿದೆ ರಾಗ: ಮಧ್ಯಮಾವತಿ

ವಿಷ್ಣುಪಾದವ ನೋಡಿದೆ ಎನ್ನಮನದಿಷ್ಟ ಫಲಗಳ ಬೇಡಿದೆ। ವಿಷ್ಣುಪಾದವ ನೋಡ್ಯಭೀಷ್ಟ ಫಲಗಳ ಬೇಡಿ ಶ್ರೇಷ್ಠಪಾದಕೆ ಶಿರವ ಮುಟ್ಟಿ ಸ್ಪಂದನೆ ಮಾಡಿ॥ಪ॥ ಗಂಗೆ ಹುಟ್ಟಿದ ಪಾದ ಇದು ನೋಡೇ ಗಯನ ಮೆಟ್ಟಿದ ಪಾದ। ತಂಗಿ

ದ್ರೌಪತಿದೇವಿ ಪತಿಗೆ ಸಾರಥಿಯಾಗಿ ಸಂಗ್ರಾಮದಿ ರಥವ ನೆಲಕ್ಕೊತಿ ಉಳುಹಿದ ಪಾದ॥1॥ ಧ್ವಜ ವಜ್ರಾಂಕುಶದ ಪಾದ ಶಂಖವು ಚಕ್ರ ಪದ್ಮ ರೇಖ್ಯುಳ್ಳಪಾದ। ಮಥುರೆಯಲಿ ಮಾವನ ಮಂಚಿಕೆಯಲ್ಹಾರಿ ವಧೆಯಮಾಡಿ ಮಾತೆ ಬದಿಲಿ ಬಂದ ಪಾದ॥2॥ ಬಲಿಯ ಶಿರ ತುಳಿದ ಪಾದ। ನೆಲನ ಮೂರಡಿಯ ಮಾಡಿದಪಾದ। ಶಿಲೆಯಾದಹಲ್ಯೆಯ ಉದ್ಧಾರವನು ಮಾಡಿ ಮಲತಾಯಿಯ ಮಾತಿಗರಣ್ಯ ತಿರುಗಿದ ಪಾದ॥3॥ ಖಗನ ಹೆಗಲೇರೋ ಪಾದ ಕಾಳಿ ಫಣಿ ಜಿಗಿದು ತುಳಿದಂಥ ಪಾದ। ಅಗರ ಕೇಸರಿ ಗಂಧದಿಂದ ಪೂಜಿತ ಪಾದ। ಕಾಲುಗುರಿನಲಿ ಬ್ರಹ್ಮಾಂಡ ಕಟಾಹ ಸೀಳಿದ ಪಾದ॥4॥ ಲಕ್ಷ್ಮೀಸೇವಿಸುವ ಪಾದ ಈ ಗಯದಿ ಸಾಕ್ಷಾತ್ ಹರಿಯ ಪಾದ। ಕುಕ್ಷಿಯಲಿ ತ್ರಿಜಗವಿಟ್ಟು ರಕ್ಷಿಸುವಂಥ। ಮೋಕ್ಷಪ್ರದ ಭೀಮೇಶಕೃಷ್ಣಮೂರುತಿ ಪಾದ॥5॥

ಇಕೋ ನೋಡು ಗದಾಧರನ — ರಾಗ: ಶಂಕರಾಭರಣ

ಇಕೋ ನೋಡು ಗದಾಧರನ ಚಿಕ್ಕ ಪಾದವ। ಸಿಕ್ಕಿತೇ ಶ್ರೀ ರಮಾಪತಿಯ ದಿವ್ಯಪಾದವ॥ಪ॥ ಗಯಾಸುರನ ತನುವ ಮೆಟ್ಟಿ ನಿಂತಪಾದವ। ಮಾಯಾಪತಿ ವಾಸುದೇವನ ದಿವ್ಯಪಾದವ। ಅಯಾಚಿತ ಭಕುತರೆಲ್ಲರ ಹರಸುವ ಪಾದವ। ವಾಯುವಂದಿತ ಸಿರಿಯರಸನ ದಿವ್ಯಪಾದವ॥1॥ ನಿತ್ಯದಲ್ಲಿ ಪಿಂಡವನ್ನು ತಿನ್ನುವ ಪಾದವ। ಭೃತ್ಯರೆಲ್ಲರ ಅಂಕದಲ್ಲಿ ಇಡುವ ಪಾದವ। ಸತ್ಯವಾಗಿ ಮೋಕ್ಷವನ್ನು ಕೊಡುವ ಪಾದವ। ಭೃತ್ಯರಾಗಿ ನಮಿಸುವವರ ಪೊರೆವ ಪಾದವ॥2॥ ಅಕ್ಷಯ ವಟದ ಬಳಿ ಇರುವ ದಿವ್ಯಪಾದವ। ಅಕ್ಷಿ ತೆರೆದು ನೋಡಬೇಕು ದಿವ್ಯಪಾದವ। ಕುಕ್ಷಿಗೆಂದು ಭಾದೆ ತರದ ದಿವ್ಯ ಪಾದವ। ಮೋಕ್ಷದಾತ ವರಾಹ ಹರಿ ವಿಠಲನ ದಿವ್ಯಪಾದವ॥3॥

ವಿಷ್ಣುಭಕ್ತಿ ಯೋಗ್ಯ

ವಿಷ್ಣುಭಕ್ತಿ ಯೋಗ್ಯ ತಾರತಮ್ಯಂಗಳು। ಸ್ಥಾವರ ಜಂಗಮರ ಮೊದಲು ಮಾಡಿ। ಅವರಿಂದ ಸರ್ವಗುಣಾಧಿಕರು ಅವರಿಂದ ದೇವಗಂಧರ್ವರು ಶತಗುಣಾಧಿಕರು। ಅವರಿಂದ ನೂರುಯೆಂಟುಮಂದಿ ಅಲ್ಲದೆ ನೂರುಕೋಟಿ ಋಷಿಗಳು ನೂರುಗುಣಾಧಿಕರು। ಅವರಿಂದ ಚಿರಾಖ್ಯ ನಾಮ ಪಿತೃಗಳು ಐವತ್ತು ಗುಣದಿಂದಧಿಕರು। ಅವರಿಂದ ಕೃಷ್ಣಭಕ್ತರಾದ ಅಪ್ಸರಸ್ತ್ರೀಯರು ಯೆರಡು ಗುಣಾಧಿಕರು। ಅವರಿಂದ ಅಜಾನಜ ದೇವತೆಯರು ಓಜಸರು ಎಂಭತ್ತು। ಋಷಿಗಳು ಮತ್ತು ಗಂಧರ್ವರು ತುಂಬುರರು ಶತ। ಊರ್ವಶಿ ಮೊದಲಾದ ಶತಸ್ಥರು। ಅಜಾನಜ ಯೆಂಬುವರು ಮತ್ತೆ ಅಗ್ನಿಪುತ್ರರಾದಾ ಕ್ರತ್ವಾದಿಗಳು ಅಜಾನಜದೇವ ಸಮರೂ। ಇವರು ಹದಿನಾರು ಸಹಸ್ರ ನೂರುಮಂದಿ ಸ್ತ್ರೀಯರು ಸರಿ ಗುರುಪುರಂದರ ವಿಠ್ಠಲಾ॥ಚ॥

ಭಾವಮುಲೋನಿ — ರಾಗ: ಶುದ್ಧಧನ್ಯಾಸಿ

ಭಾವಮುಲೋನಿ ಬಾಹ್ಯಮುನಂದುನು। ಗೋವಿಂದಗೋವಿಂದ ಯನಿ ಕೊಲುವವೋ ಮನಸಾ॥ಪ॥ ವಿಷ್ಣುನಿ ಮಹಿಮಲೇ ವಿಹಿತ ಕರ್ಮಮುಲು। ವಿಷ್ಣುನಿ ಪೊಗಡೆಡಿ ವೇದಂಬುಲು। ವಿಷ್ಣುಡೊಕ್ಕಡೇ ವಿಶ್ವಾಂತರಾತ್ಮುಡು। ವಿಷ್ಣುವು ವಿಷ್ಣುನಿ ವೆದಕವೋ ಮನಸಾ॥1॥ ಹರಿಯವತಾರಮುಲೇಯಖಿಲ ದೇವತುಲು। ಹರಿಲೋನಿವೇ ಬ್ರಹ್ಮಾಂಡಂಬುಲು। ಹರಿನಾಮಮುಲೇಅನ್ನ ಮಂತ್ರಮುಲು। ಹರಿ ಹರಿ ಹರಿ ಹರಿ ಯನವೋಮನಸಾ॥2॥ ಅಚ್ಯುತ್ಯಡೂಕುಡೇ ಆದಿಯು ಸತ್ಯಮು। ಅಚ್ಯುತುಡೇ ಯಸು ರಾಂತಕುಡು। ಅಚ್ಯುತುಡು ಶ್ರೀ ವೆಂಕಟಾದ್ರಿ ಮೀದ ನಿದೇ। ಅಚ್ಯುತ ಅಚ್ಯತ ಶರಣನವೋ ಮನಸಾ॥3॥

ಶ್ರೀ ವಿಷ್ಣು ಸ್ಮರಣೆಯಿಂ

ಶ್ರೀ ವಿಷ್ಣು ಸ್ಮರಣೆಯಿಂ ಸಾಧು ಸಂಸರ್ಗ। ಶ್ರೀ ವಿಷ್ಣು ಸ್ಮರಣೆಯೆಂಬುದೆ ಅಪವರ್ಗ। ಶ್ರೀ ವಿಷ್ಣು ಸ್ಮರಣೆಲಿ ಸದ್ಬುದ್ಧಿ ದೀರ್ಘ। ಶ್ರೀ ವಿಷ್ಣು ಸ್ಮರಣೆಗೆಚ್ಚರ ಬುಧವರ್ಗ॥ಪ॥ ಶೀತಲವಾಯ್ತು ಹಾಲಾಹಲ ಹರಗೆ। ಮಾತೆ ದ್ರೌಪದಿ ಲಜ್ಜೆ

ಕಾಯಿತು ಮರುಗೆ। ಪಾತಕಿ ಅಜಾಮಿಳನ ಪಾಪವು ಕರಗೆ। ಪೂತರಾಗ್ವರು ಸುಜನರು ಒಳಗೊರಗೆ॥1॥ ಸಿರಿ ಅರ್ಥಮಾಡಲಚ್ಚರವಾದ ಸ್ಮರಣೆ। ಪರಸೋದ್ವಾಪರಿಯೆಂಬುವ ಗುಹ್ಯಸ್ಮರಣೆ। ವಿರಿಂಚಿಗೆ ತೃಪ್ತಿಯಾಗದ ನಾಮಸ್ಮರಣೆ। ಉರಗೇಶನ ಜಿಹ್ವೆಗೆ ನಿಲುಕದ ಸ್ಮರಣೆ॥2॥ ತ್ಯಾಗ ಭೋಗ ಯೋಗ ಛಿದ್ರ ಮುಚ್ಚುವುದು। ಭೂಗಗನಸ್ಥರ ಪುಣ್ಯ ಹೆಚ್ಚುವುದು। ಕೂಗ್ಯಾಡಿ ಕುಣಿವರಾನಂದ ಫಲವಿದು। ಶ್ರೀಗಂಗಾಜನಕನ ತಂದು ತೋರುವುದು॥3॥ ಭೂಪ್ರದಕ್ಷಿಣೆ ತೀರ್ಥಯಾತ್ರೆಗೆ ಮಿಗಿಲು ಅ। ಸಂಪ್ರಜ್ಞಾತಸ್ಥರಿಗೆ ಹರಿಗೋಲು। ಸುಪ್ರಾಪ್ತ ಮುಕ್ತರುಂಬಮೃತ ಕಣಗಳು। ಶ್ರೀಪ್ರಾಣನಾಥನ ನಾಮಾವಳಿಗಳು॥4॥ ಸ್ವಾದನ್ನದೊಟ್ಟಿಲು ಹರಿನಾಮಸ್ಮರಣೆ। ಮಧ್ವಶಾಸ್ತ್ರಜ್ಞರ ವಚನಾಗ್ನಿಗೆ ಅರಣಿ। ಅದ್ವೈತ ಮತಧ್ವಾಂತ ಕ್ಷುದಿತ ಸತ್ತರಣಿ ಶ್ರೀ। ಮಧ್ವಿಷ್ಣು ಪ್ರಸನ್ವೆಂಕಟನ ಸ್ಮರಣೆ॥5॥

### ವಿಧಾತೃ ದೇವತೆಗಳು ವಿಷ್ಣುವಿನ ಹಿಂದೆ

ವಿಧಾತೃ ದೇವತೆಗಳು ವಿಷ್ಣುವಿನಹಿಂದೆ। ಇದಕೆ ತಪ್ಪಿದರೆ ನಾ ಫಣಿಪನ ಪಿಡಿವೆ॥ಪ॥ ಸಕಲ ತೀರ್ಥಗಳೆಲ್ಲ ಶಾಲಗ್ರಾಮದ ಹಿಂದೆ। ಪ್ರಕಟ ಗ್ರಂಥಗಳು ಭಾಗವತದ್ಹಿಂದೆ। ಸಕಲ ವೃಕ್ಷಗಳೆಲ್ಲ ಶ್ರೀತುಲಸಿಯ ಹಿಂದೆ। ಪ್ರಕಟ ಚೈತನ್ಯಗಳು ಲೋಹದ ಹಿಂದೆ॥1॥ ಮತಗಳೆಲ್ಲವು ಮಧ್ವಮತಸುಸಾರದ ಹಿಂದೆ। ಇತರ ವರ್ಣಗಳೆಲ್ಲ ವಿಪ್ರರಾಹಿಂದೆ। ವ್ರತಗಳೆಲ್ಲವು ಹರಿದಿನ ವ್ರತದ ಹಿಂದೆ। ಅತಿಶಯದ ದಾನಗಳು ಅನ್ನದಾನದ ಹಿಂದೆ॥2॥ ಉತ್ತಮ ಗುಣಗಳೆಲ್ಲ ಉದಾರ ಗುಣದ ಹಿಂದೆ। ಮತ್ತೆ ಕರ್ಮಂಗಳೆಲ್ಲ ಮಜ್ಜನದ ಹಿಂದೆ। ಕ್ಷಿತಿಯೊಳು ನಮ್ಮ ಪುರಂದರವಿಠ್ಠಲನ ಭಕ್ತವತ್ಸಲನೆಂಬ ಬಿರುದು ಮೆರೆವ ಹಿಂದೆ॥3॥

ಮಂಗಲಂ ಭಗವಾನ್ ವಿಷ್ಣು ಮಂಗಲಂ ಮಧುಸೂಧನ। ಮಂಗಲಂ ಪುಂಡರೀಕಾಕ್ಷಃ ಮಂಗಳಾಯತನಂ ಹರಿಃ॥



## 3. ಯುಗಾದಿ

### ಅಸ್ಯಾಂ ವೈ ನಿಂಬಪತ್ರಾಣಿ (ಯುಗಾದಿ-ಬೇವುಬೆಲ್ಲತಿನ್ನುವಾಗ)

ಅಸ್ಯಾಂ ವೈ ನಿಂಬಪತ್ರಾಣಿ ರಾಷ್ಯ ಸಂ ಸ್ಪೃಣುಯಾತ್ ತಿಥಿಂ।
ಶತಾಯುರ್ವಜ್ರ ದೇಹಾಯ ಸರ್ವಸಂಪತ್ಕರಾಯಚ।
ಸರ್ವಾರಿಷ್ಟ ವಿನಾಶಾಯ ನಿಂಬಕಂದಳ ಭಕ್ಷಣಂ॥

ಯುಗಯುಗಾದಿ ಕಳೆದರೂ

ಯುಗಯುಗಾದಿ ಕಳೆದರೂ। ಯುಗಾದಿ ಮರಳಿ ಬರುತಿದೆ। ಹೊಸ ವರುಷಕೆ ಹೊಸ ಹರುಷವ। ಹೊಸತು ಹೊಸತು ತರುತಿದೆ॥ ಹೊಂಗೆಹೂವ ತೊಂಗಲಲ್ಲಿ। ಭೃಂಗದ ಸಂಗೀತ ಕೇಳಿ। ಮತ್ತೆ ಕೇಳಿ ಬರುತಿದೆ॥ ಬೇವಿನ ಕಹಿ ಬಾಳಿನಲ್ಲಿ। ಹೂವಿನ ನರುಗಂಪು ಸೂಸಿ। ಜೀವ ಕಳೆಯ ತರುತಿದೆ॥ ಕಮ್ಮನೆ ಬಾಣಕ್ಕೆ ಸೋತು। ಜುಮ್ಮನೆ ಮಾಮರವ ಹೂತು। ಕಾಮಗಾಗಿ ಕಾದಿದೆ॥ ಸುಗ್ಗಿ ಸುಗ್ಗಿ ಸುಗ್ಗಿ ಎಂದು। ಹಿಗ್ಗಿ ಹಿಗ್ಗಿ ಗಿಣಿಯ ಸಾಲು। ತೋರಣದೊಳು ಕಾದಿದೆ॥ ವರುಷಕೊಂದು ಹೊಸತು ಜನ್ಮ। ಹರುಷಕೊಂದು ಹೊಸತು ನೆಲೆಯು। ಅಖಿಲ ಜೀವಜಾತಗೇ॥ ಒಂದೇ ಒಂದು ಜನ್ಮದಲ್ಲಿ। ಒಂದೆ ಬಾಲ್ಯ ಒಂದೆ ಹರಯ। ನಮಗದಷ್ಟೆ ಏತಕೆ॥ ನಿದ್ರೆಗೊಮ್ಮೆ ನಿತ್ಯ ಮರಣ। ಎದ್ದ ಸಲ ನವೀನ ಜನನ। ನಮಗೆ ಏಕೆ ಬಾರದೋ॥ ಎಲೆ ಸನತ್ಕುಮಾರ ದೇವ। ಎಲೆ ಸಾಹಸಿ ಚಿರಂಜೀವ। ನಿನಗೆ ಲೀಲೆ ಸೇರದೋ॥ ಯುಗಯುಗಾದಿ ಕಳೆದರೂ। ಯುಗಾದಿ ಮರಳಿ ಬರುತಿದೆ। ಹೊಸವರುಷಕೆ ಹೊಸ ಹರುಷವ। ಹೊಸತು ಹೊಸತು ತರುತಿದೆ। ನಮ್ಮನಷ್ಟೆ ಮರೆತಿದೆ॥

### ನವಯುಗಾದಿ ದಿನ ಬಂದಿಹುದು ರಾಗ: ಕಾನಡ

ನವಯುಗಾದಿ ದಿನ ಬಂದಿಹುದು। ಬೇವು ಬೆಲ್ಲಗಳ ಬೆರೆಸುತಲಿ॥ಪ॥ ಮಾವೆಲೆ ತೋರಣ ಕಟ್ಟುತಲಿ। ಗಂಗಾಸ್ನಾನವ ಮಾಡುತಲಿ। ವಿಧವಿಧವಸ್ತ್ರವ ಧರಿಸುತಲಿ। ಮನವನು ಹರುಷದಿ ನಲಿಯಿಸುವಾ॥1॥ ವರುಷದ ಮೊದಲಿಂದ ಕೊನೆವರೆಗೂ। ಕಹಿಸಿಹಿ ಅನುಭವ ಬರುತಿರಲಿ। ಹರಿಹರನಾಮವ ಭಜಿಸುತಲಿ। ಅರುಣ ಗಿರೀಶನ ಪ್ರಾರ್ಥಿಸುವ॥2॥ ಭಕ್ತಬಂಧುಗಳೆಲ್ಲ ಒಂದಾಗಿ। ಶಾರದದಾಸಿ ವಂದಿತನ ಸಡಗರದಿಂದ ಸ್ತುತಿಸುತಲಿ। ವರುಷವೆಲ್ಲಾ ನಿನ್ನ ಭಜಿಸುವ ಭಾಗ್ಯವ। ನೀಡೆಂದು ಪಾಡಿ ಬೇಡುವ॥3॥

### ಗುರುರಾಜ ದಯೆತೋರೋ

ಗುರುರಾಜ ದಯೆತೋರೋ ದಯ ತೋರೋ॥ಪ॥ ವಂದಿಪೆ ಬಂದಿತು ನೂತನ ವರ್ಷ। ಕರುಣಿಸು ನಿನ್ನಯ ಪಾದಸ್ಪರ್ಶ। ಅದುವೇ ಜೀವರಿಗಮೃತ ಸ್ಪರ್ಶ॥ಅ.ಪ॥ ಬರಲಿ ವರ್ಷ ತರುತ ಹರ್ಷ ತೋರುತ ಜಗಕಾದರ್ಶ। ಧರಣಿಯ ಜನರಿಗೆ ಸುಖದೋತ್ಕರ್ಷ॥1॥ ಧರ್ಮಕೆ ಜಯವು ಆಗಲೀ ಅಧರ್ಮದ ಕೊನೆಯು ಆಗಲೀ। ನಿರ್ಮಲ ಮನದಿಂ ಕರ್ಮವನೆಸಗುತ। ನೆಮ್ಮದಿಯಿಂ ದ್ವಿಜರ್ ಬಾಳಲೀ॥2॥ ಭಾರತವರ್ಷವು ಸುಖಶಾಂತಿಯ ಬೀಡಾಗಲೀ। ಪರಬಾಧೆಯು ಕೊನೆಗಾಣಲೀ। ವಿಶ್ವಪ್ರೇಮವು ಬೆಳೆಯಲೀ। ಆರ್ಯನಾರಿಯರು ಪತಿಸೇವಾರತರಾಗಲೀ। ಸರ್ವರಿಗೂ ಶುಭವಾಗಲೀ। ಜಯವಾಗಲೀ॥3॥ ನೂತನ ವರ್ಷದಿ ನೂತನೋತ್ಸವದಿ। ನೂತನ ಮಹಿಮೆಯ ತೋರಿಸೋ। ನೂತನ ಸೇವೆಯ ಕೈಗೊಳ್ಳುತ ಸನಾತನನುಗ್ರಹ ನೀಡಿಸೋ। ಭಕ್ತಜನರ ಮನದಿಷ್ಟವ ಸಲಿಸುತ। ಸಾತ್ವಿಕ ಭಾವನೆಮೂಡಿಸೋ। ನೂತನ ವರ್ಷಾಶಂಸನವಿದು। ಕಮಲೇಶನ ಪ್ರಿಯನೆಲಾಲಿಸೋ। ಪರಿಪಾಲಿಸೋ॥4॥

### ಯುಗಾದಿ ಬಂದಿತು ಹೇಗುರುವರನೀ

ಯುಗಾದಿ ಬಂದಿತು ಹೇಗುರುವರನೀ। ನಗಾರಿ ಯಂದದಿ ಮೆರೆಯುತ ಬಾರೋ। ಮೆರೆಯುತ ಬಾರೋ॥ಪ॥ ಭಾಗವತರು ನಿನ್ನಗಣಿತ ಮಹಿಮೆಯ। ರಾಗದಿ ಪಾಡುತ ಮಣಿಯುತ ಲಿಹರು॥ಅ.ಪ.॥ ರಾಘವೇಂದ್ರ ತವ ಪಾದದರ್ಶನದ। ಭಾಗ್ಯವ ಪಡೆಯಲು ಬಂದಿಹೆವಯ್ಯ। ಯೋಗಿವರ್ಯ ನಿನ್ನಡಿಗಳ ಸೇವೆಯ। ಬೇಗನೆ ಕರುಣಿಸು ಮೂಜಗ ವಂದ್ಯ॥1॥ ಅಂಗಕೆ ಪೂಸಲು ಪರಿಮಳ ತೈಲವು। ತುಂಗೆಯ ಶುಭ ಜಲ ವಣಿಮಾಡಿ। ಇಂಗಿತಜ್ಞಪೂಜಕ ಕಾದಿಹನೈ। ಮಂಗಳ ಮಜ್ಜನ ಪೀಠಕೆ ಬಾರೋ॥2॥ ರಂಗಿನಂಬರವ ಧರಿಸುತನೀ। ಶೃಂಗಾರದಾಸನಕೆ ದಯ ಮಾಡೋ। ಮಂಗಳಾಂಗಿಯರು ಆರತಿ ಎತ್ತಲು। ಸಂಗಡಿಗರ ಜೊತೆ ಬಂದಿಹರಯ್ಯ॥3॥ ಭಕ್ತರ ಅಪರಾಧಗಳನು ಕ್ಷಮಿಸಿ। ಭಕ್ತಿಯ ಉಪಹಾರವ ಸ್ವೀಕರಿಸಿ। ಪ್ರಾಕ್ತನ ಕಷ್ಟವ ಪರಿಹರಿಸಿ। ಸೂಕ್ತ ಶುಭಪಥವನೆಮಗೆ ತೋರಿಸಿ॥4॥ ಸಿಹಿ ನಿಜಭಕ್ತರಿಗೀಯುತ ಮುದದಿ। ಕಹಿ ದುರ್ಜನರಿಗೆ ನೀಡುತ ಭರದಿ। "ಸಿಹಿ ಕಹಿಗಳ ಸಮ್ಮಿಲನದ ದಿನದಿ"। ವಿಹಿತ ಮಂಗಳವ ಈಯುತ ಜವದಿ॥5॥ ಕರ್ಮಭೂಮಿಯಲಿ ನೀದಯದಿಂದಲಿ। ಧರ್ಮದಿ ಸುಜನರ ಕಾಯುತಲೀ। ನಿರ್ಮಲ ಮನದಿಂ ಪತಿಗಳ ಸೇವಿಪ। ಹೆಮ್ಮೆಯ ಸಾಧ್ವಿಯರನು ಪೊರೆಯುತಲಿ॥6॥ ಛತ್ರ ವ್ಯಜನ ಚಾಮರ ಬಿರುದಿಂದ। ಚಿತ್ತವ ಹರಿಸುವ ವಾದ್ಯಗಳಿಂದ। ತಜ್ಞರ ಮಂತ್ರದ ರವದಿಂದ। ಭಕ್ತರ ಸಲಹುತ ಉತ್ಸವದಿಂದ॥7॥ ದೇವ ದುಂದುಭಿಯು ತಾನ್ ಮೊಳಗೇ। ದೇವದಾಸಿಯರು ನರ್ತನ ಗೈಯೇ। ಕವಿ ಗಾಯಕರನುರಾಗದಿ ಪಾಡೇ। ದೇವೇಂದ್ರನು ವಿಪರೀತಕೆ ನಾಚೇ॥8॥ ಅಂಬರದಲಿ ಸುರಜನ ಬೆರಗಾಗಿ। ಸಂಭ್ರಮದಿಂ ಸುಮವರ್ಷವ ಗೈದು। ಕಂಬದಿ ಜಯ ಕಮಲೇಶನ ತೋರಿದ। ಪ್ರಭು ವೆಂದರಿಯುತ ಹರ್ಷಿಸುತಿರಲು॥9॥

### ಮಾವು ನಾವು ಬೇವು ನಾವು ರಾಗ: ಹಿಂದೂಸ್ಥಾನಿಕಾಫಿ

ಮಾವು ನಾವು ಬೇವು ನಾವು ನೋವು ನಲಿವು ನಮ್ಮದು। ಹೂವು ನಾವು ಹಸಿರು ನಾವು ಬೇವು ಬೆಲ್ಲ ನಮ್ಮವು॥ಪ॥

ಹೊಸದು ವರುಷ ಹೊಸದು ಹರುಷ ಹೊಸದು ಬಯಕೆ ನಮ್ಮವು। ತಳಿರ ತುಂಬಿದಾಸೆಯಲ್ಲಿ ಹರಕೆಯಲ್ಲಿ ನಮ್ಮವು॥ಅ.ಪ॥ ಬಂಜೆ ನೆಲಕೆ ನೀರನೂಡಿ ಹೊಳೆಯ ದಿಕ್ಕು ಬದಲಿಸಿ। ಕಾಡ ಕಡಿದು ದಾರಿಮಾಡಿ ಬೆಟ್ಟ ಸಾಲ ಕದಲಿಸಿ॥1॥ ಹುಟ್ಟು ಬೆಂಕಿ ನಮ್ಮ ತಾಯಿ ಉಟ್ಟ ಸೀರೆ ಸಾಗರ। ಅವಳ ಮುಗಿಲ ತುರುಬಿನಲ್ಲಿ ಹೆಡೆಯ ತೆಗೆದ ನಾಗರ॥2॥ ಅವಳ ಪ್ರೀತಿ ನಮಗೆ ದೀಪ ಅವಳ ಕಣ್ಣ ಕಾವಲು। ಬಿಸಿಲ ತಾಪ ಮಳೆಯ ಕೋಪ ಸಂತೋಷವೆ ಆಗಲೂ॥3॥ ಹೆಜ್ಜೆಗೊಂದು ಹೊಸ ಯುಗಾದಿ ಚೆಲುವು ನಮ್ಮ ಜೀವನ। ನಮ್ಮ ಹಾದಿಯೋ ಅನಾದಿ ಪಯಣವೆಲ್ಲಾ ಪಾವನ॥4॥

ವರ್ಷದಲ್ಲೊಂದಿವ್ಸ

ವರ್ಷದಲ್ಲೊಂದಿವ್ಸ ಹರ್ಷದಾಗಿದ್ದಾಗ ತಿಂತಾರ್ಬೇವು ಬೆಲ್ಲ। ಬೇವು ಬೆಲ್ಲ ಸಮ್ನಾಗಿದ್ದಾಗ ನೋವೇ ಕಾಣಕ್ಕಿಲ್ಲ॥ ಬೈಗು ಬೆಳ್ಗೂ ಹೋಗ್‌ತಿದ್ರೂನೂ ಜೀವ್ನಾ ಎಲ್ಲಾ ಬೇವು। ಸಾಯೋಗಂಟ ದುಡ್ಕೊಂಡ್ತಿಂದ್ರೂ ತಪ್ಪಾಕಿಲ್ಲ ನೋವು॥ ಕುಡಿದ್ ನೀರು ಒಸಿ ಅಳ್ಳಾಡ್ದಂಗೆ ಕುಂತಿದ್ದೋನ್ಗೆ ಬೆಲ್ಲ। ಏನೇ ಆದ್ರೂ ಬರೋ ಸುಖ ತಪ್ಪೋ ಹಂಗೇನಿಲ್ಲ॥ ಹುಟ್ಟಿದ್ಬೇವು ಬೆಳ್ದಿದ್ ಬೇವು ತಿಂತ್ತಿರೋದು ಬೇವು। ಬೆಲ್ಲ ಹಂಚ್ಕೊಂಡ್ ತಿನ್ನೋ ಸುಖಕ್ಕಿಂತ ಬೇರೆ ಏನು ಇಲ್ಲ॥

ಈ ಜೀವನ ಬೇವು ಬೆಲ್ಲ

ಈ ಜೀವನ ಬೇವು ಬೆಲ್ಲ ಬಲ್ಲಾತಗೆ ನೋವೇ ಇಲ್ಲ। ಬಾ ಧೀರರಿಗೇ ಈ ಕಾಲ ನಿನಗುಂಟು ಜಯಾ ತೆರೆದಾ ಹೃದಯ ಬಳಿಕೆಲ್ಲೀ ಭಯಾ॥ಪ॥ ನಿಂತೀಯೇ ಜೋಕೆ ಹಿಂದೆ ಸಾಗೋಣ ಸಾರಿ ಮುಂದೆ। ಅಲ್ಲೇ ನಿನ್ನಾ ಸಂತೋಷ ಕಾಯಕವೇ ಕೈಲಾಸ॥ ಅಳಲೇ ಇರಲಿ ಗೆಲುವೇ ಬರಲಿ ಸುಖವೇ ಬಾಳಲ್ಲಿ ಹೊನ್ನಾಗಲೀ॥1॥ ಇಂದೇನೋ ಏಕೋ ಭೀತಿ ಬೇರೊಂದೋ ನಾಳೆ ರೀತಿ। ಕೈಗೊಳ್ಳೋ ಒಂದೇ ಧ್ಯೇಯಾ ಪಾಲಿಸ ಬೇಕೈ ನ್ಯಾಯಾ ಜಗವೇ ನಗಲಿ ಯಮನೇ ಬರಲಿ, ಒಲವೇ ನಿನ್ನಲ್ಲಿ ಬೇರೂರಲಿ॥2॥

ಹಸುರಿನ ಬಸಿರಲಿ — ರಾಗ: ಕಲ್ಯಾಣಿ

ಹಸುರಿನ ಬಸಿರಲಿ ಹಸಹಸನಾದ। ಹೊಸ ಯುಗಾದಿ ನಮಗಾಗಿ। ಮಾವೂ ಬೇವಿನ ಎಳೆ ಚಿಗುರು। ಬೇವೂ ಮಾವು ಹೂವಿನ ಕಂಪು। ಕಣ್ಣಿಗೆ ಇಂಪು ನೀಡುವುದೂ ಅದು। ಮನಸಿಗೆ ಆನಂದವಾಗುವುದು॥1॥ ಹಬ್ಬದ ಸವಿನೆನಪು ಬೇವೂ ಬೆಲ್ಲ। ಮಾತೃ ಪ್ರೇಮವನ್ನು ಕಾಣಲು ಹಬ್ಬದ ಸಿಹಿಊಟ ಸರ್ವರಿಗೂ। ಪ್ರೇಮದ ಸ್ನೇಹವನ್ನು ಬೆಳೆಸಲು॥2॥ ಚೈತ್ರ ವಸಂತ ಋತುವಿನಲಿ। ಬೇವೂಬೆಲ್ಲದ ಭಾಗ್ಯವೂ ನಮಗೆ। ಮರಳಿ ಮರಳಿ ನೀಡಲಿ ಎಂದು। ಯುಗಾದಿ ಹಬ್ಬವು ಸದಾ ಬರಲಿ ಎಂದು॥3॥



## 4. ಮತ್ಸ್ಯಜಯಂತಿ

ಶ್ರೀ ಕೃಷ್ಣಾ ಎಂತೆಂದರೊಮ್ಮೆ (ಮತ್ಸ್ಯ ಸ್ತುತಿ)

ಶ್ರೀ ಕೃಷ್ಣಾ ಎಂತೆಂದರೊಮ್ಮೆ। ನೆನೆದರೆ ಮರುಳೆ ದುಃಖ ಉಂಟೇನೆ ಮನಸಾ। ಇನ್ನಾರಾಜ್ಞಾನದಿಂದ। ಶ್ರೀಹರಿ ಗುರುಚರಣ। ಸೇವಿಸೊ ಸರ್ವಕಾಲ। ಶ್ರೀ ಕೃಷ್ಣಾ ಸೃಷ್ಟಿಕರ್ತ। ಕಮಲಜಭವನ। ಪುಟ್ಟಿಸಿ ಮಾಡುತಿದ್ದ। ಇನ್ನೊಬ್ಬ ನಾಮನ್ಯಾರೈ। ವಿಜಯನೆಂದು ತಾನೊಬ್ಬನೇ ಕರಸಿಕೊಂಬ। ತಾನೇ ಮೀನಾಗಿ ಬಂದು। ಪ್ರಳಯಜಲದಲಿ। ಕೋಡಿಗೆ ಅಣೆಕಟ್ಟಿದಂತೆ। ತನ್ನ ಚರ್ಚನೆಯಿಂ। ವಿಶ್ವರೂಪ ಮನಮುನಿಗಳಿಗೆ। ತೋರಿಸಿ ಕ್ರೀಡೆಯಿಂದ। ಕಾಯ್ದೆಯೋ ನಮ್ಮೆಜ್ಞಗಳನು। ಭಕ್ತವತ್ಸಲಸ್ವಾಮಿ। ಇತಿ ಶ್ರೀ। ಮತ್ಸ್ಯಮೂರ್ತಿ ಸ್ತೋತ್ರಂ ಸಂಪೂರ್ಣಂ॥

ಮತ್ಸ್ಯಾವತಾರ ಮಾಮವ ರಾಗ: ಭಿನ್ನಪಂಚಮ-ಆದಿತಾಳ

ಮತ್ಸ್ಯಾವತಾರ ಮಾಮವ ಮಧುಸೂದನ ಗುರುಗುಹಾದಿನುತ॥ಪ॥ ಮತ್ಸ್ಯಕೂರ್ಮಾದಿ ದಶಾವತಾರ ಮಾಧುರ್ಯ ಸುಧಾಕರ ದಯಾಕರ॥ಅ.ಪ॥ ವತ್ಸಲ ವಿವಾಹ ಕಾರಣ ಶುಭಕರ ಶಾರ್ಙ್ಗಧರ ಭಿನ್ನ ಪಂಚಮ ಪ್ರಿಯಕರ॥ಚ॥



## 5. ಶ್ರೀರಾಮನವಮಿ

ಮೇಲುಕೋ ದಯಾನಿಧೀ ರಾಗ: ಸೌರಾಷ್ಟ್ರ-ರೂಪಕತಾಳ

ಮೇಲುಕೋ ದಯಾನಿಧೀ - ಮೇಲು ಕೋ ದಾಶರಥೀ॥ಪ॥ ಮೇಲು ಕೋ ದಯಾನಿಧೀ- ಮಿತ್ರೋ ದಯಮೌ ವೇಳ॥ಅ.ಪ.॥ ವೆನ್ನಪಾಲು ಬಂಗಾರುಗಿನ್ನೆಲೋನೆ ನುಂಚಿನಾಮ। ತಿನ್ನಗ ನಾರಗಿಂಚಿ ತೇಟ-ಕನ್ನುಲತೋ ನನ್ನುಬ್ರೋವ॥1॥ ನಾರದಾದಿ ಮುನುರು ಸುರುಲು ವಾರಿಜಭವುಡಿಂದು। ಕಳಾಧರುಡು ನೀ ಸನ್ನಿಧಿಲೋ ಕೋರಿ ಕೊಲುವಗಾಚಿನಾರು॥2॥ ರಾಜ ರಾಜಾಧಿ ದಿಗ್ರಾಜುಲ್ಲೆಲ್ಲ ವಚ್ಚಿನಾರು। ರಾಜ ನೀತಿ ತೆಲಿಯ ತ್ಯಾಗರಾಜವಿನುತ ನನ್ನಬ್ರೋವ ॥3॥

ಮೇಲುಕೋವಯ್ಯ ರಾಗ: ಭೌಳಿ-ಝಂಪೆತಾಳ

ಮೇಲುಕೋವಯ್ಯ ಮಮ್ಮೇಲುಕೋ ರಾಮ॥ಪ॥ ಮೇಲೈನ ಸೀತಾ ಸಮೇತ ನಾ ಭಾಗ್ಯಮಾ ॥ಅ.ಪ॥ ನಾರದಾದುಲು ನಿನ್ನು ಕೋರಿ ನೀ ಮಹಿಮಲ ವರಿಗಾ ಪಾಡು ಚುನ್ನಾರಿ ಪುಡು ತೆಲ್ಲ ವಾರಗಾ ವಚ್ಚಿನದಿ ಶ್ರೀರಾಮ ನವನೀತ ಕ್ಷೀರಮುಲು ಬಾಗುಗ ನಾರಗಿಂಪನು ವೇಗ॥1॥ ಫಣಿಶಯನ ಯನಿಮಿಷರಮಣುಲೂಡಿಗಮು ಸೇಯ। ಅಣುಕುವಗ ನಿಂಡಾರು ಪ್ರಣತಿ ಜೇಸೆದರು ಮಣಿಮಯಾ ಭರಣುತಾಯಣಿಮಾದು ಲೀಡು ದೀಪಮಣುಲ ತೆಲಪಾಯನು ತರಣಿವಂಶ ವರತಿಲಕ॥2॥ರಾಜ ರಾಜೇಶ್ವರ ಭರಾಜಮುಖ ಸಾಕೇತರಾಜ ಸದ್ಗುಣ ತ್ಯಾಗ ರಾಜನುತ ಚರಣ। ರಾಜನ್ಯ ವಿಬುಧಗಣ ರಾಜಾದಲೆಲ್ಲ ನಿನು ಪೂಜಿಂಪ ಗಾಚಿನಾರೀ ಜಗಮು ಪಾಲಿಂಪ ॥3॥

ಬ್ರಹ್ಮಾದಿಗಳು ಕ್ಷೀರಸಾಗರಕೆ (ಲಾಲಿ) ರಾಗ: ಕುರಂಜಿ

ಬ್ರಹ್ಮಾದಿಗಳು ಕ್ಷೀರಸಾಗರಕೆ ಪೋಗಿ। ಲಕ್ಷ್ಮೀನಾರಾಯಣರ ಪಾದಕ್ಕೆ ಎರಗಿ। ಭೂಭಾರಹರಣ ಮಾಡಬೇಕಾಗಿ। ಇಳೆಯೊಳು ಮನುಜನ ಅವತಾರನಾಗಿ॥ಪ॥ಲಾಲಿ॥ ಸೂರ್ಯ ವಂಶಜರಾಜ ಅರಸು ದಶರಥನು। ಸಂತಾನವಿಲ್ಲೆಂದು ಚಿಂತಿಸಿದ ಕಾರಣ। ಆಶ್ರಮದಿಂದಲಿ ವಸಿಷ್ಠರನೆ ಕರೆಸಿ। ಪುತ್ರಕಾಮೇಷ್ಟಿ ಎಂಬ ಯಜ್ಞವನು ಮಾಡಿದ॥1॥ ಚೈತ್ರ ಶುದ್ಧ ನವಮಿ ಬುಧವಾರದಲ್ಲೀ। ಶ್ರೀರಾಮ ನುದಿಸಿದನು ದಶರಥನಲ್ಲಿ। ಸಂತೋಷವಾಯಿತು ಅಯೋಧ್ಯೆಯಲ್ಲೀ। ಸೂರ್ಯಚಂದ್ರಾದಿಗಳು ಉದಿಸಿದರಲ್ಲಿ॥2॥ ಜಾತಕರ್ಮವ ಮಾಡಿ ಬ್ರಾಹ್ಮಣರ ಕರಸೀ। ಪುಣ್ಯಾವರ್ಚನೆ ಮಾಡಿ ಮಂತ್ರ ಉಪಚರಿಸಿ। ಗುರು ದಕ್ಷಿಣೆ ಕೊಟ್ಟು ಬ್ರಾಹ್ಮಣರ ದಣಿಸೀ। ಸುರರು ಪುಷ್ಪಗಳಿಂದ ಮಳೆಯನ್ನು ಸುರಿಸೀ॥3॥ ನಾಮಕರಣವ ಮಾಡಿ ಸಂತೋಷಪಡುತ। ಶ್ರೀ ರಾಮಚಂದ್ರನ ಹೆಸರನ್ನು ಇಡುತ। ನಾಲ್ಕುವೇದಗಳೆಂಬ ಮಂತ್ರವನೆ ಪಠಿಸುತ್ತ। ಪುರಂದರಾವಿಠಲನ್ನ ಪಾಡಿ ತೂಗಿದರು॥4॥

ಸಂಕರಿಯುಂ ಲಕ್ಷ್ಮಿಯುಂ (ತಮಿಳು) ರಾಗ: ಕಾಂಬೋಧಿ

ಸಂಕರಿಯುಂ ಲಕ್ಷ್ಮಿಯುಂ ಸರಸ್ವತಿಯಾಳುಂ ಮಂಗಳಮಾಯ್ ಪೂಜೈಸ್ಸೈದು ಮನಂ ಮಗಿಂಳ್‌ದಾರ್। ಭೂಮಿ ತನ್ನಿಲ್ ದಶರಥರು ಪುಣ್ಣಿಯಂ ಸೈದು ಪುತ್ತಿರಕಾಮೇಷ್ಟಿ ಯಾಗಂಗಳ್ ಸೈದಾರ್। ದೇವರ್ಗಳುಂ ಮುನಿವರ್ಗಳುಂ ಸಿತ್ತಂ ಇರಂಗಿ ಪಾಯಸತ್ತೈ ಕೊಣರ್‌ಂದು ಕುಡುತ್ತಾರ್ ಮನ್ನರಿಡತ್ತಿಲ್ ಪಾಯಸತ್ತೈ ಕೈಯಿಲ್ ಎಡುತ್ತ ದಶರಥ ರಾಜನ್ ದೇವಿಯರ್‌ಗಳ್ ಮೂವರುಕ್ಕುಂ ಪಗಿರ್‌ಂದು ಕೊಡುತ್ತಾರ್। ವೇದ ವಶಿಷ್ಠ ಸಾದಿಯಾಗಂ ವಿಳಂಗ ದೇವಿಯೋಡೆ

ತಿರುವೈಟ್ರಿಲ್ ಅವದರಿತ್ತಾರ್। ದೇವಿಯೊಡ ವೈಟ್ರಿಲ್ ಮಾಯನ್ ಜನಿತ್ತ ಪಿರಗು ಮದಿ ಮುಗಂಗಳ್ ತಾನ್ ವೆಳುತ್ತು ವಾಂದಿಯುಂ ಸೈದು ಮಾದಂ ಒನ್ನುಂ, ರಂಡು, ಮೂನು ಮಸಕ್ಕೆಯುಂ ಸೈದು ಕಂಡ ಇಡತ್ತಿಲ್ ಪಳ್ಳಿಕೊಂಡಾರ್ ಪೈಂಗಿಳಿಮಾರ್ಗಳ್। ಎನ್ನ ವೇಣುಂ ಏದು ವೇಣುಂ ಎನ್ರು ತಾಯ್ ಕೇಟ್ಕ ತಲೈ ಕುನಿಂದು ಪುನ ಸಿರಿಪ್ಪುಡನ್ ಬದಿಲ್ ಉರೈಕ್ಕಾಮಲ್ ಪುಟ್ಟು ವಡೈ ಪೊಂಗಲ್ ವೇಣುಂ ಒಬ್ಬಟ್ಟು ವೇಣುಂ, ಎಳ್ಳು ಮಿಳಗಾಯ್ ಪೊಡಿ ಇಡ್ಲಿ ವೇಣುಂ। ಸುಡಸುಡ ದೋಸೈ ವೇಣುಂ, ಸುಂಡಕ್ಕಾಯ್ ವೇಣುಂ, ಮುರುಕ್ಕು ತೇಂಗುಳಲ್ ವೇಣುಂ। ಸೀಡೆಯುಂ ವೇಣುಂ, ಪೋಗವರ ತಿಂಗ ಒರು ಪೊರಿಕೊಳ್ಳು ವೇಣುಂ ಅಳ್ಳಿ ಅಳ್ಳಿ ತಿಂಗ ಒರು ಅವಲ್ ವೆಲ್ಲಂ ವೇಣುಂ। ಅಡಿನಾಕ್ಕು ತ್ತಿತ್ತಿಕ್ಯ ಒರು ಅದಿರಸಂ ವೇಣುಂ। ರಸಿಚ್ಚಿ ಸಾಪ್ಪಿಡ ಒರು ತಿರಟ್ಟಿಪಾಲ್ ವೇಣುಂ। ಓಮಪುಡಿ, ಕಾರಾಬುಂದಿ, ಒಕ್ಕಾರ್ ವೇಣು। ತವಲಡೈ, ಕೊಳುಕಟ್ಟೈ ಉಪ್ಪುಮಾ ವೇಣುಂ। ಲಡ್ಡು ಜೀಲೇಬಿವೇಣುಂ, ಮೈಸೂರುಪಾಕು ವೇಣು। ಗುಂಜಾಲಾಡು, ಪದರ್ ಪೇಣಿ, ಅಲ್ವಾವುಂ ವೇಣುಂ। ತೇಂಗಾಯ್ ಸಾದಾಂ, ಮಾಂಗಾಯ್ ಸಾದಂ, ಎಲುಮಿಚ್ಚೈ ಸಾದಂ, ಸಾಂಬಾರ್ ಸಾದಂ ಪುಳಿಯಂ ಸಾದಂ ಸಕ್ಕರೈ ಪೊಂಗಲುಂ ವೇಣು। ಸುಡು ಸುಡ ಪರುಪ್ಪು ಸಾದಂ ಒರುಕುತ್ತು ವೇಣುಂ। ಆರಿನ ಸಾದತ್ತಿಲ್ ಒರು ಅರೈಕುತ್ತು ವೇಣುಂ। ಫಲಮಿದಮಾಯ್ ಕೂಟ್ಟುಗಳುಂ ಪಾಂಗುಡನ್ ವೇಣುಂ। ಕಾರಕತ್ತಿರಿಕ್ಕಾಯ್ ಕರಿಸಮೈಕ್ಯಣುಂ, ಪುಳಿಚ್ಚ ಸಾದತ್ತುಕ್ಕೊರು ಮೋರ್ ಮಿಳಗಾಯುಂ, ಪುಳಿಕ್ಯಾದ ಸಾತ್ತುಕ್ಕೊರು ಮಾಂಗಾಯುಂ ವೇಣುಂ। ಇದಮಾನಸಾತ್ತುಕ್ಕೊರು ಎಲುಮಿಚ್ಚೈ ಕಾಯುಂ, ನಲಮಾನಸಾತ್ತುಕ್ಕೊರು ನಾರ್ತಂಗಾಯ್ ವೇಣುಂ। ಎಣ್ಣೈ ಪಳೆಯ ದುಕ್ಕು ಮಿಳಗಾಯ್ ಪೊಡಿ ವೇಣುಂ। ಎಣ್ಣೆಯಿಲೇ ಪೊರುಚ್ಚೆಡುತ್ತ ವತ್ತಲ್ ವಡಾಂ ವೇಣುಂ। ನೈಯಿಲೇ ಪೊರಿತ್ತೆಡುತ್ತ ತಳುವಡಾಂ ವೇಣುಂ। ಕಾವೇರಿ ನಿಲಾವಿಲೇ ಸಾಪಿಡ ವೇಣುಂ। ವೆಟ್ಟು ವೆಟ್ಟಾಯ್ ಪಾಕ್ಕು ವೇಣುಂ। ವೆತ್ತಿಲೈ ವೇಣುಂ, ಏಲಂ, ಗ್ರಾಂಬು ವೇಣುಂ। ಜಾದಿಕ್ಕಾಯ್ ವೇಣುಂ, ಜಾದಿಪತ್ರಿ, ವಾಲ್ ವಿಳಗು ಲವಂಗಮುಂ ವೇಣುಂ। ಮದವುಲೆ ವೆಂದೆಡುತ್ತ ಮೂನುದು ವೇಣುಂ। ವೇಣದೆಲ್ಲಾಂ ಸೈದುತರ ತಾಯಾರುಂ ವೇಣುಂ, ಕೇಟ್ಟದೆಲ್ಲಾ ವಾಂಗಿತರ ತಂದೆಯುಂ ವೇಣುಂ। ಅಳುಕ್ಕು ತಲೈ ತೇಚ್ಚಿವಿಡ ಅಕ್ಕಾವುಂ ವೇಣುಂ, ಸಿಕ್ಕುತಲೈ ಎಡುತ್ತವಿಡ ಸಿತ್ತಿಯುಂ ವೇಣುಂ। ಮಡಿಪೊಡವೈ ಕೊಂಡುವೈಕ್ಯ ಮನ್ನಿಯುಂ ವೇಣುಂ, ಮಂಜಲ್ ಅರೈತ್ತುತರ ಮಾಮಿಯುಂ ವೇಣುಂ। ಏಳಾಮಾದಂ ಪಿರಂದಲುಡನ್ ಮನ್ನರುಂವಂದು ನಲ್ಲದೋರ್ ನಾಳ್ ಪಾರ್ತು ವಸಿಷ್ಠರ್ ಕಾಪಿಟ್ಟರ್। ಪೈಂಗಿಳಿಮಾರ್ ನಾತ್ತನಾರುಂ ಮಲ್ಲಿ ಮುಲ್ಲೈ ಮರುಉಡನೆ ಪೂವುಂ ಸೂಟ್ಟಿನರ್। ಎಟ್ಟಾಮಾದಂ ಪಿರಂದವುಡನೆ ದಶರಥರಾಜನ್ ನಲ್ಲದೋರ್ ಪೌರ್ಣಮಿಯಿಲ್ ಸೀಮಂದಂ ಸೈದಾರ್। ಒಂಬದಾಮಾದಂ ಪಿರಂದವುಡನೇ ಅತ್ತೆಯುಂ ವಂದು ಅಪ್ಪಂ, ಕೊಳು ಕಟ್ಟೈ ಸಮೈತ್ತು ಕಟ್ಟಿನಾಳ್। ಪತ್ತಾಮಾದಂ ಪಿರಂದವುಡನೇ ಪಾಟ್ಟಿಯುಂ ವಂದು ಅಳಗಾದ ಕೂಡುತ್ತಿಲೇ। ಅರೆಯುಂ ಕಟ್ಟಿನಾಳ್ ಎಟ್ಟು ರಂಡು ಪತ್ತುಮಾದಂ ತೀರಸುಮಂದು ಪೆತ್ತಾಳೇ ಬಾಲಕನ್ನೈ ಮುತ್ತು ಮುತ್ತಾಗ। ಅಮ್ಮತಯೋಗ ನವಮಿ ತಿಥಿ ಪುನರ್ ಪೂಸ ನಕ್ಷತ್ತಿರತ್ತಿಲ್ ಅಮ್ಮತಯೋಗದ ನಿಲ್‌ವಂದು ರಾಮರ್ ಪಿರಂದಾರ್। ರಾಮರ್ ಪಿರಂದಾರ್ ಪಿನ್ರುಮನ್ನರ್ ಮಗಿಂಳ್‌ದು ಗಂಗೈತನ್ನಿಲ್ ತೀರ್ಥಮಾಡಿ ಇನಿಪ್ಪುವಳಂಗಿನರ್। ರಾರಿರಾರೋ ರಾರಿರಾರೋ ರಾರಿರಾರಾರೋ। ಆರಿರಾರಿ ರಾರಿರಾರಿ ರಾರಿರಾರಿರಾರಿರೋ॥

ಉದಯವಾದನು ರಾಮ

ಉದಯವಾದನು ರಾಮ। ಮುದದಿಂದ ಕೌಸಲ್ಯ। ಉದರಾದಿ ದಶರಥನ ಸುಕೃತ ಫಲದಿಂದ॥ಪ॥ ಪದುಮ ನಾಭನು ತನ್ನ ಪಾದ ಭಜಿಪರನ್ನು। ಹದುಳಾದಿಂ ಪೊರೆಯಲೂ। ಪೊಡವಿಯೊಳಗೆ ತಾನು ॥ಅ.ಪ.॥ ಖರ ದೂಷಣಾದಿ ರಾಕ್ಷಸರು ಕ್ರೋಧದಳಂದು ಸುರನಿಕರವ ಹಿಂಸೆ। ಗೊಳಿಸುತಲಿರಲೂ। ಹರಿಹರ ಮೊದಲಾದ ಅಮರಾನಿಕರವೆಲ್ಲಾ। ಕರುಣಾಸಾಗರ ನಿನ್ನ। ಚರಣಾ ಮೊರೆ ಹೋಗಲಾಗ-ತರಣಿವಂಶಜನಾದ ದಶರಥಗೇ। ಪೂರ್ವದಲಿ ತಾನೊಲಿದು ಕೊಟ್ಟಿದ್ದ ವರವ। ಈ ಧರೆಗೆ। ಸಿರಿಯರಸ ಬರಲಾ। ಮುನಿವರರ। ಮನನಲಿವು ಪಿರಿದಾಗೇ। ರಕ್ಕಸರ ಜಯಸಿರಿ। ಇರಿದು ಹರುಷವು ಕುಂದುತಾ ಪೋಗೇ॥ ವರತಪೋನಿಧಿ ಯಜ್ಞ ಪೊರೆಯಲು। ತರುಣಿ ಶಾಪವ ಹರಿಸಲೋಸುಗ। ಸುರ ನದೀ

ಪಿತನು ದಯವಾದನು। ಸುರರ ಭಿನ್ನಹ ಕೇಳಿ ಮುದದಿಂ ವರ ಚೈತ್ರ ಶುದ್ಧ ನವಮೀ। ಬುಧುವಾರದಿ। ತಾರಾ ಪುನರ್ವಸು ತುದಿಯ ಪಾದದಲೀ। ಪರಮೋಚ್ಚ ಭಾಗದ। ಕಟಕಲಗ್ನದಲ್ಲಿ। ಹರಿಯು ಅವತರಿಸಿದಾ। ಧರೆಯೊಳಗುದಿಸಲು। ಶರಧಿಗಳು ಮೇಲುಕ್ಕಿ ಭೋರ್ಗರಿಸೇ। ಆ ವೇಳೆ ಧಾರುಣೀ ತರುಣೀ। ತಾ ಮನದಲ್ಲಿ ಸಂಭ್ರಮಿಸೇ। ಸಂತೋಷದಲಿ ಸುರನಿಕರ। ಪುಷ್ಪದ ವೃಷ್ಟಿಯನು ಸುರಿಸೇ। ಧರೆಯಮರ ಗಣಗಳು ನಲಿದು ನರ್ತನವಾಡುತಲಿ। ಸ್ಮರಿಸೆ ಧರಣಿ ಪತಿ ದಶರಥನು। ಹರುಷದ ಕಡಲೊಳಗೆ ಓಲಾಡುತಿರಲಾ। ಹರಿಯು ಅವತಾರ ಮಾಡಿ ಜನಿಸಿದ ಧರೆಯ ಭಾರವನಿಳುಹಲೋಸುಗ।।2।। ಮುನಿಪನ ಮತದಿಂದ ಜನಕಾನ ಪುರಿ ಸೇರಿ। ಘನಮಾದ ಹರಧನುವನು ತಾ ಮುರಿದೂ। ವನಜಾಕ್ಷಿ ಸೀತಾಕರ ಗ್ರಹಣವ ತಾ ಮಾಡಿ। ಇನವಂಶ ತಿಲಕನಾಯೋಧ್ಯೆಗೆ ಬಿಜಯಂ ಮಾಡೆ। ಜನಪತಿಯು ತನಯಗೆ ಪಟ್ಟವನು ಮಾಡೆ। ಕ್ರೋಧದಲಿ ಕೈಕಾಸುದತಿ। ಬೇಡೆ ಸುತನದನು ತಡಮಾಡದೇ। ಕಾನನಕೆ ಜಾಯಾ ಸಹಿತ ಪೊರಟನು ಲಕ್ಷ್ಮಣನ ಕೂಡೆ। ರಾವಣನು ಮಾಯದಿ ಜನಕಜೆಯ ಕದ್ದೋಯ್ದುತಾ ನೋಡೇ। ಇನಸುತನ ಸಖ್ಯದೊಳು ದುರ್ಗಮ ವನ ನಿಧಿಯನುತ್ತರಿಸಿ। ದೇವ ದ್ವಿಷನ ಶಿರಗಳ। ತರಿದು ಸುರಸಂತತಿಯ ಪೊರೆಯಲು ವಸುಧೆಯೊಳಗೆ।।3।। ಅಸುರಾಧಿಪನ ಕೊಂದು ವಸುಧಾ ಭಾರವನಿಳುಹಿ। ಶಶಿಮುಖಿ ಜಾನಕಿ ಸಹಿತ ಸೌಮಿತ್ರಿ। ಕುಸುಮಾಶಾರನ ತಂದ ಕೋಸಲ ನಗರಿಗೆ। ಮಿಸುನೀ ವಿಮಾನವ। ಸೇರಿ ತಾ ಪೊರಡಲು। ಅತಿಜವದಿ ಮಾರುತಿಯ ನಟ್ಟಲ್ಕೆ। ಅವ ಪೋಗಿ ಬಿಸುರುಹಾಕ್ಷನ। ಕ್ಷೇಮವ ನೆಗಳೆ ಪಟ್ಟಣದ ಜನಗಳು। ವಸುಧೆ ಸಂಭ್ರಮದಿ ಪೊಗಳಲ್ಕೆ। ಸಂತೋಷದಿಂ। ವಸುಧಾಮರಾಳಿಯು ಹಿಗ್ಗು ಹರಿಸಲ್ಕೆ। ಅನುಜೆರತಿ ಮುದದಿಂ। ಸೇವೆಯಮನವೊಲಿದು ಮಾಡಲ್ಕೆ ಕೋಸಲ। ಜನಪದ ಪಟ್ಟವನು ಕೈಕೊಂಡಖಿಳಲೋಕವ ಮುದದಿ ಪಾಲಿಸೇ।।4।।

ದೃಷ್ಟಿತಾಕಿತೇ ನಿನಗೆ ಶ್ರೀರಾಮ — ರಾಗ: ನಾದನಾಮಕ್ರಿಯ

ದೃಷ್ಟಿತಾಕಿತೇ ನಿನಗೆ ಶ್ರೀರಾಮ।।ಪ।। ಸುಂದರತರ ಮುಖ ಚಂದ್ರನ ನೋಡುತಲಿ। ಸುಂದರಿಯರೆಲ್ಲ ಬಂದು। ಕಂದ ನಿನ್ನ ಮುದ್ದಿಡಲು।।1।। ಬಾಲನೆ ನಿನ್ನವರನೀಲಶುದ್ಧ ಕುಂತಲವ। ನೀಲವೇಣಿಯರು ತಿದ್ದಿ ಲಾಲಿಸಿದ ಕಾರಣದಿಂ।।2।। ಮಂಗಳವಾದ ನಿನ್ನ ಕಂಗಳ ಢಾಳವನ್ನು। ಅಂಗನೆಯರೆಲ್ಲ ನೋಡಿ। ಹಂಗಿಸಿದ ಕಾರಣದಿಂ।।3।। ಮಾರಸುಂದರ ಸುಕುಮಾರವರ ರೂಪವನು। ಸಾರಸಾಕ್ಷಿಯರು ಕೂಡಿ। ಮೀರಿಮಾತನಾಡಿದರಿಂ।।4।। ಮಾನವ ವಂದಿತನೆ। ಮೌನಕುಲ ಸೇವಿತನೆ। ಧೇನುಪುರ ವೆಂಕಟೇಶ। ಶ್ರೀನಿವಾಸ ಪಾಲಿಸಲಿ।।5।।

ಮಂಡೆಗೆ ಮಾಧವನ ರಕ್ಷೆ — ರಾಗ: ರೇವತಿ

ಮಂಡೆಗೆ ಮಾಧವನ ರಕ್ಷೆ, ಸುಳಿಗೆ ಸೂರ್ಯನ ರಕ್ಷೆ, ಹಣೆಗೆ ಅರ್ಜುನನ ರಕ್ಷೆ, ಕಣ್ಣಿಗೆ ಕಾಮನ ರಕ್ಷೆ, ಮೂಗಿಗೆ ಮುಕುಂದನರಕ್ಷೆ, ಬಾಯಿಗೆ ಬಲಭದ್ರನ ರಕ್ಷೆ, ಹಲ್ಲಿಗೆ ಹನುಮಂತನ ರಕ್ಷೆ, ನಾಲಿಗೆಗೆ ನಾರಾಯಣನ ರಕ್ಷೆ, ಕಂಠಕ್ಕೆ ವಿಷಕಂಠನ ರಕ್ಷೆ, ಕಿವಿಗೆ ಕರ್ಣನ ರಕ್ಷೆ, ಎದೆಗೆ ಏಳುಕೋಟಿ ಸೂರ್ಯನ ರಕ್ಷೆ, ಹೊಟ್ಟೆಗೆ ವಿಠಲ ರಕ್ಷೆ, ಹೊಕ್ಕುಳಿಗೆ ಹೊನ್ನುರಕ್ಷೆ, ಮುಂಗೈಗೆ ಮುರಹರಿ ರಕ್ಷೆ, ಅಂಗಾಲಿಗೆ ಶ್ರೀರಂಗನ ರಕ್ಷೆ, ಕುಂಡಿಗೆ ಕೂರ್ಮನ ರಕ್ಷೆ, ಬೆನ್ನಿಗೆ ಬೇತಾಳರಕ್ಷೆ, ಸಂಜೆ ರಕ್ಷೆ, ಸರ್ವರಕ್ಷೆ, ಶ್ರೀರಾಮನ ರಕ್ಷೆ।।

ರಕ್ಷೆಯನಿಟ್ಟರು ರಘುಪತಿಗೆ — ರಾಗ: ಬೇಹಾಗ್-ಆದಿತಾಳ

ರಕ್ಷೆಯನಿಟ್ಟರು ರಘುಪತಿಗೆ ರಕ್ಷಿಪ ಜಾನಕಿ ವಲ್ಲಭಗೆ ದಕ್ಷಶಿಕ್ಷಪ್ರಿಯ ನರಹರಿಗೆ ಲಕ್ಷುಮಿ ನಾರಾಯಣ ದೊರೆಗೆ।।ಪ।। ಗುರು ಗಣಪತಿ ಶಾರದೆಗೆರಗಿ। ಪರಮಾತ್ಮನ ಮನದಲಿ ಸ್ತುತಿಸಿ ವರಮಣಿಮಯ ಜ್ಯೋತಿಯ ಬೆಳಗಿ ತರುಣಿ ಗೋಪಿಯರೈವರು ಮುದದಿ।। ವರಕಿರೀಟದ ಸಿರಿಮುಡಿಗೆ, ಕಸ್ತೂರಿ ತಿಲುಕದ ಲಲಾಟಕ್ಕೆ ಭ್ರೂಮಧ್ಯವು ರಾಜಿಪ ಪ್ರಭೆಗೆ, ರವಿಶಶಿ ಪೋಲುವ ನಯನಕೆ, ದರ್ಪಣದಂತ್ಹೊಳೆವ ಕಪೋಲಕ್ಕೆ, ಲತೆಗಳ ಪೋಲುವೋರ್ಕರ್ಣಕ್ಕೆ, ಉರುಮಗ್ಗೆಯ ನಾಸಿಕಕೆ, ಸಂತಸದಲಿ ದಾಡಿಮ ಪಂಕ್ತಿಗೆ - ಗಲ್ಲಕ್ಕೆ, ವರಪವಳದ ತುಟಿ ಹೊಳೆವಿಕೆಗೆ, ಪೊಂಗೊಳಲ

ನೂದುವ ಚೆಲುವ ಮೃದುನುಡಿಗೆ, ವನಮಾಲೆ ಕಂಠ ಹೃದಯಕ್ಕೆ, ವಂಕಿಯ ಧರಿಸಿದ ತೋಳ್ಗಳಿಗೆ, ಲಕ್ಷ್ಮೀನಿವಾಸನ ವಕ್ಷಸ್ಥಳಕೆ ಅಜನ ಪೆತ್ತ ಪೊಕ್ಕುಳಿಗೆ, ಸೂಕ್ಷ್ಮರೂಪಿನ ನಾಭಿ ಕಮಲಕ್ಕೆ, ಶಂಖ ಚಕ್ರವಂ ಧರಿಸಿದ ಹಸ್ತಕ್ಕೆ, ಉಡಿಗಂಟೆಯ ನಡು, ಉರು ಸ್ಥಳಕೆ, ವರಪೊಂಬಾಳೆ ಪೋಲುವ ತೊಡೆಗೆ, ಮಿನುಗುವ ಜಾನು ಜಂಘೆಯ ಪಾದಕೆ, ಸುರಗಂಗೆಯ ಪಡೆದ ಉಂಗುಷ್ಟಕ್ಕೆ, ಲತೆಯನು ಪೋಲ್ವ ದೇಹ ಸೌಂದರ್ಯಕ್ಕೆ, ಜಯಜಯ ಜಯ ಜಗದ್ರಕ್ಷಕನಿಗೆ, ಜಯಜಯಜಯ ಭಕ್ತಪೋಷಕನಿಗೆ। ಜಯಜಯಜಯ ಮೋಕ್ಷಪ್ರದಾಯಕಗೆ। ಜಯಜಯಜಯ ಪುಂಡರೀಕಾಕ್ಷನಿಗೆ। ಜಯಜಯಜಯ ಲಕ್ಷ್ಮೀಪತಿಹರಿಗೆ। ರಕ್ಷೆಯ ನಿಟ್ಟರು॥

ಮುಂಗಡೆಯೊಳು ನಿಂದು ಮಂಗಳವಾಗಲೆಂದು

ಮುಂಗಡೆಯೊಳು ನಿಂದು ಮಂಗಳವಾಗಲೆಂದು। ಸಂಗರ ಶೀಲಗೆ ಸಂಗೀತಲೋಲಗೆ॥ಪ॥ ಆರತಿ ಎತ್ತಿರೆ ನಾರಿಯರೆಲ್ಲರು ಮಾರಸುಂದರ ಸುಕುಮಾರ ಶರೀರಗೆ॥1॥ ಆರಭಿ ಮೋಹನ ಭೈರವಿ ಶಹನಾ। ಮಾಳವಿ ಮೊದಲಾದ ಚಾರುರಾಗವ ಪಾಡಿ॥2॥ ವಾರಿಜ ವದನಗೆ ವಾರಣ ಗಮನೆಗೆ। ವೈರಿ ವಿಧಾರಿಗೆ ವೀರ ರಾಘವನಿಗೆ॥3॥

ಕಾಕಡಾರತಿ ಬೆಳಗುವೆ ಶ್ರೀ ರಘುರಾಮ

ಕಾಕಡಾರತಿ ಬೆಳಗುವೆ ಶ್ರೀ ರಘುರಾಮ ಚಂದ್ರನಿಗೆ॥ಪ॥ ಶ್ರೀಕರ ಶೋಭಿತ ಸುಂದರ ವಿಲಸಿತ। ಚಿನ್ಮಯಗಾತ್ರನಿಗೆ॥ಅ.ಪ.॥ ಪ್ರಭಾತ ಕಾಲದಿ ಪ್ರಶಾಂತ ಸಮಯದಿ ಪುಣ್ಯಮುಹೂರ್ತದಲಿ। ಪ್ರಭಾಕರನವೋಲ್ ಪ್ರಭಾವ ತೋರುವ ಪುರಾಣ ಪುರುಷನಿಗೆ॥1॥ ಆರತಿ ನಿಮಗಿದು ಪ್ರೇಮ ಸುಧಾಮೃತ ತುಂಬಿದ ಹಣತೆಯಲಿ। ತೀರದ ಬುತ್ತಿಯ ಕುಡಿಯಲಿ ಕುಣಿಯುವ ನಂದದ ಜ್ಯೋತಿಯಲಿ॥2॥ ಎಂದಿಗು ಮುಗಿಯದ ಬಂಧನವಿಲ್ಲದ ಚಿರಕಾಲದೊಳಿರುವ। ಆನಂದಮಯಾ ಪರಿಪೂರ್ಣಾವತಾರದಿ ಜಗವನೆ ತುಂಬಿರುವ ಶ್ರೀರಾಮಗೆ॥3॥

ಲಾಲಿ ರಾಮಾನುಜ ಲಾಲಿ ಕಲ್ಪಭೋಜ ರಾಗ: ಕುರಂಜಿ

ಲಾಲಿ ರಾಮಾನುಜ ಲಾಲಿ ಕಲ್ಪಭೋಜ। ಲಾಲಿ ಶ್ರೀ ಯೋಗೇಂದ್ರ ಲಕ್ಷ್ಮಣ ಭರತ॥ಪ॥ ಚತುರ ವೇದಗಳು ನಾಲ್ಕು ಸರಪಳಿಯ ಮಾಡಿ। ಚತುರ ಲೋಕದೊಳಗೊಂದು ತೊಟ್ಟಿಲನು ಕಟ್ಟಿ। ಚತುರ ಮುಖ ಬ್ರಹ್ಮನು ಹುಟ್ಟಿದನು ಎಂದು। ತಾಯಿ ಕೌಸಲ್ಯಾದೇವಿ ಪಾಡಿ ತೂಗಿದಳು॥1॥ ಆಕಾಶವೇ ಮೇಲುಮಂಟಪದ ಕಟ್ಟು। ಬೇಕೆಂಬ ನಕ್ಷತ್ರ ಮಾಲೆಗಳ ಬೊಟ್ಟು। ಭೂಲೋಕವೆಲ್ಲ ತನ್ನಾತ್ಮದೊಳಿಟ್ಟು। ಯಾಕಯ್ಯ ನೀ ತೊಟ್ಟಿಲಲಿ ಮಲಗಿಯೋ ಕಂದ॥2॥

ಅನ್ನಪ್ರಾಶನಗೈದನು ದಶರಥ ತಾನು ರಾಗ: ಮೋಹನ□-ಆದಿತಾಳ

ಅನ್ನಪ್ರಾಶನಗೈದನು ದಶರಥ ತಾನು ಚಿಣ್ಣ ರಾಮಚಂದ್ರಗೆ। ದಿನ ಒಳ್ಳೆಯೆನ್ನುತಲೀ ದಶರಥರಾಯ ವಿನಯದಿಂದಲಿ ಕೇಳಿ॥ಪ॥ ತನಯಗೆ ಹರುಷದಿ ಅನ್ನಪ್ರಾಶನವನು ಅನುನಯದಿ ಮಾಡಬೇಕೆನುತ ಮುದದಿ ತಾನು॥ಅ.ಪ.॥ ಚಿನ್ನದ ತಟ್ಟೆಯನು ಚೆಂದರಿ ಇರಿಸಿ ಒಳ್ಳೆ ರಂಗೋಲಿಯ ಬಿಡಿಸಿ। ಪುಲ್ಲ ಲೋಚನೆಯರು ದೀಪಗಳ ಇರಿಸಲು। ಒಳ್ಳೆ ಮಾತುಗಳಿಂದ ಬಾಲನ ತೊಡೆಯಲಿರಿಸಿ॥1॥ ಶಾಲ್ಯಾನ್ನ ಚಿತ್ರಾನ್ನವ ಗೋಕ್ಷೀರದ ಪಾಯಸ ಪರಮಾನ್ನವ। ಮೆಲ್ಲನೆ ಚಿನ್ನದ ಉಂಗುರದಿ ಉಣಿಸುತ। ಪುಲ್ಲನಾಭನ ಮೊಗವ ಹರುಷದಿ ವೀಕ್ಷಿಸುತ॥2॥ ಆಯುಷ್ಯವಂತನಾಗು ಬಲ್ಲಿದನಾಗು। ಆರೋಗ್ಯವಂತನಾಗು। ದುಷ್ಟರ ಸಂಹರಿಸುತ ಶಿಷ್ಟರ ಸಲಹೆನ್ನುತ। ಮಿತ್ರೆಯರು ಹರಸಿ ಆರತಿ ಎತ್ತುತಿರಲಾಗ॥3॥

ಅಂಗಳದೊಳು ರಾಮನಾಡಿದ ರಾಗ: ವಿಜಯಶ್ರೀ

ಅಂಗಳದೊಳು ರಾಮನಾಡಿದ। ಚಂದ್ರಬೇಕೆಂದು ತಾ ಹಠಮಾಡಿ॥ಪ॥ ಪುಟ್ಟ ಹೆಜ್ಜೆಯನಿಟ್ಟು ನಡೆದಾಡಿದ। ಮುಗಿಲ

ಕಡೆಗೊಮ್ಮೆ ದಿಟ್ಟಿಸಿ ನೋಡಿದ। ತಾಯ ಕರೆತಂದು ಕೈ ಮಾಡಿ ತೋರಿದ। ಸಣ್ಣ ಕೈ ಮಾಡಿ ತಾ ಯೆಂದು ಬೇಡಿದ॥1॥ ಚಿಣ್ಣಿಕೋಲು ಚೆಂಡು ಬುಗುರಿ ಆಟವ। ಬೇಡ ಬೇಡೆಂದು ತಾ ಬಿಸಾಡಿದಾ। ತಾಯಿ ಕೌಸಲ್ಯ ಕಳವಳಗೊಂಡಳು। ಕಂದ ಅಂಜಿದನೆ ಎನ್ನುತ್ತಿದ್ದಳು॥2॥ ಕಂದ ಅಳುವ ಧ್ವನಿ ಕೇಳಿ ರಾಜನು। ಮಂತ್ರಿ ಸಹಿತಾಗಿ ಧಾವಿಸಿ ಬಂದನು। ನಿಲುವ ಕನ್ನಡಿ ತರಿಸಿ ಮುಂದಿಟ್ಟನು। ಶ್ರೀರಾಮನ್ನ ಎತ್ತಿ ಮುದ್ದಾಡಿದ॥3॥ ದರ್ಪಣದೊಳು ರಾಮನೋಡಿದ। ಚಂದ್ರಸಿಕ್ಕನೆಂದು ಕುಣಿದಾಡಿದ। ಈ ಸಂಭ್ರಮನೋಡಿ ಆದಿಕೇಶವ। ರಘುವಂಶವನ್ನೇ ಕೊಂಡಾಡಿದ ॥4॥

ಠುಮಕಿ ಚಲತ ರಾಮಚಂದ್ರ ರಾಗ: ಕಮಾಚ್

ಠುಮಕಿ ಚಲತ ರಾಮಚಂದ್ರ ಬಾಜತ ಪೈಜನಿಯಾ॥ಪ॥ ಕಿಲ ಕಿಲಾಯ ಉಠತ ಧಾಯ ಗಿರತ ಭೂಮಿ ಲಟಪಟಾಯ। ಧಾಯಿ ಮಾತು ಗೋದ ಲೇತ ದಶರಥಕೀ ರಾಣಿಯಾ॥1॥ ತುಲಸೀದಾಸ ಅತಿ ಆನಂದ ಹೇರತ ಮುಖಾರವಿಂದ। ರಘುವರಕೀ ಛವಿ ಸಮಾನ ರಘುವರ ಛವಿವಾಣಿಯಾ॥2॥ ಅಂಗರಜ ಅಂಗಲಾಯೀ ವಿವಿಧ ಭಾತಿ ಸೋ ದುಲಾರ। ತನ ಮನ ಧನ ಬಾರ ಬಾರ ಕಹತ ಮೃದು ವಚನಿಯಾ॥3॥

ಅನುಜರೊಡನೆ ರಾಮನು

ಅನುಜರೊಡನೆ ರಾಮನು ದಿನೇದಿನೇ ಅಭಿವೃದ್ಧಿ ಹೊಂದಿದನು॥ಪ॥ ಜನನಿ ಜನಕ ಮುಖ್ಯ ಜನ ಸಮುದಾಯಕ್ಕೆಲ್ಲ ಮನಕೆ ಸಂತಸವನೆ ಪಡಿಸುತ ಮನುಜರಂದದಿ ಕುಣಿದು ಮೆರೆಯುತ॥ಅ.ಪ॥ ಮೂರು ತಿಂಗಳು ತುಂಬಲು ಶ್ರೀಕರನು ಬಂಗಾರ ತೊಟ್ಟಿಲೋಳ್ ಆಡುತ ತೋರ ಮುತ್ತುಗಳಿಂದ ರಚಿಸಿ ಮೇಲ್ಬಿಗಿದಿಹ ವಾರಿಜ ಶುಕ ಹಂಸ ನವಿಲು ಕೋಗಿಲೆ ಕಂಡು ಹಾರಿ ಹಿಗ್ಗುತ ಪಿಡಿಯ ಪೋಗುತಲೆ॥ ತಾಯ್ ಎತ್ತ ಬರಲು ಮೋರೆ ಗುರುತನು ಕಂಡು ಚೀರುತಲಿ ಉಂಗುಷ್ಠ ಸವಿಯುತಲಿ ಆರು ತಿಂಗಳು ಕ್ರಮದಿ ತುಂಬಲು ಅಂಬೆಗಾಲಿಡುತ ಆಡುತ ಕ್ಷೀರ ಕುಡಿಯದೆ ಛಲವು ಮಾಡುತ ಊರ ಜನಗಳ ಕರದಿ ಮೆರೆಯುತ॥1॥ ಎಂಟು ತಿಂಗಳು ತುಂಬಲು ಮಾಧವನೆದ್ದು ಮೆಲ್ಲನ್ಹೆಜ್ಜೆಯನಿಕ್ಕುತ್ತ ನೆಂಟರಿಷ್ಟರು ಎತ್ತ ಬಂದರೆ ಕೈಗೆ ಸಿಕ್ಕದೆ ತಂಟೆ ಮಾಡುತ ದೂರ ಓಡುತಲಿ ವೈಕುಂಠದರಸಗೆ ವರುಷ ತುಂಬುತಲಿ ಒಂಟೆ ಕುದುರೆ ಆನೆಗಳಿರುವೊ ಶಾಲೆಯಲಿ ಆಡುತ್ತ ಕುಣಿಯುತಲಿ ಬಂಟರವನನು ಎತ್ತ ಬಂದರೆ ಬಾರದೇ ಕೈಬಿಡಿಸಿಕೊಳ್ಳುತ ಚಿತ್ತ ಚಪಲದಿ ನೋಡಿ ನಗುತ ತುಂಟ ಮಗುವೆಂದೆನಿಸಿಕೊಳ್ಳುತ॥2॥ ಸಲ್ಲದ ಮಾತಾಡುತ ತಾಯನು ಹರಿ ಇಲ್ಲದ್ದ ತಾ ಬೇಡುತ ಫುಲ್ಲ ಚಂದ್ರಮನನ್ನು ತಂದು ಕೊಡೆನುತ ಕನ್ನಡಿಯೊಳಗಿನ ಬಿಂಬ ಹಿಡಿದು ಕೊಡೆಂದಳುತ ಬೆಳ್ಳಿಗಿಂಡಿಯ ಕೈಯಲಿ ತೋರಿಸುತ ಅದರೊಳು ಆನೆ ಕುದುರೆಯ ಹಿಡಿಸಿಕೊಡು ಎನುತ॥ ಮಲ್ಲರೊಡನಾಡುತ್ತ ನಕ್ಷತ್ರಗಳನು ಬಿಲ್ಲು ಕಲ್ಲಲಿ ಬೀಳಿಸೆಂದೆನುತ ಬಿಸಿಲು ಕೋಲನು ಹಿಡಿಯ ಹೋಗುತ್ತಾ ತನ್ನಲ್ಲಿ ಇರುವೋ ನೆರಳ ದೂರದಿ ನಿಲ್ಲಿಸೆಂದೆಲ್ಲರನು ನಗಿಸುತ॥3॥ ಮೂರು ವರುಷಗಳಾಗಲು-ಶ್ರೀಧರ ತಾ ನೆರೆಹೊರೆ ಮನೆಗಳಿಗ್ಹೋಗುತ ನೆರೆದಿದ್ದ ತರಳೇರು ಭರದಿಪೋಗುತಲಿರೇ ಕಂಡು ಬರಬೇಕೆನುತ ಸೆರೆಗ್ಹಿಡಿದೆಳೆಯುತ್ತಾ॥ ಮಗುಳೆ ತಾಯ್ ಶೃಂಗರಿಸಿ ಕಳುಹಲು ಪಿತನಿರುವ ಸಿಂಹಾಸನವೇರಿ ಕುಳಿತು ಅಲ್ಲಿರುವೋ ರಾಯರಿಗೆಲ್ಲ ಮುದ್ದ ಸುರಿಸುತ ಭರದಿ ಮಾತೆಯು ಹಣ್ಣ ಕೊಡಲು ಕರದಿ ಕೊಟ್ಟು ತಿರುಗಿ ಬೇಡುತ॥4॥ ಐದು ವರ್ಷಗಳಾಗಲು ಶ್ರೀರಾಮಗೆ ಅಕ್ಷರಾಭ್ಯಾಸವ ಮಾಡಿಸಿ ಆದರದಲಿ ಕಾವ್ಯ ಅಲಂಕಾರ ನಾಟ್ಯ ಆದಿಗ್ರಂಥಗಳನ್ನು ಗುರುಗಳಿಗೊಪ್ಪಿಸಿ॥ ಓದುತಿರೆ ಬಾಲಕರ ಸಹಿತದಲಿ ಓದುವವರನು ಕರೆದು ಧೈರ್ಯದಲಿ ಚೆಂಡುಗಳನ್ನಾಡುತ್ತ ಬೀದಿಯಲಿ ಧಿಮಿಧಿಮಿಕೆಂದು ಕುಣಿಯುತಲಿ ಮೇದಿನೀ ಪತಿ ಶ್ರುತಿಯ ಗೈಯ್ಯಲು ಶ್ರೀಧವಾ ನಾಮಗಿರಿ ಶೇಷನರಹರಿ ಸೇವಕನ ಉದ್ಧರಿಸುತೀಪರಿ॥5॥

ಧರಣಿಪತಿ ದಶರಥನು (ಚೌಲ) ರಾಗ: ಕೇತಾರಗೌಳ-ಖಂಡಛಾಪುತಾಳ

ಧರಣಿಪತಿ ದಶರಥನು। ವರಪುತ್ರರಾ ಚೌಲ। ವರಕರ್ಮವನು ತಾನು ನೆರವೇರಿಸಿದನು॥ಪ॥ ಕರಗಳನೆ ಜೋಡಿಸುತ ಗುರುಪಾದ ಗಳಿಗೆರಗಿ। ವರಸುತರ ಗುರುಕುಲಕೆ। ಅಣಿಮಾಡುತಾ। ವರಚೌಲಕರ್ಮವಾ। ಚರಿಪತೆರವೆಂತೆಂದು। ಗುರು

ವಶಿಷ್ಠನಿಗೆರಗಿ। ಬಿನ್ನೈಸಿ ಕೊಳಲು॥1॥ ಗುರುವರರ ಸಮ್ಮುಖದಿ। ವರ ಮಂತ್ರ ಘೋಷದಿಂ ವರರತ್ನ ಪೀಠದಲಿ ವರಕುವರರಾ। ಕರೆತಂದು ಕುಳ್ಳಿರಿಸಿ। ವರ ಗಣಪನರ್ಚಿಸುತ। ನೆರವೇರಿಸಿದರಂದು। ನಿಯಮವನನುಸರಿಸಿ॥2॥ ಚಿಕ್ಕ ಮಕ್ಕಳ ಕೂಡೆ ಚೌಲಪಂಕ್ತಿಯ ನಡೆಸಿ। ಮಕ್ಕಳನು ತನ್ನಯಾ। ತೊಡೆಯ ಮೇಲ್ಕುಳ್ಳಿರಿಸಿ। ಚೊಕ್ಕ ಮುಂಗೂದಲನು ಸೊಗದಿ ತಾ ತೆಗೆಸಿ ಅಕ್ಕಿ ಪಡಿ ನಾಪಿತಗೆ ಮೊದಲು ಕೊಡಿಸಿ॥3॥ ಮಂಗಳ ಸ್ನಾನವನೆ ಮಾಡಿಸುತ ಕರೆತಂದು। ಶೃಂಗಾರದಾಪೀಠದೊಳು ಕುಳ್ಳಿರಿಸುತ॥ ಮಂಗಳದ ಶ್ರೀಕಾರ ಮೊದಲು ಬರೆಸುತಲವರ। ಅಂಗುಲಿಯಲಕ್ಷರವ ಬರೆಸಿದರು ಅಂದು॥4॥ ಬಂಧು ಜನ ಬುಧ ಜನರು ಎಲ್ಲರನು ಸತ್ಕರಿಸಿ। ತಂದು ತಾಂಬೂಲದಿಂ ಉಪಚರಿಸುತಾ। ಮಂದಹಾಸದಿ ಜನಗಳೆಲ್ಲರನು ಬೀಳ್ಕೊಡುತಾ। ವಂದಿಸಿದ ಲಕ್ಷ್ಮೀನೃಸಿಂಹನನು ಮನದೀ॥5॥



ಬಾಬಾ ಜಗದಭಿರಾಮನೇ ರಾಗ: ಹಂಸಧ್ವನಿ

ಬಾಬಾ ಜಗದಭಿರಾಮನೇ ಬಾಬಾ। ರಘುರಾಮ ಬಾಬಾ ಹಸೆಗೆ ನೀ ಬಾ॥ಪ॥ ಪುರುಷರ ಮೋಹಿಪ ಪರಮ ಸುಂದರ ಬಾ। ಕರಿವರ ಮನಕಾನಂದಕರ ಬಾ॥1॥ ದೀನರ ಪಾಲಿಪೊ ಮಾಣಿಕ ಬಾಬಾ। ದಾನವ ಗಜ ಪಂಚಾನನ ಬಾಬಾ॥2॥ ಭಾಗವತರ ಭಾಗ್ಯೋದಯ ಬಾ। ಬೇಗಬಾ ಬಗೆಯೊಳು ಬಚ್ಚಿಡುವೆ ಬಾ॥3॥

ಮುಂಜಿ ಮಾಡಿದ ದಶರಥ ರಾಮಗೆ ರಾಗ: ಆನಂದಭೈರವಿ-ಆದಿತಾಳ

ಮುಂಜಿ ಮಾಡಿದ ದಶರಥ ರಾಮಗೆ। ಮುಂಜಿಮಾಡಿದಾ॥ಪ॥ ಅಯೋಧ್ಯ ಪಟ್ಟಣದಿ ರಾಮ। ದಶರಥರಾಯನ ಮಂದಿರದಲ್ಲಿ। ಶಶಿಮುಖಿ ಕೌಸಲ್ಯ ಗರ್ಭದಲ್ಲಿ ಜನಿಸಿದ ರಾಮಗೀಗ॥1॥ ಪಟ್ಟಣವ ಸಿಂಗರಿಸಿ ಪೊಡವಿ ಪಾಲಕರ ಕರೆಸಿ। ಉತ್ಸಾಹದಿಂದ ಮಕರ ತೋರಣ। ಅರ್ಥಿಯಿಂದ ಬೀದಿಲಿ ಕಟ್ಟಿ॥2॥ ಸಂದಣಿಯ ವಾದ್ಯದಿಂದ ಮೇಲು ಕಟ್ಟಿನ ಮಂಟಪಕಟ್ಟಿ। ನವಿಲು ಗಿಣಿ ಶೃಂಗರಿಸಿ। ನೀರಾಜಿ ಹಾಸುತಾಗ॥3॥ ನವರತ್ನದ ಜನಿವಾರವನ್ನು। ದಶರಥರಾಯನು ಕರದಿ ಪಿಡಿದು। ಶೇಷಶಯನ ರಾಮಗೀಗ। ಜಾತಿ ಮುತ್ತಿನ ಜನಿವಾರ ಹಾಕಿ॥4॥ ಭವತಿಭಿಕ್ಷಾಂದೇಹಿ ಎಂದು। ರಾಮ ಲಕ್ಷ್ಮಣರೂ ನಿಂದು। ಕೌಸಲ್ಯ ಸುಮಿತ್ರ ಕೈಕಾ। ದೇವಿಯರು ಭಿಕ್ಷವಿಡುತ॥5॥ ಋಷಿಪತ್ನಿಯರೆಲ್ಲ ಕೂಡಿ ಮುತ್ತಿನಾರತಿಯ ಮಾಡಿ। ವಿಪ್ರರೆಲ್ಲ ಹರಸುತ್ತಾಗ। ಮುತ್ತೈದೆಯರು ಪಾಡಿ ಪೊಗಳುತಾ॥6॥

ಶ್ರೀರಾಮಗೆ ಮಾಡಿದರುಪನಯನವನು ರಾಗ: ಶ್ರೀ

ಶ್ರೀರಾಮಗೆ ಮಾಡಿದರುಪನಯನವನು ಆ ದಶರಥರಾಯನು॥ಪ॥ತಾರಾಚಂದ್ರ ಬಲಷ್ಠ ಮುಹೂರ್ತದಿ ಧೀರಲಕ್ಷ್ಮಣ ಅನುಜರ ಸಹಿತಲಿ॥ಅ.ಪ॥ ಎಂಟೂ ದಿಕ್ಕಿಂದಲಿ ಋಷಿಗಳು ಬರಲು ವಾದ್ಯವು ಭೋರಿಡಲೂ। ನೆಂಟರಿಷ್ಟರು ಮನೆ ತುಂಬಿರಲು ವೈಕುಂಠಪತಿಗೆ ನೆರೆ ಶೃಂಗರಿಸೀ ಹಸೆಯ ಮೇಲ್ ಕುಳ್ಳಿರಿಸೀ॥1॥ ಬ್ರಹ್ಮಾತ್ಮರು ಜನ್ಮ ಹೋಮವ ನಡೆಸೀ ಮಿಗಿಲಾದ ಸಕಲಾ ಬ್ರಹ್ಮಸೂತ್ರವು ಹರಿಕಂಠದೊಳಿರಲು। ಬ್ರಹ್ಮನ ಪಿತ ಪರಬ್ರಹ್ಮಗೆ ಭವ್ಯ ಪರಬ್ರಹ್ಮ ಮಂತ್ರ ಉಪದೇಶವ ಮಾಡಿ॥2॥ ಕೌಸಲ್ಯೆಯು ಸೌಮಿತ್ರಿಯು ತಾವ್ ಬರಲು। ಚಿನ್ನದ ಹರಿವಾಣದಿ ರತ್ನಮುತ್ತಿನ ತಂಡಿಲವಾ ಪಿಡಿದು ರಾಮಗು ಅನುಜ ಲಕ್ಷ್ಮಣನಿಗು ಮಾತೃಭಿಕ್ಷವ ನೀಡಲು॥3॥ ರಾಜಾದಿ ಋಷಿಗಳು ತಾವ್ ಕುಳ್ಳಿರಲು। ದಕ್ಷಿಣೆ ಫಲ ತಾಂಬೂಲದಾನವ ಕೊಟ್ಟನು ದಶರಥ ನೃಪನು। ಗಂಧ ಕುಂಕುಮ ಮುತ್ತೈದೆಯರಿಗೆ ಬಾಗಿನಂಗಳ ಕೊಡುತಿರಲಾಗ॥4॥

ಶ್ರೀರಾಮರ ಮುಂಜಿಯ ಸಂಭ್ರಮ (ಉಪನಯನ) ರಾಗ: ಆನಂದಭೈರವಿ

ಶ್ರೀರಾಮರ ಮುಂಜಿಯ ಸಂಭ್ರಮ ನೋಡಿರಿ। ದಶರಥ ಕೈಕೆ ಮಗನ ಮುಂಜಿಯ। ಮಾಡುವ ವೈಭೋಗವನು ॥1॥ ಅತ್ತೆಮಾವಂದಿರು ಅಜ್ಜ ಅಜ್ಜಿಯೇರು। ಮಂಟಪ ಅಲಂಕರಿಸಿ ತೋರಣಂಗಳ ಕಟ್ಟಿ। ಎಣ್ಣೆಶಾಸ್ತ್ರ ಮಲನೀರು ನಾಂದಿ

ಪಾದಪೂಜೆ। ಹೂ ವಿಳ್ಯಾವ ಮಾಡಿ ಆಶೀರ್ವಾದವ ಪಡೆದರು ।।2।। ತಂದೆತಾಯಿ ವಟುವು ಅಭ್ಯಂಜನವ ಮಾಡಿ। ಹಸೆ ಮೇಲೆ ಕುಳಿತು ಹವನ ಹೋಮ ಮಾಡಿ। ವಟುವಿಗೆ ಚೌಲ ಅಭ್ಯಂಜನ ವಸ್ತ್ರಾಧರಿಸಿ। ತಂದೆತಾಯಿ ವಟುವಿಗೆ ಎಳೆಹಾಕಿದರಾಗ ।।3।। ಚೌಲಪಂಕ್ತಿ ಭೂಮಕ್ಕೆ ಕುಡಿಬಾಳೆ ಎಲೆಹಾಕಿ। ಬಣ್ಣಬಣ್ಣದ ರಂಗವಲ್ಲಿ ದೀಪಗಳಿಂದಲಂಕರಿಸಿ। ರಾಮರ ಜೊತೆ ವಟುಗಳು ಕುಳಿತಿರಲು। ಅತ್ತೆ ಅಜ್ಜಿ ಹರಿವಾಣದಿ ಭೂಮಕ್ಕೆ ಬಡಿಸಲು ಬಂದಾರು ।।4।। ಚಕ್ಕುಲಿ ಮುಚ್ಚೋರೆ ತೇಂಗೊಳು ಅಪ್ಪಳ ಸಂಡಿಗೆ। ಅವಲಕ್ಕಿ ಉಪ್ಪಿಟ್ಟು ಸಜ್ಜಿಗೆ ಆಂಬೋಡೆ ಕೋಸಂಬ್ರಿ। ಲಾಡು ಮಂಡಿಗೆ ಚಿರೋಟಿ, ಹೋಳಿಗೆ ತುಪ್ಪ ಬಡಿಸಿ ವಟುಗಳಿಗೆ ಆಪೋಶನ ಹಾಕಿದರಾಗ ।।5।। ಕೈಕೆಯು ಮಗನನ್ನು ತೊಡೆ ಮೇಲೆ ಕುಳ್ಳಿರಿಸಿಕೊಂಡು। ಪ್ರೀತಿ ವಾತ್ಸಲ್ಯಾದಿ ಊಟವ ಮಾಡಿಸುತಿರಲು। ನಗುಮುಖದಿಂದ ವಟು ಊಟವ ಮಾಡುತ। ಸರ್ವರಿಗೂ ಸಂತಸವ ನೀಡಿದನಾಗ ।।6।। ವಟುವಿಗರಿಷಿಣ ವಸ್ತ್ರಾಟೋಪಿ ಭಾಷಿಂಗ ಕಟ್ಟಿ। ಮಂಗಳವಾದ್ಯಗಳಿಂದ ಮುಹೂರ್ತಕ್ಕೆ ಕರೆತರಲು। ವಟುವಿಗೆ ತಂದೆತಾಯಿ ಜೀರಿಗೆ ಬೆಲ್ಲವನ್ನಿಟ್ಟು। ಚಿನ್ನ ಬೆಳ್ಳಿ ಜನಿವಾರ ಹಾಕಿ ಗಾಯತ್ರಿ ಮಂತ್ರೋಪದೇಶವನಿತ್ತರಾಗ ।।7।। ವಟುವಿಗೆ ದಂಡಕಮಂಡಲವನ್ನೆ ಇತ್ತು। ಹಿರಿಯರು ಮಾತೃಭಿಕ್ಷೆಗೆ ಆಜ್ಞೆಯನಿತ್ತರು। ಹರಿವಾಣದಿ ಗೋಧಿಕೊಬ್ಬರಿ ಬೆಲ್ಲವ ತುಂಬಿ। ತಾಯಿ ಮಗನಿಗೆ ಭಿಕ್ಷೆ ನೀಡಲು ಸಂಭ್ರಮದಿ ಬಂದಳಾಗ ।।8।। ಮಗನ ಹಣೆಗೆ ಕುಂಕುಮವಿಟ್ಟು ಪ್ರವರವ ಹೇಳೆಂದಳು। ವಟು ತನ್ನ ತಾಯಿಯ ಮಾತಿನಂತೆ ಪ್ರವರವ। ಹೇಳುತ ಭವತಿ ಭಿಕ್ಷಾಂದೇಹಿ ಭವತಿ ಭಿಕ್ಷಾಂದೇಹಿ ಭವತಿ ಭಿಕ್ಷಾಂದೇಹಿ ಎಂದು ಹೇಳಿದನು ।।9।। ಮಗನ ಕೈಗೆ ಆನಂದದಿ ಭಿಕ್ಷೆ ನೀಡಲು। ಸರ್ವರು ಭಿಕ್ಷೆ ನೀಡಿ ಉಡುಗೊರೆ ಕೊಟ್ಟರು। ಹಿರಿಯರು ವಟುವಿಗೆ ವೇದಮಂತ್ರ ಶಾಂತಿಮಂತ್ರಗಳಿಂದ। ಆಶೀರ್ವಾದವ ಮಾಡಿ ಹರಸಿದರಾಗ ।।10।। ಬಂಧುಬಾಂಧವರೆಲ್ಲ ಊಟ ಫಲತಾಂಬೂಲ। ಸ್ವೀಕರಿಸಿ ಹೋಗಬರುವೆವೆಂದು ಹೇಳುತಿರಲು। ದಶರಥ ಕೈಕೇಯು ಸಡಗರದಿ ಉಡುಗೊರೆಯನಿತ್ತು। ಸಂಭ್ರಮದಿ ಸರ್ವರನ್ನು ಬೀಳ್ಕೊಟ್ಟರಾಗ ।।11।।

### ಬಾಲಕನಿಗೆ ಭಿಕ್ಷವ ಲೀಲೆಯೊಳಾಗ — ರಾಗ: ಅಭೇರಿ

ಬಾಲಕನಿಗೆ ಭಿಕ್ಷವ ಲೀಲೆಯೊಳಾಗ ಲೋಲಲೋಚನೆ ಇಟ್ಟಳು।।ಪ।। ಲೀಲೆಯಿಂ ಸುರಬಾಲಗೆನುತಲಿ ಬಾಲ ವಾಮನನಾದ ಹರಿಗೇ ಮಾತೆ ಆರ್ತಿಯೊಳಿಟ್ಟ ಪರಿಯ।।ಅ.ಪ।। ಅರಸು ದಶರಥ ಸುತಗೆ ಉಪನಯನವನು ವಿರಚಿಸಿ ಹರುಷದಿಂದಾ। ಭರದಿ ವಶಿಷ್ಠಾದಿ ಮುನಿಗಳು। ನೆರೆದು ವೇದವ ಪೊಗಳುತಿರಲು ಪರಮ ಪುರುಷನ ಹಸ್ತದೊಳಗೆ। ರತ್ನಮಯದ ಬಟ್ಟಲನು ಇಟ್ಟು ಮುನಿ ಸಂತೋಷದಿಂದ।।1।। ಭವತಿ ಭೀಕ್ಷಾಂದೇಹಿ ಎನ್ನುತ ಬಾಲ ಹರುಷದಿಂದ ನಿಂದಿರಲು ಆರಡಿ ಕಂಕಣ ಕರಗಳಿಂದಾ। ಮುತ್ತು ಮಾಣಿಕ್ಯಗಳ ನೀಡುತಾ ಚಿತ್ತಜಾತನ ಪಿತನ ಪೊಗಳುತಾ ಕುಂಕುಮವನ್ನಿಟ್ಟು ಶ್ರೀರಾಮಗೇ। ಸಂತೋಷವಪಟ್ಟು ವೇದ ಘೋಷವು ಮೊಳಗುತಿರಲು ಹರುಷದಿಂದಲಿ ಸುಮಂಗಲಿಯರು।।2।।

### ಹಾಕೆ ಶ್ರೀ ರಾಮಗಾಪೋಶನ — ರಾಗ: ಪೂರ್ವಿಕಲ್ಯಾಣಿ

ಹಾಕೆ ಶ್ರೀ ರಾಮಗಾಪೋಶನ। ಶ್ರೀ ಶೌರಿ ಮುರಾರಿ। ಶ್ರೀಕಾಂತ ನಿಗೀಗಲೆ।।ಪ।। ಮುನಿಯಾಗವ ಮಾಡಿ ಅನುಜಾನ ಒಡಗೂಡಿ। ಧನುವನು ಮುರಿದ ಶ್ರೀ ಸನಕಾದಿ ವಂದ್ಯಗೆ।।1।। ಜನಕನ ಪುರಿಯಲ್ಲಿ ಜಯಶೀಲನಾಗಲು ವಿನಯಾದಿ ಕರೆತಂದು। ರವಿಜ್ಞಾನವಂತೆಗೆ।।2।। ಧರೆಯೊಳು ನೆಲೆಸಿದ ಅಲಂಪೂರು ಪುರದೊಳು ಮೆರೆಯುತ್ತಲಿರುವೋ ಶ್ರೀ ವರ ನಾರಸಿಂಹಗೆ।।3।।

### ಶ್ರೀರಾಮಗೆ ಆರುತಿಯನು — ರಾಗ: ಖರಹರಪ್ರಿಯ

ಶ್ರೀರಾಮಗೆ ಆರುತಿಯನು ನಾರಿಯರು ನಾವ್ ಬೆಳಗುವೆವು।।ಪ।। ದಶರಥನಾ ಪ್ರೇಮಪುತ್ರನಿಗೇ। ಭರತನಾ ಅಗ್ರಜಗೇ ಶ್ರೀರಾಮಗೆ।।1।। ವರಮುನಿಯ ಯಾಗ ಕಾಯ್ದವಗೇ। ಪ್ರೇಮದಿಂದ ಪ್ರಜೆಗಳ ಪೊರೆದವಗೇ।।2।।

ಆಶೀರ್ವದಿಸಿದನು ಆ ಮುನಿ ರಾಗ: ಮೋಹನ

ಆಶೀರ್ವದಿಸಿದನು ಆ ಮುನಿ ಆಯುಷ್ಯವಂತರಾಗಿ ನೀವು ಸಾಸಿರಕಾಲವು ಸುಖವಾಸಿಯಾಗಿರು ಎಂದು॥ಪ॥ ಅಶ್ವಶಾಸ್ತ್ರಗಳಲ್ಲಿ ಪ್ರಸಿದ್ಧನಾಗಿರು ಎಂದು। ಶಾಸ್ತ್ರಪುರಾಣದಲ್ಲಿ ಪ್ರಖ್ಯಾತಿಯಾ ಗೆಂದು॥1॥ ಮಾತೆಯ ವಚನವ ಮೀರದೆ ಇರು ಎಂದು। ಭೂತಳಕೆ ನೀ ಪ್ರಖ್ಯಾತಿಯಾಗೆಂದು॥2॥ ವಿದ್ಯಾದಲ್ಲಿ ನೀವು ಅಭಿವೃದ್ಧಿ ಹೊಂದಿರೆಂದು। ಯುದ್ಧಕ್ಕೆ ಹೋಗಿ ನೀವು ಗೆದ್ದು ಬನ್ನಿರಿ ಎಂದು॥3॥

ಮಂಗಳಂ ಶುಭಾಂಗಗೇ (ಮಂಗಳ) ರಾಗ: ಅಭೇರಿ-ಆದಿತಾಳ

ಮಂಗಳಂ ಶುಭಾಂಗಗೇ ಮಂಗಳಂ। ಶ್ರೀರಾಮಚಂದ್ರಗೆ॥ಪ॥ ಕಾಮಜನಕ ವಾಸುದೇವಗೆ ಶ್ರೀರಾಮನಿಗೆ॥ಅ.ಪ.॥ ರಮಾರಮಣ ಕಮಲನಯನ ದೇವಾದಿ ದೇವಗೆ ಶುಭಾಂಗಗೆ॥1॥ ಚಂಪಕಧಾಮಾ ಮೂರ್ತಿಗೆ ಶ್ರೀರಾಮನಿಗೆ। ಕರಿವರದಾ ಗರುಡಗಮನಾ ಕಾರುಣ್ಯ ಮೂರ್ತಿಗೆ ಶುಭಾಂಗಗೆ॥2॥

ಕಳುಹಲಾರೆ ರಾಮನ

ಕಳುಹಲಾರೆ ರಾಮನ। ಇನಕುಲ ತಿಲಕನಾ॥ಪ॥ ಕಳುಹಿಸಲಾರೆ ನಾನೂ। ಕೌಶಿಕ ಕುವರನಾ। ಕೇಳಲು ಬೇಡಬೇಡ। ಕೋದಂಡ ರಾಮನಾ॥ಅ.ಪ.॥ ಕಳುಹಿಸಿ ಕೊಡ್ಡೆ ನೀನೂ। ಕಳವಳಿಸದೇ ಈಗಾ। ಕೇಳಲು ಬೇಡ ಬೇಡ। ಕೋದಂಡ ರಾಮನಾ॥1॥ ಜಗವನೆಲ್ಲವ ತಾನೂ। ಬಗೆಯಲಿ ಸುತ್ತುತ್ತಾ। ಯುಗವ ಕಳೆದನಲ್ಲಾ। ಪರಿಯ ನಾನರಿಯದೆ॥2॥ ಮರಳುತನವ ನಂಬೀ। ಮರೆತೆನೂ ನಿನ್ನನೂ। ಚರಣ ಸ್ಮರಣೆಯನ್ನೂ ಸುರಮುನಿ ಸೇವಿತನೊ॥3॥ ಲೋಕೈಕ ವೀರನೇ ಎಂತು ಕಳುಹಲಿ ನಾನೂ। ಮಣಿದು ಬೇಡುವೆನೀಗಾ। ಗುಣನಿಧಿ ನಿನ್ನನೂ॥4॥ ತರಳರಿಬ್ಬರನೂ ಎಂತು ಕಳುಹಲಿ ನಾನೂ। ನಮ್ಮ ಗೃಹದಿ ಜನಿಸಿರುವೋ। ರಾಮಲಕ್ಷ್ಮಣರನ್ನು॥5॥ ಚಿನ್ನಿಬುಗುರೀ ಚೆಂಡೂ। ಆಡುವ ಬಾಲನಾ। ಮನವ ಸ್ಥೈರಿಸಿ ನಾನು। ಕಳುಹಲಿ ಹ್ಯಾಗೇ॥6॥ ಮಳೆಗಾಳಿ ಬಿಸಿಲನೂ ತಡೆಯಲಾರರೇ ಪಸುಳೆಗಳು। ಮೃಗದ ಧ್ವನಿಯ ಕೇಳಿ। ಬೆದರುವ ಮಕ್ಕಳನ್ನೂ॥7॥ ನಿಷ್ಠೂರ ಬೇಡ ಮುನಿಯೇ ಸೃಷ್ಟಿಯೊಳಗೇ ನಾನೂ। ಪುತ್ರ ಕಾಮೇಷ್ಠಿಯನ್ನೂ। ಶತ್ರುಗಳೆಡೆಯೊಳೂ ಪಡೆದೆನಿವರ॥8॥ ಜಗದಾಭಿರಾಮ ನಿನ್ನಾ। ಅಗಲಿರಲಾರೇನೋ ನಾನೂ। ಹ್ಯಾಗೆ ಕಳುಹಲಿ ನಾನೂ॥ ಕೋದಂಡರಾಮನಾ॥9॥ ರಾಮನಾ ರಘುಕುಲಾ ಮಣಿಯಾ। ರಮಣೀಯ ನೇತ್ರಾ। ಕೋದಂಡರಾಮನ॥10॥ ದಶರಥನೆ ಕೇಳೋ। ಮನದ ಭ್ರಾಂತಿಯ ಬಿಡೋ ಜಗವನು ಪಾಲಿಪುದಕೆ ನಿನ್ನ ಹೃದಯದೊಳ್ ಧ್ಯಾನಿಸಿ ಕಳುಹೈ ಇನಕುಲ ತಿಲಕನ॥11॥

ರಾಮನೇ ಎನ್ನ ಪಂಚಪ್ರಾಣವು

ರಾಮನೇ ಎನ್ನ ಪಂಚಪ್ರಾಣವು। ಭೂಮಿದೇವತೆ ಸಾಕ್ಷಿಯು॥ಪ॥ ಕಾಲಕಾಲಕೆ ಅಶನ ಕೊಡಿರಿ। ಬೇಡಿಕೊಂಬೆನು ಮುನಿವರಾ॥ಅ.ಪ॥ ಬಿಸಿಲ ಬೇಗೆಯ ತಾಳಲಾರರು। ಏನೂ ಅರಿಯದ ಬಾಲರೂ। ಕಷ್ಟಕಾರ್ಯವ ಮಾಡಲರಿಯರು। ತಾಪಸೋತ್ತಮ ಕರುಣಿಸು॥1॥ ತಂದೆತಾಯ್ಗಳ ಅಗಲಿ ಅರಿಯರು। ಬಾಲರೀಸುಕುಮಾರರೂ। ಪ್ರಬಲ ರಕ್ಕಸರನ್ನು ಕಾಣಲು। ಭಯದಿ ಭ್ರಾಂತಿಯ ಪಡುವರೂ॥2॥

ಅಲಕಲಲ್ಲ ಲಾಡಗಗನಿ ರಾಗ: ಮಧ್ಯಮಾವತಿ-ರೂಪಕತಾಳ

ಅಲಕಲಲ್ಲ ಲಾಡಗಗನಿ-। ಯಾರಾಣ್ಮುನಿ ಯೆಟು ಪೊಂದೆನೋ॥ಪ॥ ಚೆಲುವು ಮೀರಗನು ಮಾರೀಚುನಿ ಮದ ಮಣಚಿಡಿ ವೇಳ-॥ಅ.ಪ॥ ಮುನಿಗನು ಸೈಗ ದೆಲಿಸಿ ಶಿವ-। ಧನುವುನು ವಿರಚಿ ಸಮಯ-। ಮುನ ತ್ಯಾಗರಾಜ ವಿನುತುನಿ ಮೊಮುನ ರಂಜಿಲ್ಲು॥ಚ॥ ಚಿಟ್ಟೇಸ್ವರ

ಪಮರಿಮರಿಸ ನಿಸರಿಮಪನಿ।ಸನಿಪ ನಿಪಮ ಪನಿಸರಿಮರಿ। ಪಮರಿ ಮರಿಸ ನಿರಿಸನಿಪನಿ।
ಸನಿಪ ನಿಪಮ ಪಮರಿಸರಿಮ।।

ಕೆಲದಿನಕೆ ಮಿಥಿಳೆಯಿಂ

ಕೆಲದಿನಕೆ ಮಿಥಿಳೆಯಿಂ ಯಾತ್ರೆ ಬಂದದು ಮುನಿಗಳಾಶ್ರಮಕೆ ಧರಣಿಪತಿ ಜನಕನ ಮಹಾಕ್ರತು ಸುಕೃತವಾರ್ತೆ। ರಾಮಲಕ್ಷ್ಮಣರೊಡನೆ ಪೊರಮಟ್ಟನಾಯೆಡೆಗೆ ಮುನಿಪುಂಗವಂ ವಿಧಿನಿಯಂತ್ರದಲಿ। ಹಾದಿಯಲಿ ಹೇಳಿದನು ಜನಕರಾಜಗೆ ದಿವಿಜ ಕೃಪೆಯಿಂದೆ ಲಭಿಸಿರ್ಪ ಹರಧನುಸ್ಸಿನ ಕಥಾ ಚರಿತಮಂ। ಕೇಳ್ದ ರಾಮಂಗೆ ಶಿವಶಕ್ತಿ ಸಂಚರಿಸಿದೊಲ್ ಪುಲಕಿಸಿತು ಮಯ್। ತನ್ನ ಹೃದಯೇಶ್ವರಿಯನನ್ಯ ಕಾಪುರುಷರಿಂ ಪೊರೆವ ಹರಕೃಪಾ ರೂಪಿಯೇಂ ಚಾಪಮಾತ್ರಮೇ ಪೇಳ್ ? ಶಿವೇಚ್ಛಾಪ್ರಣಾಲಿಯೇದಿಟಂ।।

ಓಡೋಡಿ ಬನ್ನಿರೋ ರಾಮ ಶುಭಕಲ್ಯಾಣ ರಾಗ: ಶ್ರೀ

ಓಡೋಡಿ ಬನ್ನಿರೋ ರಾಮ ಶುಭಕಲ್ಯಾಣ (3ಸಾರಿ)।।ಪ।। ಜನಕನ ಮಗಳಂತೆ ಹೆಸರು ಜಾನಕಿಯಂತೆ। ಜಗದೊಳ ಗಾಕೆಯ ಸಮರಿಲ್ಲವಂತೆ। ಶಿವಕೊಟ್ಟ ಧನುವಂತೆ ಫಣವಾಗಿಟ್ಟಿಹರಂತೆ। ಧನುಮುರಿದ ವೀರನ್ನ ಆಕೆ ವರಿಸುವಳಂತೆ ।।1।। ದೇಶ ದೇಶದಲಿರುವ ಭೂಮಿಪಾಲಕರೆಲ್ಲ। ಧನುವ ನೋಡುತ ಕೈ ಬೆರಳ ಕಚ್ಚಿದರಂತೆ। ದಶರಥನ ಸುತನಂತೆ ಶ್ರೀರಾಮ ಹೆಸರಂತೆ ಧರೆಯೊಳಗಾತನ ಸಮರಿಲ್ಲವಂತೆ।।2।। ಕೌಶಿಕ ಯಾಗ ರಕ್ಷಣೆ ಮಾಡುತ್ತ। ಶಿಲೆಯಾದ ಅಹಲ್ಯೆಯ ಸಲಹಿದನಂತೆ। ಸರಯೂ ನದಿಯಾ ದಾಟಿ ಮಿಥಿಲಾಪುರವ ಸೇರಿ। ನೆರೆದ ರಾಜರೊಳೆಲ್ಲ ರವಿಯಂತೆ ಪೊಳೆದ್ನಂತೆ ।।3।। ಇಟ್ಟ ಧನುವನಾಗ ಥಟ್ಟನೆ ಮುರಿಯುತ್ತ। ದಿಟ್ಟ ರಾಜರೊಳೆಲ್ಲ ಘಟ್ಟಿ ಎನಿಸಿದನಂತೆ। ಸುರರು ಸಂತಸ ತಳೆಯೆ ಅಸುರರ ಎದೆ ಬಿರಿಯೆ। ಆ ಶಿವ ಧನುವ ಕ್ಷಣವೇ ಮುರಿದನಂತೆ।।4।। ದೇವ ದುಂದುಭಿ ಮೊಳಗೆ ಜಯವಾದ್ಯ ಭೋರ್ಗರೆಯೆ। ಜನಕರಾಜನು ಸಂತಸವ ತಾಳಿದನಂತೆ। ಜಾಜಿ ಸಂಪಿಗೆ ಪಾರಿಜಾತ ಮಲ್ಲಿಗೆ ಮೊಗ್ಗಿನ। ಹಾರವ ಹಿಡಿದು ವಯ್ಯಾರಿ ನಿಂತಿಹಳಂತೆ।।5।। ಶೃಂಗಾರವಾಗಿಹ ರಂಗಮಂಟಪಕ್ಕಿಳಿದು। ಮುಗಿಲ ಮಿಂಚಿನಂತೆ ಹೊಳೆಯುತ್ತ ಬಂದಳಂತೆ। ಲಾಜ ದಕ್ಷತೆ ವಿಪ್ರರಾಶೀರ್ವಚನದೊಳ್। ರಾಮರ ಕೊರಳೊಳು ಹಾರಹಾಕಿದಳಂತೆ।।6।। ಸೀತೆ ಶ್ರೀ ಲಕ್ಷ್ಮೀ ಶ್ರೀರಾಮ ನಾರಾಯಣ। ಸೀತಾರಾಮರ ಲಗ್ನಕ್ಹೋಗುವ ಬನ್ನಿ। ಹಬ್ಬ ಮಾಡುವ ಬನ್ನಿ ಉಬ್ಬಿ ಕುಣಿಯುವ ಬನ್ನಿ। ಶ್ರೀರಾಮರ ಪದವ ಹೇಳುವ ಬನ್ನಿ।।7।।

ನೀರಜಾಕ್ಷಿ ಸೀತೆಗೀಗಲೇ ರಾಗ: ಯಮನ್‌ಕಲ್ಯಾಣಿ

ನೀರಜಾಕ್ಷಿ ಸೀತೆಗೀಗಲೇ। ಆರತೀಯನೂ ಬೆಳಗಿರೆ ನೀವ್।।ಪ।। ಜನಕರಾಜನೂ। ಘನಸುಯಾಗವಾ। ಅನುವಿನಿಂದ ಗೈವೆನೆಂದೂ। ಧರಣಿಯ ಶೋಧನೆ ಮಾಡೆ। ಜನಿಸಿದಾ ಜನಕಾಗೆ। ವಿನಯವ ತೋರಿದಾ।।1।। ಭೂಮಿಪಾಲ ರಾಮಚಂದ್ರನೂ। ಸೋಮಮೌಳಿಯ ಧನುವನೆತ್ತಲೂ। ಕುಸುಮಮಾಲೆಯನ್ನೆ ಪಿಡಿದೂ। ಪ್ರೇಮದಿಂ ರಾಮಾನಾ ಕೊರಳಿಗೆ ಹಾಕಿದ।।2।। ಭೇರಿ ವಾದ್ಯವೂ ಭೋರಿಡುತ್ತಿರೇ। ಸಾರೆ ವಿಪ್ರರೂ ಬೇಗ ಮಂತ್ರವಾ। ನಾರದಾದಿಗಳ್ ಗಾನವ ಪಾಡಲು। ನಾರಿಯರ್ ಸೇರುತ್ತ। ನೀರದ ತಟ್ಟೆಯೊಳ್।।3।।

ಜಾನಕೀರಮಣ ದಶರಥನಂದನಾ ರಾಗ: ಕಾಪಿ

ಜಾನಕೀರಮಣ ದಶರಥನಂದನಾ। ಸರ್ವಧೀಶವದನಾ। ಹರೇರಾಮ।।ಪ।। ದೀನ ವತ್ಸಲ ದಯಾ ಜಲಧೇ ರಾಮ ವರದಾನ ಶೀಲ ಕೋದಂಡಪಾಣಿ।।1।। ಕೌಶಿಕ ಮುಖ ಸಂರಕ್ಷಕ ಹರೇ। ಗೌತಮ ಕಾಂತ ನಿಜರೂಪಧರ। ಮಹಿತ ಮಹೇಶ್ವರ ಚಾಪ ಮುರಿದ ಮೈಥಿಲಿಪತಿ ರಘುರಾಮ।।2।।

ವಿಶ್ವಾಮಿತ್ರ ಮುನಿವರಂ

ವಿಶ್ವಾಮಿತ್ರ ಮುನಿವರಂ ಸಮ್ಮತಿಸೆ ಮಿಥಿಳೇಂದ್ರನಾಜ್ಞೆಯಂತಾಳುಗಳ್ ಸಾಕೇತ ಪುರಿಗೆಯ್ದಿದರ್। ಸುತರಾಗಮನ ಚಿಂತೆ ಮಸಗಿರ್ದದಶರಥಗೆ ಭಿನ್ನೈಸಿದರ್ ಶುಭದ ವಾರ್ತೆಯಂ ಕಡಲ್ ಉಕ್ಕುವಂತೆ ಉಕ್ಕಿತು ಅಯೋಧ್ಯೆ ಸಂತಸಕೆ ತಡಿಯಿಲ್ಲಿದಾದಳಾಕೌಸಲ್ಯೆ ಮಗನಭ್ಯುದಯಕೆ। ಪಡೆವೆರಸಿ, ಪರಿವಾರದೊಡನೆ ಮಕ್ಕಳ್ ಕೂಡಿ ಮಹಿಷಿಯರ್, ಗುರು, ಮಂತ್ರಿ, ಬಂಧು ಬಾಂಧವ ಮುಖ್ಯ ಪೌರರುಂ ಬರಲ್ ಒಡನೆ ದಶರಥಂ ತಾನ್ ಐದಿದನು ಮಿಥಿಳೆಯಂ ಬೀಗರಂ ವಿಭವದೊಳ್ ಇದಿರ್ಗೊಂಡು ಸಂಭ್ರಮಿಸಿತು ಮಿಥಿಳೆ॥

ಶ್ರೀರಾಮ ಪಾದಮಾ ನೀ ಕೃಪ ರಾಗ: ಅಮೃತವಾಹಿನಿ-ಆದಿತಾಳ

ಶ್ರೀರಾಮ ಪಾದಮಾ ನೀ ಕೃಪ ಜಾಲುನೇ ಚಿತ್ತಮುನಕು ರಾವೇ॥ಪ॥ ವಾರಿಜಭವ ಸನಕ ಸನಂದನ ವಾಸವಾದಿ ನಾರದುಲೆಲ್ಲ ಪೂಜಿಂಚು॥ಅ.ಪ॥ ದಾರಿನಿ ಶಿಲಯೈ ತಾಪಮು ತಾಳಕ ವಾರಮು ಕನ್ನೀರುನು ರಾಲ್ಚಗ ಶೂರ ಅಹಲ್ಯನು ಜೂಚಿ ಬ್ರೋಚಿತಿವಿ ಯಾರೀತಿ ಧನ್ಯುಸೇಯವೇ ತ್ಯಾಗರಾಜಗೇಯ॥ಚರಣ॥

ಶ್ರೀರಾಮ ಜಯ ಜಯ (ತಮಿಳು-ಎದುರುಗೊಳ್ಳುವುದು) ರಾಗ: ಕುರಂಜಿ

ಶ್ರೀರಾಮ ಜಯ ಜಯ। ಸೀತಮ್ಮ ಮನೋಹರ। ಕಾರುಣ್ಯಾಜಲಧೇ ಕರುಣಾನಿಧೆ ಜಯ ಜಯ ॥ಪ॥ ತಿಲ್ಲೈಯಿಲ್ ಮನಂಕಣಿಲೆ ರಾಮರ್‌ವಂದ ನಾಳೆಯಿಲೆ। ರಾಮರೋಡ ಸೇನೆಯೆಲ್ಲಾಂ ರಾಮರೈ ಕೊಂಡಾಡ ॥1॥ ಶಂಖುಚಕ್ರಂ ಧರಿತ್ತುಕೊಂಡು। ಧನುಸ್ಸೈ ಕೈಯಿಲ್ ಪಿಡಿತ್ತುಕೊಂಡು। ಕೋದಂಡತನ್ನೈ ಪಿಡಿತ್ತು। ರಾಮರ್ ಕೋಲಾಹಲಮಾಯ್ ಇರುಂದಾರ್॥2॥ ಜನಕರೋಡ ಮನೆಯಿಲ್ ವಂದು। ಸೀತೆಯುಡೆಯ ವಿಲ್ಲೈ ಮುರಿತ್ತು। ಜಾನಕಿಯ್ಯೈ ಮಾಲೈ ಇಟ್ಟಾರ್। ಜನಕರರ್ ಮನ್ನೈತನಿಲೆ ಶ್ರೀರಾಮ ॥3॥

ಹಸೆಗೆ ಬಾ ರಾಮಾ ಶ್ರೀ ರಾಮಾಭಿರಾಮಾ ರಾಗ: ಮೋಹನಕಲ್ಯಾಣಿ

ಹಸೆಗೆ ಬಾ ರಾಮಾ ಶ್ರೀ ರಾಮಾಭಿರಾಮ ರಾಮ। ವಸುಧೆಯಣುಗಿಯೊಡನೆ ನಲಿದು ಬಾಬಾ॥ಪ॥ ಅವಸರದಿಂದ ಅಸುರಗಣದ। ಅಸುವ ತೆಗೆದ ಬಿಸಜಮನೇತ್ರ। ಕುಸುಮನಾಭ ಕುಮುದನಾಭ। ಅಸುರಮದಮದೇಭಕಲಭ। ಸುರಚಿರಗುಣ ಸತ್ಕಲಾ ಪ್ರವೀಣಾ॥1॥ ಪರಮ ದಯಾಕರ ವಿನಯ ಭರಿತ। ಗರುಡಗಮನ ಸದಯ। ಸುರಚಿರಮಾಂಗಿರಿ ಸದನಾ। ಕರುಣಾಭರಣ ಸೀತಾರಮಣ॥2॥

ಒತ್ತಿದರೆಣ್ಣೆಯ ಚಿತ್ತಜ ಪಿತನಿಗೆ ರಾಗ: ಬೇಹಾಗ್-ಆದಿತಾಳ

ಒತ್ತಿದರೆಣ್ಣೆಯ ಚಿತ್ತಜ ಪಿತನಿಗೆ ಮುತ್ತಿನಕ್ಷತೆಗಳ ನೆತ್ತಿಯೊಳಿಡುತ॥ಪ॥ ಪಲ್ಲವ ಪಾಣಿಯರೆಲ್ಲರು ಸೇರುತ ಸಲ್ಲಲಿತಾಂಗಗೆ ಮಲ್ಲಿಗೆ ಕುಸುಮದಿಂ॥1॥ ಬಾಲೇಂದುಫಾಲಗೆ ಬಾಲೆಯರೊಡಗೂಡಿ ಬಾಲ ಮುಕುಂದಗೆ ತಾಳೆಯ ಕುಸುಮದಿಂ॥2॥

ಸುವ್ವಿ ರಾಮಚಂದ್ರ ಸುವ್ವಿ (ಅರಿಶಿನ ಕುಟ್ಟುವುದು) ರಾಗ: ಶಂಕರಾಭರಣ-ಆದಿತಾಳ

ಸುವ್ವಿ ರಾಮಚಂದ್ರ। ಸುವ್ವಿ ಸುವ್ವಿ ಸುಗುಣಸಾಂದ್ರ ಸುವ್ವಿ। ಸುವ್ವಿ ಸೂರ್ಯವಂಶ ಚಂದ್ರ। ಸುವ್ವಿ ರಾಘವಾ॥ಪ॥ ಜಾನಕೀಯ ವಿವಾಹವೆಂದು। ಮಾನಿನಿಯರು ಮುದದಿ ನೆರೆದು। ಸಾನುರಾಗದಿಂದ ಮಧುರ। ಗಾನಪಾಡುತಾ॥1॥ ಅರಿಶಿನದ ಬೇರು ತಂದು। ಸರಸಿಜಾಕ್ಷಿಯರು ನಿಂದು। ಸರಸದಿಂದ ಪಾಡಿ ನಲಿದು। ಕುಟ್ಟುತ್ತಿದ್ದರು॥ಸುವ್ವಿ॥ ಪೊಳೆವ ಚಂದ್ರ ಕಾಂತದಿವ್ಯ। ಶಿಲೆಯ ಒರಳಿನಲ್ಲಿ। ರತ್ನಗಳನು ಸುರಿದು ಹರುಷದಿಂದ। ನಳಿನ ಮುಖಿಯರು॥2॥ ಹವಳದೊನಕೆಯನ್ನು ಪಿಡಿದು। ಕಮಲದಳ ಲೋಚನೆಯರು। ನವವಿಧದಿಂ ಪಾಡಿರಾ-। ಘವನ ನುತಿಸುತ॥3॥

ಅರಿಶಿನ ಕುಂಕುಮಗಳನ್ನು ಪರಿಪರಿಯ ಫಲಂಗಳನ್ನು। ಹರುಷದಿಂದ ಸುವಾಸಿನೀ ಜನರಿಗೆ ನೀಡುತ।।4।। ಪರಮ ಹರುಷದಿಂದ ನಲಿಯುತ। ಅರಿಶಿನವ ಕುಟ್ಟಿದರು। ಸಿರಿ ನರಹರಿಯರನು ನುತಿಸಿ। ಸರಸಿಜಾಕ್ಷಿಯರು।।5।।

ಗೋಧಿಕಲ್ಲನಿಕ್ಕಿದರು ಗೋಧೂಳಿ ಲಗ್ನದಲ್ಲಿ ರಾಗ: ಪೂರ್ವಿಕಲ್ಯಾಣಿ-ಆದಿತಾಳ

ಗೋಧಿಕಲ್ಲನಿಕ್ಕಿದರು। ಗೋಧೂಳಿ ಲಗ್ನದಲ್ಲಿ।।ಪ।। ರಾಘವನ ಲಗ್ನಘಳಿಗೆ। ಸಾಧಿಸಲು ಸಂಭ್ರಮದಿ।।ಅ.ಪ।। ಗೋಮಯದಿಂದ ಗಣಪನ ರಚಿಸಿ। ಗೊನೆಯ ಬಾಳೆಯಹಣ್ಣು ತರಿಸಿ। ಗೋಧಿ ಅಕ್ಕಿ ಪಡಿಯನಿರಿಸಿ। ಶ್ರೀರಾಮಚಂದ್ರನನಾಮ ನುತಿಸಿ।।1।। ಅಂಗನೆಯರೆಲ್ಲ ಕೂಡಿ। ಮಂಗಳಾಷ್ಟಕವ ಪಾಡಿ। ರಂಗು ರಂಗಿನ ಕಲ್ಲನಿರಿಸಿ। ರಘುನಾಥನ ಮದುವೆಗೆಂದು।।2।। ಮುತ್ತಿನಂಥಹ ಗೋಧಿಯತಂದು। ಹತ್ತು ಜನರು ಸುತ್ತ ನಿಂದು। ಮತ್ತೆ ರಾಮನ ಮದುವೆಗೆಂದು। ಸುತ್ತಿಸಿದರು ಕಲ್ಲನಂದು।।3।। ಹರುಷದಿಂದ ನಾರಿಯರು। ತರಿಸಿ ಗೋಧಿ ಬಳ್ಳಗಳಲಿ। ಸರಸದಿಂದ ಕಲ್ಲಸುತ್ತ। ಸುರಿಯುವಂತೆ ತಿರುಗಿಸುತಲಿ।।4।। ನಲ್ಲೆಗಾರುತೀಯನೆತ್ತಿ। ನಲ್ಲೆಯರು ಪಾಡಿನಲಿದು। ಪ್ರಫುಲ್ಲವದನರಾಗಿ। ಸೀತಾವಲ್ಲಭನ ಪಾಡುತಲಿ।।5।।

ಪಾದಾವ ತೊಳೆದ ಗಗನರಾಯನು ರಾಗ: ಸರಸ್ವತಿ-ಆದಿತಾಳ

ಪಾದಾವ ತೊಳೆದ ಗಗನರಾಯನು ಹರಿಗೆ।।ಪ।। ಪಾದಾವ ತೊಳೆದು ಪದ್ಮಾವತಿ ರಮಣಗೆ ಮೇಲಾದ ವಸ್ತ್ರದಿಂದಾ ಲೋಲಾನಿಗೊರೆಸುತ್ತ।।ಅ।। ಮುತ್ತು ಮಾಣಿಕ್ಯದ ಹರಿವಾಣದಿ ದಿವ್ಯ ಉತ್ತುಮ ಪಾದಾವನಿರಿಸಿ। ವಿನೋದದಿ ಶ್ರೇಷ್ಠ ನೀನೆಂದು ಸ್ತೋತ್ರಾವ ಮಾಡುತ್ತ।।1।। ಬೆಳ್ಳಿತಂಬಿಗೆಯಲ್ಲಿ ಬಿಸಿನೀರನ್ನು ತಂದು। ಧರಣಿದೇವಿ ಚೆನ್ನಾಗಿ ತೊಳೆಯೆ। ಮುದ್ದು ಪಾದಾವ ತನ್ನ ಕೈಯಿಂದ ಮುಟ್ಟಿ। ಮಾನ್ಯ ಶ್ರೀ ವೇಂಕಟೇಶಗೆ।।2।। ಪುಣ್ಯ ಪುರುಷರು ಸುತ್ತಲು ನೆರೆಯಲು। ಧರಣಿದೇವಿ ಚೆನ್ನಾಗಿ ಅಳಿಯನ ನೋಡಲು। ತನ್ನ ಕೈಯಿಂದ ಮುಟ್ಟಿ ಮಾನ್ಯ ಶ್ರೀ ವೇಂಕಟೇಶಗೆ।।3।।

ವರಪೂಜೆ ಚೇಸೇನು ಜನಕ ಭೂಪಾಲುಡು (ವರಪೂಜೆ)

ವರಪೂಜೆ ಚೇಸೇನು। ಜನಕ ಭೂಪಾಲುಡು।। ಜಾನಕಿ ಮಾತಾ ತೋನುವೇಗ।।ಪ।। ವರ ಉಪಚಾರ ಮುಲ। ವರಸುಗಾ ನೀ ಚೂಚು ।।ಅ.ಪ.।। ಮುನಿಯಾಗ ಮುಲ। ನೊಕ್ಕಾ ಕ್ಷಣಮುಲೋ। ಗೆಲಿಪಿಂಚಿ। ದಣೆಸಿ ವಚ್ಚಿನ ಮನಾದ ದಶರಥ ಸುತನಿಕೊ।।1।। ಅಹಲ್ಯ ಶಾಪ ವಿಮೋಚನ ಚೇಸಿನಾ। ಅನುಜ ಲಕ್ಷ್ಮಣನಿತೋ। ಅಲಸಿಯುಂಡ ಗಾವೇಗ।।2।। ಧರಲೋನ ವೆಲಸಿನಾ ದಕ್ಷಿಣ ಕಾಸಿಲೋ। ಮೆರೆಯುಚುನಂಡಡು ನರಸಿಂಹಮೂರ್ತಿಕಿ।।3।।

ರಾಜಾ ರಘುಕುಲ ರಾಮನಿಗೆ ರಾಗ: ಸುರುಟಿ

ರಾಜಾ ರಘುಕುಲ ರಾಮನಿಗೆ ವರಪೂಜೆ ಮಾಡಿದ ಜನಕನು। ರಾಜಿಸುವ ಮಾರ್ತಾಂಡ ವಂಶವಿರಾಜಿತಾಮಯ ಮೂರ್ತಿಗೆ।।1।। ಭೂಮಿಪತಿ ಮಣಿಶೀಲ ಸಹಿತಲಿ ನೇಮದಲಿ ಶ್ರೀರಾಮಗೆ।। ಕಾಮಿತದ ಕಸ್ತೂರಿ ತಿಲಕವ ನೇಮದಿಂದಲಿ ರಚಿಸೆ।।2।। ಗಂಧ ಪರಿಮಳದಿಂದ ಪೂಜಿಸಿ ದುಂಡುಮಲ್ಲಿಗೆ ಚಂಪಕ। ಚಂದನದ ಸುಮಹಾರವನು ಸಿರಿ ಕಂಬು ಕಂಠದಿ ಹಾಕುತ।।3।। ಕ್ಷೀರ ಫಲಂಗಳನಿಟ್ಟು ಕರದೊಳು ಚಾರು ವೈಭವದಿಂದಲಿ। ಹಾರ ಪದಕ ಕಿರೀಟ ಕುಂಡಲ ವಾರಣದೊಳ್ ಅಲಂಕರಿಸಿ।।4।। ಪಟ್ಟೆ ಪೀತಾಂಬರವು ಶಂಖ ಚಕ್ರ ಚಾಮರ ವ್ಯಜನವು। ಕೊಟ್ಟು ಪೂಜಿಸಿ ತ್ಯಾಗದ ಸಿರಿಕೇಶ ವರ ವೆಂಕಟೇಶಗೆ ।।5।।

ವರಪೂಜೆ ಮಾಡಹೊರಟನು ಜನಕೇಂದ್ರ ರಾಗ: ಬೇಗಡೆ

ವರಪೂಜೆ ಮಾಡಹೊರಟನು ಜನಕೇಂದ್ರ ಭೂಪನು। ಮಿಥಿಲಾಪುರಕೆ। ದಶರಥ ಕೌಸಲ್ಯ ರಾಮಬರುವನು।। ಕನ್ನಡಿಯ ಕಳಶವು। ಕನ್ನೆಯರ ಕೂಟವು। ಸನ್ನುತಾಂಗ ಏರಿ ಬರುವ ರಥದ ನೋಟವು।।1।। ಬಂದ ರಥವ ನಿಲಿಸಿದಾ।

ಬಿಡಾರತೋರಿದ। ಗಂಧಪುಷ್ಪ ತಾಂಬೂಲಾದಿಂದುಪಚಾರಮಾಡಿದ। ಮುದದಿ ಬಂದವರನಿಗೆ ವಂದನೆಯ ಮಾಡಿದ। ವಧುವಕೊಡಲು ವಾದ್ಯಘೋಷದಿಂದ। ನಡೆಸಿದಾ॥2॥ ಕಂಡಸಕ್ಕರೆ ಪಾನಕ ಕ್ಷೀರಗಳ ಕೊಡಿಸಿದಾ। ತಂಡತಂಡದಿಂದುಪಚಾರಮಾಡಿ। ವರನ ಥಣಿಸಿದಾ। ಆರತೀಯ ಮಾಡಿ ಆಶೀರ್ವಾದ ಮಾಡುತ್ತಾ। ನಾರಿಕೇಳ ಕದಲಿಪುಷ್ಪಕರದಿ ನೀಡುತಾ॥3॥

ಪೋಗಬೇಡವೋ ನೀ ಕಾಶಿಯಾತ್ರೆಗೆ ರಾಗ: ಜಂಜೋಟಿ

ಪೋಗಬೇಡವೋ ನೀ ಕಾಶಿಯಾತ್ರೆಗೆ। ಈಗಲೆ ನೀನು॥ಪ॥ ಮಗಳ ಕೊಡುವೆ। ಅವಳ ಸಹಿತ। ಪೋಗುವೆ ಬಾರೈ॥ಅ.ಪ॥ ಕರದಿ ದಂಡ ಮತ್ತೆ ಕೊಡೆಯು। ಚರಣ ಪಾದುಕೆ। ಮೆರೆವೊ ಅಕ್ಕಿ ಗೋಧಿ ಗಂಟು। ನಿನಗೆ ಕೊಡುವೆನು॥1॥ ಬೆಡಗಿನ ಸಿರಿ ಪಾದಗಳನು। ಮುದದಿ ತೊಳೆವೇನು। ಪರಿಮಳ ಸುಗಂಧ ಪುಷ್ಪಗಳನ್ನು। ಇಟ್ಟು ಪೂಜಿಸುವೇ॥2॥ ಚರಣ ತೀರ್ಥ ಭರದಿ ಧರಿಸಿ। ಪುರದ ಪ್ರೀಯನೇ। ವರ ಅಯೋಧ್ಯಾ ಪುರದ ದೊರೆಯೆ। ರಘುವೀರನೇ॥3॥

ಕಾಸಿಕೇಲ ಪೋವದಲಪುರಾ

ಕಾಸಿಕೇಲ ಪೋವದಲಪುರಾ। ಶ್ರೀರಾಮನೀಕು॥ಪ॥ ಕಾಳ್ಳುಕಡಗಿ ಕನ್ಯನಿಚ್ಚೆದ। ನನಚುವೇಡು ಚುಂಡಗಾನು॥ಅ.ಪ.॥ ಭಾಸುರಾಂಗ ಜನಕುರಾಜು ಭೂಸುತಾನಿವ್ವಾ। ಭಾಸ ಜೇಸಿ ಚೆಪ್ಪ ಚುಂಡಗ। ಭಾವ ಮೇಮಿದೀ ಮನೋಹರ॥1॥ ಕೋರಿನಟ್ಲು ಕಾನ್ಕುಲಿಚ್ಚಿ। ಕೋಮಲೀನಿಚ್ಚಿ। ಕೌಸಲ್ಯ ಕುಮಾರ ನೀದು। ಕೋರಿಕಲನು ತೀರ್ಚುಚುಂಡಗ॥2॥ ಧರಲೊ ವೆಲೆಯು ಅಲಂಪೂರು ಪುರಮು ಲೋನುಂಡೆ। ವರ ನೃಸಿಂಹ ಕರುಣ। ತೋಡ ಕಮಲ ಮಣಿ ನಿ ಸ್ವೀಕರಿಂಚಕ॥3॥



ಮಾಡಿದರ್ ಶಾಸ್ತ್ರವ ಕೂಡುತ (ಹೆಣ್ಣಿಗೆ) ರಾಗ:ರೇವತಿ

ಮಾಡಿದರ್ ಶಾಸ್ತ್ರವ ಕೂಡುತ ಸತಿಯರು। ಹಾಡನು ಹೇಳಿ ಕೊಂಡಾಡುತ ಮುದದಿ॥ಪ॥ ಮರಕತ ಪೀಠವ ಇರಿಸುತದರ ಮೇಲೆ। ತರುಣಿ ಸೀತೆಯ ಕುಳ್ಳಿರಿಸುತೆ ಮುದದಿ॥ಅ.ಪ॥ ನಾರಿಮಣಿಗೆ ಮುತ್ತಿನಾರತಿಗಳನೆತ್ತಿ। ಚಾರು ಸುಗಂಧ ಪಟೀರದ ತೈಲವ॥1॥ ದೀನಜನಾವನ ಧೇನುವಾಗಿರುವಂತೆ। ಮಾನುಷ ಸಿಂಹಾ ಮಾನಿನಿರನ್ನೆಗೇ॥2॥

ಭಾಮಿನಿ ಮಣಿ ಬಾರೆ ರಾಗ: ಖರಹರಪ್ರಿಯ-ಆದಿತಾಳ

ಭಾಮಿನಿ ಮಣಿ ಬಾರೇ। ಕರೆಯುವೆ ನಿನ್ನನು॥ಪ॥ ಕಾಮಿನಿ ಮಣಿಯರೂ ಪ್ರೇಮದಿಂ ಕರೆವೋರು।ತಾಮಸ ಮಾಡದೇ ಈ ಮಹಾಪೀಠಕೀಗ॥ಅ.ಪ॥ ಜರತಾರಿ ಸೀರೆಯುಟ್ಟು। ಜರಿಯಕುಪ್ಪಸವತೊಟ್ಟು। ನಡುವಿನೊಳಗೆ ನಾಗಾ। ಆಭರಣವು ಹೊಳೇಯುತಾ। ಪೊಡವಿಗೊಡೆಯನಾ ಮಡದಿ ಲಕುಮಿ ಬಾರೇ॥1॥ ತುಂಬುರು ನಾರದರೂ ಗಾನವ ಪಾಡ್ವರೂ। ರಂಭೆ ಮೇನಕೆಯರು ನಾಟ್ಯವನಾಡ್ವರು। ಅಂಬರದಲ್ಲಿ ಸುರರೂ। ಪೂಮಳೆ ಕರೆವರೂ॥2॥

ಬಾರೇ ಭೂಮಿಜಾತೆ ಬಾರೇ ರಾಗ: ಆನಂದಭೈರವಿ

ಬಾರೇ ಭೂಮಿಜಾತೆ ಬಾರೇ ಮಂಗಳಗೀತೆ ಬಾರೇ ಲೋಕಮಾತೇ ಬಾರೇ ಹಸೆಗೆ ಸೀತೆ॥ ನಾರಾಯಣನು ರಘುವೀರನ ನಾಮದಿ ನೆರವಾಗಲು ನಿನಗೆ ಸಾರಿ ಬಂದಿರುವನು॥ಪ॥ ಸರಸಿಜಜಾತನು ನಾರದ ಗುರು ಸುರವರ ಕೂಡುತ ಸರಿ ಸಂತಸದಿಂದ ಕ್ಷೀರ ಜಲಧಿಯ ಸೇರಿ ಭಕ್ತಿಯೊಳು। ನಾರಾಯಣನೆ ದಯೆ ತೋರಿ ಪೊರೆಯೈ ನಮ್ಮ ಕರುಣದೊಳು। ಘೋರ ರಾವಣನ ಪಾರಹಿಂಸೆಯಸೈಸಿದೆವು ಕೇಳು। ಧಾರುಣಿ ತಳದೊಳು ವೀರದಶರಥನುದುರವನು ನಾ ಸೇರಿ। ರಾಮಾಭಿದೇಯನಂತು ಕ್ರೂರರನು ಸಂಹರಿಪೆನೆಂದವತಾರಗೈಯುತ

ಬಂದಿರುವನು।। ನಾರಿ ಕೌಸಲ್ಯೆಯ ಚಾರು ಗರ್ಭದಿ ಪುಟ್ಟಿ ಸೇರಿದ ಜನಕೆಲ್ಲಾ ತೋರಿಸಿ ಲೀಲೆಯ। ಘೋರಮಾರೀಚಾದಿ ಖಲತತಿಯ ಸಂಹರಿಸಿ ಗಾಧಿಕುಮಾರನೆಸಗಿದ ಮಖವ ಪಾಲನೆಯ ಮಾಡುತ್ತ ಕೋಪದಿ ದಾರಿಯೊಳು ಕೊಲ್ಲುತ್ತ ತಾಟಕಿಯ ಬರುತಿರಲು। ಮುಂದೆ ಸರೋರುಹಾಸನೆ ಗೌತಮನ ಸತಿಯಶಾಪವನೆ ಕಳೆಯುತ। ಸೇರಿ ವಿಶ್ವಮಿತ್ರಮುನಿಪನ ಸಾರುತ ಮಿಥಿಲಾಪುರಿಗೆ ಮದನಾರಿ ಧನುವನು ಭಂಗಿಸುತ ಗಂಭೀರ ಗುಣ ರಾಮನನು ಸೇರಲು। ತುಂಬುರ ನಾರದರೆಂಬ ಮಹಾತ್ಮರು ತಂಬೂರಿಯನೆ ಪಿಡಿದುಂಬಲುತೋಷದಿ। ಶಂಬರಾರಿಯ ಪಿತನ ನಾಮವನು ಪಾಡುತ್ತ ಜಯ ಜಯವೆಂಬ ರವದಿಂ ಜನಕೆ। ಭಕ್ತಿಯನು ಪೆರ್ಚಿಸುತಲಿರೆ ಕಮಲಾಂಬಕಿಯ ರೈದಾರತಿಗಳನ್ನೂ ಕರದೊಳಗೆ ಪಿಡಿಯುತೆ ನೀ ಬರುವೆ ಎಂದಿರುವ ರೀತಿಯನು ನೋಡಲ್ಕೆ। ಬಾ ಬಾ ಕಂಬು ಕಂದರೆ ರಂಭೆ ಈಗಲೇ। ಮುಖವಿಜಿತ ಶಶಿಬಿಂಬೆ ಸುಗಣಕದಂಬೆ ಚಿನ್ನಾದ ಬೊಂಬೆ। ಬೇಗದಿ ಘನನಿತಂಬೆ।। ಜಂಬಾರಿ ಲೋಕದಿಂ ರಂಭೋರ್ವಶಿಯರೆಂಬ ಅಂಬುಜಾಕ್ಷಿಯರು ಸಂಭ್ರಮದಿಸಭೆಗೈದಿ ಗುಂಬಿತ ಧ್ವನಿಯಿಂದ ನಾಟ್ಯವನಾರಂಭವನು ಮಾಡಿ ಕುಚಂಬರದಿ ಕುಲುಲ್ಕಿ। ಕುಣಿಯುತ್ತ ರಂಭೇರು ಯುಗಳಿಯರೇಂ ಭರತದೊಳು ನಿಪುಣೆಯರು ಎನ್ನುತ್ತ। ಸ್ಥಂಬಿಸಲ್ಕೆಲ್ಲರು ಗುಂಬ ಕಾಂಬೋಧಿಯನು ಪಾಡುತ್ತ। ಗಂಭೀರ ಗುಣದಿಂದ ಮನುಜಜನ ಮನವ ಸೆಳೆಯಲು। ಕುಂಭಿಣೀ ಸುರಸತಿಯರೊಂದೆಡೆ ಸಂಭ್ರಮದಿ। ಶೋಭನವ ಪಾಡುತಲೇ ಬಹು ತವಕಮಾಗಿಹರು ಬೇಗದಿ।। ಗೌತಮಾಂಗೀರಸ ಶಾತಾರ್ಣದಪವಿಧಿ ಚಾತಮಾಗರ್ಯ ತಪೋಧನರೆಲ್ಲ। ಆತುರದಿ ಮಂತ್ರವನೆ ಪೇಳುತ್ತ ಯಜ್ಞೇಶ್ವರಗೆ ಸಂಪ್ರೀತಿಯಿಂದಾಹುತಿಯ। ಸುಮುಹೂರ್ತ ಎನ್ನುತ್ತ ದಿವಿಜರು ಕಾತುರದಿ ಮೌನವ ತಾಳುತ್ತ। ಎನ್ನುತಿಹರಿತ್ತ ಮಹಾತಿಶಯವೆನ್ನುತ್ತ। ವಿಪ್ರೋತ್ತಮಾದಿಗಳು ಬಂದಿಹರ್ ಏತಕೀ ಪರಿ ತಡವ ಮಾಡುವೆ। ಮಾತೆಗಭಿವಂದಿಸುತ ನಿನ್ನಯ ತಾತನಾಣತಿಯಾಂತು ಬೇಗದಿ ಸೀತೆ ಪರಿಣಯ ಮಂಟಪಕೆ ನೀ।।

ಅರ್ಕನ ಉದಯದೊಳೆದ್ದರು ರಾಗ: ಬಿಲಹರಿ

ಅರ್ಕನ ಉದಯದೊಳೆದ್ದರು ಬೇಗ। ವಿಘ್ನವಿನಾಶನ ನೆನೆದರು ಆಗ। ಜನಕನ ಸುತೆಯು ಜಾನಕಿಯಾಗ (ಪದ್ಮಜೆ)। ಮನದಲ್ಲಿ ಹರಿಯನ್ನು ನೆನೆಯುತ ಬೇಗ।।ಪ।। ಸೀತೆಯ ಸಖಿಯರು ನೆರೆದರು ಬೇಗ। ಹಾಸಿದ ಮಣೆಯೊಳು ಕುಳಿತಳು ಆಗ। ಸುಗಂಧ ತೈಲವನೊತ್ತಿದರಾಗ। ಸೊಗದೊಳು ಪನ್ನೀರನೆರೆದರು ಬೇಗ।।1।। ಮಂಗಳ ಹಾಡುತ ಮಹಿಳೆಯರಾಗ। ಮಂಗಳ ಸ್ನಾನವ ಮಾಡಿಸಿ ಬೇಗ। ಮಂಗಳ ಗೌರಿಯ ಸ್ತುತಿಸುತಲಾಗ। ಮಂಗಳೆ ಸೀತೆಯ ಹೊಗಳಿದರಾಗ।।2।। ನವಿಲು ಅಂಚಿನ ಪೀತಾಂಬರ ಉಡಿಸಿ। ನಡುವಿಗೆ ಒಡ್ಯಾಣವ ನಿಟ್ಟರು ಹರಸಿ। ಮುತ್ತಿನ ವರ್ಣದ ಕುಪ್ಪಸ ತೊಡಿಸಿ। ಮುತ್ತಿನ ಮೂಗುತಿ ಇಟ್ಟರು ಬೆಸಸಿ।।3।। ಕರ್ಣಕೆ ಓಲೆಯನಿಟ್ಟರು ಬೇಗ। ವರ್ಣಿಸಲಸದಳ ರೂಪಳು ಆಗ।। ಫಣೆಯೊಳು ಕುಂಕುಮ ಇಟ್ಟರು ಬೇಗ। ಫಣಿಶಾಯಿಯನು ನೆನೆಯುತಲಾಗ।।4।। ತೋಳಿಗೆ ಬಾಪುರಿ ಕಟ್ಟಿದರಾಗ। ಮಾಣಿಕ್ಯದೊಡವೆಯ ತೊಡಿಸಿದರಾಗ।। ಮಣಿಮಾಲೆಯ ಕೊರಳೊಳು ಹಾಕಿದರಾಗ। ಫಣಿವೇಣಿಗೆ ಹೆರಳನು ಹಾಕುತಲಾಗ।।5।। ಮಲ್ಲಿಗೆ ದಂಡೆಯ ಮುಡಿಸಿದರಾಗ। ಮೆಲ್ಲನೆ ಸೀತೆಯ ನಗಿಸುತಲಾಗ....।। ರಾಗಟೆಗೊಂಡ್ಯವ ತೊಡಿಸಿದರಾಗ। ಬೆರಳಿಗೆ ಮುದ್ರಿಕೆ ಇಟ್ಟರು ಬೇಗ।।6।। ಬಣ್ಣದ ಬಳೆಗಳ ತೊಡಿಸಿದರಾಗ। ಬಣ್ಣಿಸಲಸದಳ ಬಳೆಗಳ ಸೊಬಗ। ಕಾಲಿಗೆ ಗೆಜ್ಜೆಯ ಕಟ್ಟಿದರಾಗ। ಪಾಡಗರುಳಿಯನು ತೊಡಿಸಿದರಾಗ।।7।। ಬೆರಳಿಗೆ ನೂಪುರವಿಟ್ಟರು ಬೇಗ। ಪರಿಮಳ ವಸ್ತುವ ಪೂಸಿದರಾಗ।। ಮುತ್ತೈದೆಯರಾರತಿ ಎತ್ತಿದರಾಗ। ಮುತ್ತಿನ ಸೇಸೆಯನಿಟ್ಟರು ಬೇಗ।।8।। ಹದಿಬದೆ ಧರ್ಮವ ಪಾಲಿಸು ಎನುತಲಿ। ಪದುಳದಿ ಹರಸಿದರು ಸೀತೆಯ ಮುದದಲಿ। ಕೇಶವ ಸತಿಯಳು ಆಗುನೀ ಮುದದಿ। ಕೇಶವ ನೊಲುಮೆಯು ಆಗಲಿ ಜಗದಿ।।9।।

ಬಂದಳು ಜಾನಕಿ ಹಸೆಗೆ ಈಗ ರಾಗ: ಖರಹರಪ್ರಿಯ-ಆದಿತಾಳ

ಬಂದಳು ಜಾನಕಿ ಹಸೆಗೆ ಈಗ। ಹರುಷದಿಂದಲಿ ಬಂದಳು ಜಾನಕಿ। ನಾರಿಯರೆಲ್ಲರು ಕರೆಯುತ್ತಿರುವರು। ನಾಗವೇಣಿಯೆ ನೀ ಬಾರೆ ।।ಪ।। ವಾರೆ ನೋಟದಿ ನೀ ವೈಯ್ಯಾರದಿಂದಲಿ। ಶ್ರೀರಾಮರ ಜೊತೆಗೂಡಿ ಹರುಷದಿಂದ।

ಮುಗುಳುನಗೆಯಿಂದ ನೆರಿಗೆ ಚಿಮ್ಮುತ। ಕಾಲಿನ ಗೆಜ್ಜೆ ಘಲುಘಲು ಎನ್ನುತ ।।1।। ಪರಿಪರಿ ವಿಧದಲಿ ಅಲಂಕರಿಸಿ ನೀನು। ಹಣೆಯಲಿ ತಿಲಕವೂ ಶೋಭಿಸುತಲಿ। ಹೂವಿನ ಪರಿಮಳ ಬೀರುತಲೀಗ। ಮೆಲ್ಲಮೆಲ್ಲಗೆ ತಾ ಹೆಜ್ಜೆ ಹೆಜ್ಜೆ ಇಡುತಲಿ।।2।। ಜನ್ಮ ಜನ್ಮಗಳ ಬಂಧನವೂ। ಜಯವುಗಳಿಸಲೆಂದರ್ಧಸುತಲಿ। ಜಗದ್ದೋದ್ಧಾರನ ನೆನೆಯುತಲಿ। ಜನಕನ ಕುವರಿ ಜಾನಕಿ ಬಂದಳು।।3।।

ಸೀತಾಕಲ್ಯಾಣ ವೈಭೋಗಮೇ ರಾಗ: ನೀಲಾಂಬರಿ-ಖಂಡಲಘುತಾಳ

ಸೀತಾಕಲ್ಯಾಣ ವೈಭೋಗಮೇ-ರಾಮ ಕಲ್ಯಾಣ ವೈಭೋಗಮೇ।।ಪ।। ಪವನಜಾ ಸ್ತುತಿಪಾತ್ರ। ಪಾವನ ಚರಿತ್ರ। ರವಿಸೋಮ ವರನೇತ್ರ। ರಮಣೀಯ ಗಾತ್ರ।।ಅ.ಪ।। ಭಕ್ತಜನ ಪರಿಪಾಲ। ಭರಿತ ಶರಜಾಲ। ಭುಕ್ತಿ ಮುಕ್ತಿ ಲೀಲ। ಭೂದೇವ ಪಾಲ।।1।। ಪಾಮರಾಸುರಭೀಮ। ಪರಿಪೂರ್ಣಕಾಮ। ಶ್ಯಾಮ ಜಗದಭಿರಾಮ। ಸಾಕೇತಧಾಮ।।2।। ಸರ್ವಲೋಕಾಧಾರ। ಸಮರೈಕಧೀರ। ಗರ್ವಮಾನಸದೂರ। ಕನಕಾಗಧೀರ।।3।। ನಿಗಮಾಗಮ ವಿಹಾರ। ನಿರುಪಮ ಶರೀರ। ನಗಧರಾಘ ವಿದಾರ। ನತಲೋಕಾಧಾರ।।4।। ಪರಮೇಶನುತ ಗೀತ। ಭವಜಲಧಿ ಪೋತ। ತರಣಿ ಕುಲ ಸಂಜಾತ। ತ್ಯಾಗರಾಜನುತ।।5।।

ಎಂಥ ಜಾಣೆ ಸೀತೆ ರಾಗ: ಶಂಕರಾಭರಣ

ಎಂಥ ಜಾಣೆ ಸೀತೆ। ಶ್ರೀರಾಮರಿಗೆ ಒಲಿದಳು ಜಗನ್ಮಾತೆ।।ಪ।। ತೆರೆಯಮರೆಯಲಿಹಳು ಜಾನಕಿದೇವಿ। ತೆರೆಯಲ್ಲಿ ನಿಂತಿರಲು। ತುಂಡು ಮುಂಡಾದರು ರಾಜರು ರಾಯರು। ಗುಂಡಿಗೆ ಒಡೆಯಿತು ಕುಂಭ ರಾವಣರಿಗೆ। ರಾಮಲಕ್ಷ್ಮಣರು ಭರತ ಶತ್ರುಘ್ನರು ನಾಲ್ವರು ಬಂದರು ಧನುವಿನ ಎಡೆಗೆ।।1।। ಧನುವನೆತ್ತಿ ಬರಲು, ಲಕ್ಷ್ಮಣ ಸೀತಾರೂಪ ನೋಡೆಂದ ರಾಮ। ಪ್ರತ್ಯಕ್ಷದಿ ಮಹಾಲಕ್ಷ್ಮೀ ಎಂದೆನ್ನುತ ವರಿಷ್ಠರೆಲ್ಲ ಭಿನ್ನಪ ಮಾಡಲು। ಅಷ್ಟಭುಜಂಗಳಾಯುಧಗಳನ್ನು ಮುಟ್ಟದೆ ಎತ್ತಿದ ಹರಿ ಉಂಗುಷ್ಠದಿ।।2।। ಬಾಲಚಂದ್ರ ಫಲ ಪೂಜೆಯಮಾಡಿ। ಜನಕರಾಯನುತಾನಾಗ ನಾಲ್ವರಿಗೆ ಕನ್ನಿಕೆಯನು ಕೊಟ್ಟು। ನಾನಾ ಪರಿಯಲಿಭಾಗ್ಯವನು ಕೊಟ್ಟು। ಭೇರಿ ದುಂದುಭಿ ವಾದ್ಯವ ಬಾರಿಸೆ। ತಾಳೆಯ ಹಿಡಿದರು ಮೂರು ಲೋಕಕ್ಕೆ।।3।। ತಾಟಕಿಯಪಹರಣ ಚಂಪಕ ಪುರಪೀಠ ಮಧ್ಯದಿ ರಾಮ। ಪೀತಾಂಬರಗಳು ಎಡಬಲಕ್ಕೊಳೆಯುತ। ಓಲೆಮುತ್ತಿನ ಸರ ಕಡಕ ಕಂಡಣವ। ನೂತನವಾದ ಆಭರಣ ಭೂಷಣ। ಜಗನ್ಮಾತೆಗೆ ತಂದ ದಶರಥನು ।।4।। ಪತಿತ ಪಾವನ ಮೂರ್ತಿ ಸೀತಾದೇವಿ ಸುತರ ಸೌಭಾಗ್ಯ ಕೀರ್ತಿ। ಕುರುಳು ಕುಂಕುಮ ಫಣೆರಾಗಟೆ। ಹೊಳೆಯುತ। ಅಡಿಗಡಿಗೆ ಮಲ್ಲಿಗೆಗಳುದುರುತ್ತ। ಎಡ ಬಲದಲ್ಲಿ ಚಾಮರಗಳ ಬೀಸುತ। ಕಡಲ ಶಯನನಿಗೆ ಮಾಲೆ ಹಾಕಿದಳು।।5।।

ಹಾರವ ಹಾಕುವೆ ಪ್ರೇಮದಿ ರಾಗ: ಹುಸೇನಿ

ಹಾರವ ಹಾಕುವೆ। ಪ್ರೇಮದಿ ಸಖಿಗೆ। ಮಾಲೆಯ ಕರುಣದೀ। ಸರಸದಿ ಕಾಂತಗೇ।।ಪ।। ಸುರಗಿ ಚಂಪಕ ಮಾಲೆಯಾ ಸಿರಿಲೋಲಾನ ಕಂಠಾಕೇ। ಹಾಕುವೆನೀಗಾಲೇ।।ಅ.ಪ।। ಪ್ರೀತಿಯಿಂದಲಿ ಸೀತೆಯು। ವರಿಸಿದ ಕಾಂತಗೆ। ಕ್ಯಾತಕಿ ಕುಸುಮವ। ಕಟ್ಟಿ ನಾ ಹಾಕುವೇ।।1।। ಸನ್ನುತ ಚರಿತಗೇ। ಸಂಪಿಗೆ ಮಾಲೆಯ ಸಂಪನ್ನ ರಾಮನ। ಕೊರಳೊಳು ಧರಿಸುವೇ।।2।। ರತ್ನದ ಹಾರವಾ। ರಮಣನೆ ನಿಮಗೇ। ರಚಿಸಿ ತಂದಿರುವೆನೂ। ಶಿರವನು ಬಾಗೈ।।3।। ಘಮಘಮಿಸುವ ಒಳ್ಳೆ। ಬಗೆಬಾಗೆ ಕುಸುಮದೀ। ಮಿಗಿಲಾದ ಹಾರ ಕಟ್ಟೀ ಜಗದೀಶನಿಗೆ।।4।।

ಶ್ರೀರಾಂ ಶ್ರೀರಾಂ ರಾಮಚಂದ್ರ ರಾಗ: ಆನಂದಭೈರವಿ

ಶ್ರೀರಾಂ ಶ್ರೀರಾಂ ರಾಮಚಂದ್ರ। ಶರಣು ನಿಮಗೆ ಸಲಾಂ ಸಲಾಂ। ಶ್ರೀರಾಂ ಶ್ರೀರಾಂ ರಾಮಚಂದ್ರ।।ಪ।। ದೇವಾದಿ ದೇವತೆಗಳು ದೇವರನ್ನು ಮೊರೆಯಿಡಲು ರಾಮಾವತಾರನಾಗಿ ರಾಕ್ಷಸಾರ ಗೆಲುವೆನೆನುತ।।1।। ದಶರಥಾನ ಮೊರೆಯ ಕೇಳಿ ಶಿಶುರೂಪವನ್ನೆ ತಾಳಿ ರಾಮಲಕ್ಷ್ಮಣ ಭರತ ಶತ್ರುಘ್ನರೆನುತ ಜನಿಸಿದಾರು।।2।। ಜನಕರಾಜನ ಧನುವನೆತ್ತಿ

ಜಾನಕೀಯ ಕರವ ಪಿಡಿದು ಮಾತೆ ಕೈಕೇಯ ವಾಕ್ಯವ ಲಾಲಿಸಿ ವನಕೆ ತೆರಳಿದಾರು॥3॥ ರಾಮ ಲಕ್ಷ್ಮಣ ಸೀತೆ ಸಹಿತ ಪ್ರೇಮದಿಂದ ವನದೊಳಿರಲು। ರಾವಣ ಸನ್ಯಾಸಿಯಾಗಿ ಸೀತೆಯನ್ನೆ ಕದ್ದು ಪೋದ॥4॥ ಸೀತೆಯನ್ನು ಕಾಣೆನೆನುತ ರಘುನಾಥನೆಂದ ಮಾತಕೇಳಿ ಆಗ ಹನೂಮನ್ನ ಕರೆದು ಸೀತೆಗುಂಗುರ ಕಳುಹಿದಾರು॥5॥ ದೂತ ಹನುಮ ಕಡಲದಾಟಿ ಸೀತೆಗುಂಗುರವನಿತ್ತು ಆಕೆ ಚೂಡಾಮಣಿಯ ತಂದು ಶ್ರೀರಾಮರಿಗೆ ಒಪ್ಪಿಸಿದಾನು॥6॥ ಸೇತುವೆಯ ಕಟ್ಟಿ ರಾಮ ಧೂರ್ತ ರಾವಣನ್ನ ಕೊಂದು ಸೀತೆ ಸಹಿತ ಪುರಕೆ ತೆರಳಿ ಮಾತೆ ಚರಣಕೆರಗಿದಾರು॥7॥ ಮುದ್ದು ಸೀತೆಯ ಸಹಿತ ವಜ್ರದಾಸಿಂಹಾಸನಾದೊಳಿರಲು ಪಟ್ಟಾಭಿಷೇಕಮಾಡಿ ಕರ್ಪೂರದಾರತಿ ಬೆಳಗಿದಾರು॥ ಮಂಗಳಂ ಶ್ರೀರಾಮರ್ ಮಹಿಮೆಯನು ಕೊಂಡಾಡುವರಿಗೆ ಕಂಗಳಿಂದ ನೋಡಿ ಎನ್ನ ಕಾಯಬೇಕೊ ನಾರಸಿಂಹ॥

ಸರಿ ಎವ್ವರೇ? ಶ್ರೀ ಜಾನಕೀ ನೀ

ಸರಿ ಎವ್ವರೇ? ಶ್ರೀ ಜಾನಕೀ ನೀ॥ಪ॥ ಪರಮಾತ್ಮ ನಿಕ್ಕೈ ಗಡಿದೇರಿ ಸದಾ ಸಿರುಲಿಚ್ಚುಟಕು ಜೇರಿ ಗೊಲ್ಚಿನ ನಿ॥ಅ.ಪ॥ ವನಮಂದು ಭಯಂಕರ ಮೈನ ತಾ ವುನನಿಲ್ತುನನಿ ಮನಸುದೆಲಿಸಿ ಕನಕಾಂಗಿ, ಅಂದಂದುನ ರಾಜಸುಖಂ ಬುನುಗಲ್ಗ ಜೇಸಿತಿವೇ, ತ್ಯಾಗರಾಜನುತ॥ಚರಣ॥



ರಾವಣಾಂತಕ ರಾಮನಾ ಉಯ್ಯಾಲೆಯ (ಉಯ್ಯಾಲೆ) ರಾಗ: ಪಂತುವರಾಳಿ

ರಾವಣಾಂತಕ ರಾಮನಾ ಉಯ್ಯಾಲೆಯ ನಾರಿಯರೂ ಪಾಡಿ ಪೊಗಳೇ॥ಪ॥ ಚಿತ್ರಮಂಟಪದ ಮಧ್ಯದೀ ಹೊಳೆವೋ ನವರತ್ನ ಕೆತ್ತಿಸಿದ ಮಂಚದರಸೀ ಪಚ್ಚೆ ಸರಪಣಿಯ ಹೂಡಿ ವಿಶ್ವಕರ್ಮನೂ ನಿರ್ಮಿಸೆ॥1॥ ಶಿವಧನುವನು ಮುರಿದನಾಸೀತೆಯನು ನಯದಲಿ ಕರಪಡಿದಾ... ಪರಮಪಾವನಾ ರಾಮನಾ ಉಯ್ಯಾಲೆಯಾ॥2॥ ಲಲನೆಯರುಪಾಡಿಪೊಗಳೇ ಕಡಗ ಕಂಕಣ ಘಲಿರೆಂದು ಜಾನಕಿಗೆ ನಿಡಿಗೆ ಶಳೆ ಬಳುಕುತಾ...ಪತಿಯ ಮುಖವನ್ನೇ ನೋಡುತಾ ಏರಿದಳು ರಘು ನಂದನನ ಉಯ್ಯಾಲೆಯಾ॥3॥ ಮುಂದಲೆಯಬಟ್ಟು ಅಲಗುತ್ತಾ ಜಾನಕಿಗೆ ಮುಡಿದ ಮಲ್ಲಿಗೆ ಉದುರುತ್ತಾ ಪತಿಯ ಮುಖವನ್ನೇ ನೋಡುತ್ತಾ ಏರಿದಳು ರಘು ನಂದನನ ಬಲ ತೊಡೆಯೊಳು॥4॥ ಅಂಗಜಜನಕನೇ ಲಾಲೀ... ಪಾದದಲಿ ಗಂಗೆ ಪಡೆದವಗೆಲಾಲಿ... ತುಂಗ ವಿಕ್ರಮನೆ ಲಾಲಿ ಶ್ರೀ ಮುದ್ದುರಂಗ ಕೇಶವನೇ ಲಾಲೀ॥5॥ ತೂಗಿದರು ರಾಮ ಜಾನಕಿಸಹಿತಲೇ ಆತನಾಡಿದಾ ಉಯ್ಯಾಲೆಯಾ... ಶ್ರೀರಂಗನಾಥನಾಡಿದ ಉಯ್ಯಾಲೆಯಾ ॥6॥

ಕೊಟ್ಟಾನೇ ಮಧುಪರ್ಕ ಮಿಥಿಲೇಂದ್ರನು (ಮಧುಪರ್ಕ) ರಾಗ: ನಾಟ

ಕೊಟ್ಟಾನೇ ಮಧುಪರ್ಕ ಮಿಥಿಲೇಂದ್ರನು ಕೊಟ್ಟಾನೆ ಮಧುಪರ್ಕವ॥ಪ॥ ಕೊಟ್ಟನುತ್ಸಾಹದಲ್ಲಿ ಸೀತಾರಾಮರಿಗೆ ವಿಶಿಷ್ಟ ಪಾತ್ರೆಗಳ ಸುವಸ್ತ್ರಗಳನು ತಾನು॥ಅ.ಪ॥ ಮಗಳ ಧಾರೆಯನೆರೆವ ಆನಂದದಿ ಜಗಜಗಿಸುತಲಿರುವ ಸೊಗಸಾದ ಸುವರ್ಣ ತಂಬಿಗೆ ಮತ್ತೆ ಹರಿವಾಣಾದಿಗಳನ್ನಿತ್ತನು ರಾಯ ಅಗಣಿತ ಮಹಿಮಗೆ॥1॥ ಪೀತಾಂಬರಾಧಿಗಳ ಒಪ್ಪುವ ಬಹುಜಾತಿಯ ವಸನಂಗಳ ರೀತಿಯಿಂದೊದಗಿಸಿ ಸೀತಾರಾಮರಿಗೆ ಸಂಪ್ರೀತಿಯಿಂದಲಿ ಕೊಟ್ಟ ಭೂತಳೇಶ್ವರ ತಾನು॥2॥ ದಶರಥನಂದನಗೆ ಸರ್ವರಿಗೆ ಸಂತಸವನ್ನು ಬೀರಿದಗೆ ವಸುಧೆಯ ಭಾರವನಿಳುಹಿದ ದಶಮುಖಾಂತಕನಿಗೆ ಪಶುಪತಿ ಶಶಿಧರಸಖನಿಗೆ॥3॥ ನರನಾಟಕದ ಹರಿಗೆ ಸಂಘರದಿ ದುಷ್ಟರನೆಲ್ಲಾ ಗೆಲಿದವಗೆ ಚರಣಕಮಲಕೆ ನೀರೆರೆದು ಪೂಜೆಯಮಾಡಿ ತರಳೆಯ ಧಾರೆಯ ನೆರೆವೆನೆಂದೆನುತಲಿ॥4॥

ಕನ್ಯಾದಾನವ ಗೈದ ಸಂಪನ್ನ ಮಹೀಪತಿ ಜನಕನು ರಾಗ: ಮಧ್ಯಮಾವತಿ

ಕನ್ಯಾದಾನವ ಗೈದ ಸಂಪನ್ನ ಮಹೀಪತಿ। ಜನಕನು ರಘುಪತಿಗೆ॥ಪ॥ ಭೇರಿ ಕಹಳೆಗಳು ಭೋರಿಡುತಿರೆ। ವರ

ನಾರಿಮಣಿಯರೆಲ್ಲ। ಸೇರಿ ಪಾಡುತಿರೆ। ಭೂರಿ। ದಾನವನ್ನೋರಂತೆಸಗುತ। ನೀರಜಾಕ್ಷ ಶ್ರೀರಾಮಗೆ ಹರುಷದಿ।।1।। ನಿರುಪಮ ಸುಂದರ। ಚರಣಯುಗವ ತಾಂ ಪರಿಮಳ। ವಾರಿಧಿಯೊಳುರೆ ತೊಳೆಯುತಲಾ। ಸರಸಿಜಾಕ್ಷಗಾ। ಭರಣಗಳಿಡುತೆ ಕಸ್ತೂರಿಯ ತಿಲಕವಾ ವಿರಚಿಸುತಾಗಳೆ।।2।। ಅಂಬರದೊಳು ಸುರರಂಬುವ। ಕರೆಯಲ್ ಕುಂಭಿನಿಪತಿತಾಂ ಸಂಭ್ರಮದಿಂದಲಿ ಅಂಬು। ಜಾಕ್ಷನಾ ಕರಕಮಲದೆ ಶಶಿ। ಬಿಂಬವದನೆಯಾ ಕರಗಳ ನಿಡುತಲಿ।।3।। ಮೃಡಕೋದಂಡವನ್ನೊಡೆದ। ಶ್ರೀರಾಮಗೆ ಪೊಡವಿಪನನುಪಮ। ದುಡುಗೊರೆಯೀಯುತೆ ಪೊಡವಿ। ಅಮರರೆಲ್ಲ ಕಡು ಜಯಜಯವೆನೆ। ದೃಢದಿ ಪೊಡವಿ ಪತಿ ಕಡು। ಸಂಭ್ರಮದೊಳು।।4।। ಜಯತು ಜಯತು ಜಯ। ಜಯತು ಜಯತು ಜಯ ಘೋಷವು ತನ್ಮಯವಾಗಿರಲಾ ಜಯತು। ಜಾನಕೀ ರಾಮರ್ಗೆನುತಲಿ ಜಯ ಘೋಷದಿ ಮಾಂಗಿರಿ ಪತಿ ದಯದಿಂ।।5।।

ಧಾರೆಯನೆರೆದ ಜನಕರಾಯ — ರಾಗ: ಕಮಾಚ್

ಧಾರೆಯನೆರೆದ ಜನಕರಾಯ ಸೀತಾದೇವಿಯನು। ಧಾರೆಯನೆರೆದ ಜನಕರಾಯ ಸೀತಾದೇವಿಯನು।।ಪ।। ಧಾರೆಯನೆರೆದ ವಯ್ಯಾರದ ಮಗಳನು ಧಾರುಣಿಯರಸನು ಶ್ರೀರಘುರಾಮಗೆ।।ಅ.ಪ.।। ಇಳೆಯ ಪಾಲಕರ ಗರ್ವವನ್ನು ಕ್ಷಣಮಾತ್ರದಲ್ಲಿ ತಡೆದ ಶಂಕರನ ಛಾಪವನ್ನು ಸುಲಭದಿಂದಲಿ ಕಡಿಮಾಡಿದ ರಘುಕುಲ ತಿಲಕನರ್ಚಿಸಿ ಪರಮಾನಂದದಿ।।1।। ವಸುಧೆಯ ಭಾರವನ್ನು ಬಿಡದೆ ಪರಿಹರಿಸುವ ಬಿಸಜ ಲೋಚನನಾದ ಹರಿಯ ಪೊಂಬಟ್ಟಲಲಿ ಮಧುಪರ್ಕದಿ ಪೂಜಿಸಿ ಶಶಿಧರ ಸಖನೆಂದುಸುರುತ ಬೇಗದಿ ಧಾರೆಯನೆರೆದರು।।2।। ಹತ್ತಾವತಾರದಿಂದ ಎಸೆವ ಸಮಸ್ತ ದುಷ್ಟದೈತ್ಯರೆಲ್ಲರನ್ನು ಗೆಲುವ ಸತ್ಯಸಂಧನೆನುತ್ತ ದೇವಗತ್ಯಾನಂದದಿ ಪುತ್ರಿಯ ವಿಭವದಿ।।3।। ಕೋಮಲ ಕಾಯದಿಂದಲೆಸೆವ ಚೆಲ್ವಿನ ಮುದ್ದುಕಾಮಿನಿ ರನ್ನೆಯೆಂದೆನಿಸುವ ಸೋಮಕೋಟಿ ಕಿರಣದಿ ತಳತಳಿಸುವ ಭೂಮಿಜಾತೆ ಸೀತೆಯನತಿ ಹರುಷದಿ।।4।।

ಅತಿವನಿಚ್ಚಿ ಪೆಂಡ್ಲಿ ಚೇಸೇನು (ಧಾರೆ)

ಅತಿವನಿಚ್ಚಿ ಪೆಂಡ್ಲಿ ಚೇಸೇನು। ಅವನಿಪಾಲುಡೊ।। ಸತಿಶಿರೋಮಣಿ ಸೀತಾದೇವಿನಿ।।ಪ।।। ಸರ್ವಸಾಕ್ಷಿಗಾಂತಗುರುಲು ವಸಿಷ್ಠಾದಿ ಮುನಿಲು ವರಲು ಗಲ್ಗಾಗಾ। ಸರಗ ವೇದ ಮಂತ್ರ ಮುಲನು ಚದವಿ ಚುಂಡಗಾ।।1।। ಸೃಷ್ಟಿಮುಗನೊ ಸರ್ವಜನಲು ಸಂತುಷ್ಟಿ ಪೊಂದುಗಾ। ಇಷ್ಟಮ್ಯೆನ ಭೋಜನಮುಲು ಪೆಟ್ಟಿಪೊಂದುಗಾ।।2।। ಕೋರಿನಟ್ಲು ಧನುಜೆಯಂಬು ಕೊಟ್ಲು, ಕೊಲದಿನೇ ಧಾರುಣಿ ಸುರಾದುಲುನುಕು। ದಾನ ಮೊಸಗುಚೊ।।3।। ಇಕ್ಷಿತಿ ನಾರಾಯಣ ವಿರಾಕ್ಷಿ ಕುಂಡಗಾ ಮೋಕ್ಷಗುಂಡ ದೇವುನಿ ಕಟಾಕ್ಷ ಮೆಲರಗಾ।।4।।

ಆನಂದಂ ಆನಂದಂ ಆನಂದಮೇ (ಮಾಂಗಲ್ಯಧಾರಣೆ) — ರಾಗ: ಆನಂದಭೈರವಿ

ಆನಂದಂ ಆನಂದಂ ಆನಂದಮೇ ಪರಮಾನಂದಂ ಆನಂದಂ ಆನಂದಮೇ।।ಪ।। ಶ್ರೀರಾಮರ್ ಮಣಮಗನ್ ಆನಾರೇ। ಆನಂದಮೇ।।ಪ।। ಶ್ರೀರಾಮರ್ ಮಣಮಗನ್ ಆನಾರೇ।। ನಮ್ಮ ಜಾನಕಿ ಮಣಮಗಳ್ ಆನಾಳೇ।।1।। ವಂದವರ್ಕುಂ ಪಾರ್ತವರ್ಕುಂ ಆನಂದಂ। ಸೀತೈಕ್ಕುಂ ರಾಮನಕ್ಕು ಆನಂದಂ।।2।। ನಾಮ್ ಸೈದ ಪೂಜಾಫಲಮುಂ ಇನ್ರುಂ ಫಲಿತ್ತದಮ್ಮ। ಘಟ್ಟಿಮೇಳಂ ಕೊಟ್ಟಿ ತಾಳಿಯೈ ಕಟ್ಟಿಯಾಚ್ಚುದಮ್ಮ।।3।।

ಮಂಗಳಸೂತ್ರವ ಕಟ್ಟಿದ (ಮಾಂಗಲ್ಯಧಾರಣೆ) — ರಾಗ: ಕಾಂಬೋಧಿ

ಮಂಗಳಸೂತ್ರವ ಕಟ್ಟಿದ ರಾಘವನು ಅಂಗನೆ ಜಾನಕಿಗೆ। ಮಂಗಳ ಪಾಡುತ ದೇವಾಂಗನೆಯರು ಶುಭದಲಿ ಸಿರಿಗೆ।।ಪ।। ಭೂದರೇಂದ್ರರು ಜಯ ವೇದಗಳು ಪೊಗಳೆ। ರಂಬಾದಿ ಮೇನಕೆ ಸುರಪತಿಯರು ನಲಿಯೆ।। ನಾದ ದುಂದುಭಿಗಳು ವೇದ ಘೋಷಗಳು। ಶ್ರೀಧರನಾಂಗದೊಳು ಸುಮ ಸರಿಯಾ।।1।। ವಾಸವಾದಿಗಳು ಸಂತೋಷದಿ ಪೊಗಳೆ। ಈಶ ಬ್ರಹ್ಮಾದಿ ಸುರಮುನಿಗಳು ನಲಿಯೆ।। ಭೂಸುರೆ ಜಾನಕಿಯ ಕಂಠಕ್ಕೆ ಮೇಲಾಪದಲಿ। ಶ್ರೀಶ ವೆಂಕಟೇಶನಾ ಸತಿಗೆ।।2।।

ಭಕ್ತ ವತ್ಸಲನ ಪಾದವ ತೊಳೆದು (ವಿವಾಹವಿಧಿ) ರಾಗ: ನೀಲಾಂಬರಿ

ಭಕ್ತ ವತ್ಸಲನ ಪಾದವ ತೊಳೆದು ವಸ್ತ್ರಾಭರಣ ಭೂಷಣಂಗಳು। ಭೂಷಣಗಳಿಂದಲಂಕರಿಸಿ ವಸು ಮೂರುತಿಗೆ। ಮಧುಪರ್ಕವನೆ ಶಾಸ್ತ್ರೋಕ್ತ ಕ್ರಮದಿಂದ ಕೊಡಿಸಿದರು। ಕಲ್ಯಾಣಂ ಸೀತಾಕಲ್ಯಾಣಂ॥ಪ॥ ವರರತ್ನದಹಾರ ವಜ್ರದ ಪದಕಾ ಉನ್ನತ ದುಕೂಲದಿವ್ಯಾಭರಣ। ಧರಣಿ ದಾನವು ಸಾಲಿಗ್ರಾಮ ಭೂದಾನವು। ಪರಮಾತ್ಮ ಗರ್ಪಿಸಿ ಧಾರೆ ಎರೆದರಾಗ। ಕಲ್ಯಾಣಂ ಸೀತಾ ಕಲ್ಯಾಣಂ॥1॥ ಮಾಂಗಲ್ಯ ಸೂತ್ರವ ಮಹಲಕ್ಷ್ಮೀಗೆ ಅರ್ಪಿಸಿ। ಹೆಂಗಳು ಸಹಿತ ಕಂಕಣವ ಕಟ್ಟಿ ಅಂಗನೆಯರು ವಸ್ತ್ರಾಭರಣ ಭೂಷಣಗಳಿಂದ ಅಲಂಕರಿಸಿ। ಬಂದು ಒಪ್ಪಿದ ಸೀತಾ ರಾಮ ಸಹಿತ। ಕಲ್ಯಾಣಂ ಸೀತಾ ಕಲ್ಯಾಣಂ॥2॥ ಜಾನಕಿಯನು ರಘುರಾಮಗೂ ಊರ್ಮಿಳೆಯನು ಲಕ್ಷ್ಮಣದೇವಗೂ। ಮಾಳವಿ ಭರತಗೂ ಶೃತಕೀರ್ತಿ ಶತ್ರುಘ್ನಗೂ। ಧಾರೆ ಎರೆದು ಕೊಟ್ಟನೆ ಜನಕಾ। ಕಲ್ಯಾಣಂ ಸೀತಾ ಕಲ್ಯಾಣಂ॥3॥ ರಾಜಕುಮಾರಿಗೂ ರಘುರಾಮಗೂ। ತಾ ಲಾಜಾ ಹೋಮ ಔಪಾಸನಗಳ ರಚಿಸಿ। ಮೂರ್ಜಗದೊಡೆಯನಿಗೆ ಅರಿಸಿನ ಎಣ್ಣೆಯ ಮಾಡಿ। ಭೋಜನಂಗಳ ಮಾಡಿ ಸಂಭ್ರಮದೀ। ಕಲ್ಯಾಣಂ ಸೀತಾಕಲ್ಯಾಣಂ ॥4॥ ಇಂದ್ರಗೋಪುರವ ಸೋಲಿಸುವ ಪಟ್ಟಣದೊಳು। ತಂದಿಳುಹಿದ ಹೊಳಲರುವಿದನು। ಅಂಗಜನೈಯನು ಹೊಳಲ ಶೃಂಗರಿಸಿ। ಬಂದು ಒಪ್ಪಿದ ಸೀತಾರಾಮ ಸಹಿತಾ। ಕಲ್ಯಾಣಂ ಸೀತಾ ಕಲ್ಯಾಣಂ॥5॥ ಎಣ್ಣೆಗಂಟು ಹೊಳೆಯುತಾ ಸಣ್ಣಗಂಟು ಬಳಕುತಾ। ಕಣ್ಣಿಗೆ ಕಾಡಿಗೆಯು ಹೊಳೆಯುತ್ತಾ। ಜನಕನಾ ಕನ್ನೆಯರು ಹೊಳಲು ಸುತ್ತುತ್ತಾ ಕರೆಯುತ್ತಾ। ಕಲ್ಯಾಣಂ ಸೀತಾ ಕಲ್ಯಾಣಂ...॥6॥ ಹೊಳಲು ಹೊಕ್ಕು ನಿಂದರು ಜನಕನ ಸತಿಯರು। ಕನಕದಾರುತಿಯ ಬೆಳಗಿದರು। ಮಿಸುಣಿಯ ಪಟ್ಟೆಯ ದಶರಥರಾಯನು। ಶಶಿಮುಖಿಯರಿಗೆ ತಂದು ಓದಿಸಿದರು। ಕಲ್ಯಾಣಂ ಸೀತಾ ಕಲ್ಯಾಣಂ॥7॥ ಎನ್ನಾನೆಗೆ ಜನಕ ಹನ್ನೆರಡು ಸಾವಿರ। ನಿಮ್ಮ ಆನೆಯನ್ನು ಕೊಡಿರೆಂದಳು। ನಿಮ್ಮ ಆನೆಯನು ಕೊಡಿರೆಂದು ಸೀತಾದೇವಿ। ತನ್ನ ವಲ್ಲಭನ ಕೇಳಿದಳು ನಗುತಾ। ಕಲ್ಯಾಣಂ ಸೀತಾ ಕಲ್ಯಾಣಂ॥8॥ ಅಕ್ಕಿ ಆನೆಗೆ ಜನಕ ಇಪ್ಪತ್ತು ಸಾವಿರ। ಉಪ್ಪಿನಾನೆಯನು ಕೊಡಿರೆಂದನು। ಉಪ್ಪಿನಾನೆಯನು ಕೊಡಿರೆಂದು ಸೀತಾರಾಮ। ತನ್ನ ವಲ್ಲಭೆಯ ಕೇಳಿದನು ನಗುತ। ಕಲ್ಯಾಣಂ ಸೀತಾ ಕಲ್ಯಾಣಂ॥9॥ ಕಡಲೊಡೆಯಾ ಜಾತಿಪಟ್ಟೆಯನುಡಿಸಿ। ಮುತ್ತುಮಡಿಲಿಗೆ ರತ್ನವತುಂಬಿಸಿ। ಗಡಿಯಿಲ್ಲದ ಬಳುವಳಿಯಸಾಗಿಸಿ। ಕಡಲೊಡೆಯ ಕಾಂತೆಯ ಸತಿಸಹಿತ। ಕಲ್ಯಾಣಂ ಸೀತಾ ಕಲ್ಯಾಣಂ॥10॥ ಅತ್ತೆಗುತ್ತರವ ಕೊಡದೆ ನೀನು। ಮತ್ತೆ ಮೈದಂದಿರ ಮನವರಿತು। ನಿತ್ಯಪತಿಸೇವೆಯನು ಮಾಡುತ್ತಾ। ಪರಚಿತ್ತಾಜನಾಜ್ಞೆಯೊಳಿರು ಎಂದನು। ಕಲ್ಯಾಣಂ ಸೀತಾ ಕಲ್ಯಾಣಂ॥11॥ ಸುತೆನಿಮ್ಮ ಪತಿಯ ಮನಸಾ ಅರಿತೂ। ಪತಿವ್ರತ ಧರ್ಮದ ದಾರಿಯ ನಡೆಸಿ। ಅತಿಶಯದಿಂದತ್ತೆಮಾವನ ಸೇವೆಲಿ। ಹಿತಕರಳಾಗಿರಮ್ಮ ಎಂದನು ಜನಕ। ಕಲ್ಯಾಣಂ ಸೀತಾ ಕಲ್ಯಾಣಂ॥12॥ ರಕ್ಕಸರ ಶ್ರೀಜಾತೆ ನಡತೆಯಲ್ಲಾ। ಕರ್ಕಸವಾ ಮುಚ್ಚಿಪುದು। ಘನತೆಯಲ್ಲಾ ಅತ್ತೆ ಕೌಸಲ್ಯೆಗೆ। ಅನುಕೂಲವಾಗಿರು ಎಂದು ಉತ್ತಮ ಮಾತ ಪೇಳಿದ ಜನಕ। ಕಲ್ಯಾಣಂ ಸೀತಾ ಕಲ್ಯಾಣಂ॥13॥ ಆರು ಸಾವಿರ ರಥ ಕರಿತುರಗ। ಆರು ಸಾವಿರ ಕಾಮಧೇನುಗಳು। ಆರು ಸಾವಿರ ಸೇವೆಗೆ ದಾಸಿಯರನು। ಪುತ್ರಿಗೆ ಕೊಟ್ಟು ಕಳುಹಿಸಿದ। ಕಲ್ಯಾಣಂ ಸೀತಾ ಕಲ್ಯಾಣಂ॥14॥

ಜಯ ಜಾನಕೀಕಾಂತ ರಾಗ: ನಾಟಿ-ಖಂಡಛಾಪುತಾಳ

ಜಯ ಜಾನಕೀಕಾಂತ ಜಯ ಸಾಧುಜನ ವಿನುತ॥ಪ॥ ಜಯತು ಮಹಿಮಾನಂತ ಜಯ ಭಾಗ್ಯವಂತ। ಜಯ ಜಯ॥ಅ.ಪ॥ ದಶರಥನ ಮಗ ವೀರ ದಶಕಂಠ ಸಂಹಾರ। ಪಶುಪತೀಶ್ವರ ಮಿತ್ರ ಪಾವನ ಚರಿತ್ರ। ಕುಸುಮಬಾಣ ಸ್ವರೂಪ ಕುಶಲಕೀರ್ತಿ ಕಲಾಪ। ಅಸಮ ಸಾಹಸ ಶಿಕ್ಷ ಅಂಬುಜದಳಾಕ್ಷ॥1॥ ಸಾಮಗಾನವಿಲೋಲ ಸಾಧುಜನ ಪರಿಪಾಲ। ಕಾಮಿತಾರ್ಥಪ್ರದಾತ ಕೀರ್ತಿ ಸಂಜಾತ। ಸೋಮಸೂರ್ಯಪ್ರಕಾಶ ಸಕಲ ಲೋಕಾಧೀಶ। ಶ್ರೀ ಮಹಾ ರಘುವೀರ ಸಿಂಧುಗಂಭೀರ॥2॥ ಸಕಲ ಶಾಸ್ತ್ರ ವಿಚಾರ ಶರಣಜನ ಮಂದಾರ। ವಿಕಸಿತಾಂಬುಜವದನ ವಿಶ್ವಮಯಸದನ। ಸುಕೃತ ಮೋಕ್ಷಾಧೀಶ ಸಾಕೇತಪುರವಾಸ। ಭಕುತವತ್ಸಲ ರಾಮ ಪುರಂದರವಿಠಲ॥3॥

ಪತಿಕಿ ಹಾರತೀ ರೇ ರಾಗ: ಸುರುಟಿ-ಆದಿತಾಳ

ಪತಿಕಿ ಹಾರತೀ ರೇ ಸೀತಾ॥ಪ॥ ಅತಿ ಮೃದುತರ ಸತ್ವ ಭಾಷಣುನಿಕಿ ಅಖಿಲಾಂಡನಾಧುನಿಕಿ ಸೀತಾ॥ಅ.ಪ॥ ಬಂಗರು ರಂಗು ಭಜಂಗುನಿ ಪೈನಿಚೆ ಲಂಗು ಚುನು ಮರಕತಾಂಗುಡು ಮೆರುಪು ತೆರಂಗುನ ಮೆರೆಯು ತನಯಂಗನತೋ ಪಲುಕಂಗ ಜೂಚಿಯುಪ್ಪೊಂಗುಚು ಸೀತಾ॥1॥ ಅಕ್ಕರ ತೋ ನಿರುಪ್ರಕ್ಕಲ ನಿಲಿಚತುಳುಕ್ಕನಿ ಮೆರೆಯುಗ ಚಕ್ಕನಿ ಮೋಮುನ ಚುಕ್ಕಲರಾಯನಿ ಮಕ್ಕುವತೋ ಸರಿಮುಕ್ಕೆರ ಕದಲಗ ಗ್ರಕ್ಕುನ ಸೀತಾ॥2॥ ರಾಜ ವಿಭಾಕರ ರಾಜ ಧರಾಮರ ರಾಜ ಶುಕಾಜವಿರಾಜುಲು ಚೂಡಗ ರಾಜ ಮಾನಮಗು ಗಾಜುಲು ಘಲ್ಲನ ರಾಜಿತ ತ್ಯಾಗರಾಜ ನುತುನಿಕಿ ಶ್ರೀ॥3॥

ಆರುತಿಯ ತಾರೆ ಬೇಗ ರಾಮ ಸೀತೆಗೇ ರಾಗ: ತೋಡಿ

ಆರತಿಯ ತಾರೆ ಬೇಗ। ರಾಮ ಸೀತೆಗೇ॥ಪ॥ ಬೇಗ ರಾಮಸೀತೆಗೇ॥ಅ.ಪ॥ ದಶರಥಾನಲ್ಲಿ। ಪುಟ್ಟಿ ನೀನು। ಜಾನಕಿ ತಂದ್ಯಾ। ಶ್ರೀರಾಮ ಜಾನಕೀ ತಂದ್ಯಾ। ಮಾತೃಪಿತೃಗಳ ವಾಕ್ಯಕೇಳಿ। ವನಕೆ ತೆರಳಿದೆಯಾ ಶ್ರೀರಾಮವನಕೆ ತೆರಳಿದೆಯಾ। ಶ್ರೀರಾಮ ವನಕೆ ತೆರಳಿದೆಯಾ॥1॥ಸೇತುವೇಯ ಕಟ್ಟಿ ನೀನು। ಶರಧೀದಾಟಿದೆಯೋ। ಪಾಪಿರಾವಣನ ಕೊಂದು ನೀನು ವಿಭೀಷಣನಿಗೆ ಪಟ್ಟಕಟ್ಟಿದೆಯೋ। ಶ್ರೀರಾಮ ಪಟ್ಟಕಟ್ಟಿದೆಯೋ। ಶ್ರೀರಾಮ ಪಟ್ಟಕಟ್ಟಿದೆಯೋ॥2॥ ಕಾನನಾದಿ ಇದ್ದು ನೀನು। ಪಡೆದೆ ಲವಕುಶರಾ। ವಾಲ್ಮೀಕಿಋಷಿಗಳಿಂದ ಧನ್ಯಳಾದೆಯೋ। ದೇವೀ ಧನ್ಯಳಾದೆಯೋ ದೇವೀ। ಧನ್ಯಳಾದೆಯೋ॥3॥

ಓದಿಸಿ ವಧುವರರಿಗೆ ಉಡುಗೊರೆ ರಾಗ: ಮೋಹನ

ಓದಿಸಿ ವಧುವರರಿಗೆ ಉಡುಗೊರೆ। ಮೇದಿನೀ ಸುತೆ ಶ್ರೀರಾಘವಗೇ॥ಪ॥ ಗಿರಿಸುತೆ ನಂದನೆ ಮಾಡುವೆ ವಂದನೆ ದಶರಥನಂದನ। ಚರಿತೆಯನೂ ಜನಕನ ಸುತೆ ಜಾನಕಿ ಉಡುಗೊರೆಯನೂ। ಪೊಗಳುವುದು ವರ ಕೊಡು ನೀನೂ॥1॥ ಮುತ್ತಿನ ಸರ ಏಕಾವಳಿ ಸರ ಪಂಚರತ್ನದ ಸರ। ಪದಕಗಳೂ ಕಂಚುಕಿ ಮಾಂಗಲ್ಯ ವಸ್ತ್ರಾಭರಣವಾ। ಮುಂಚಿತವಾಗಿ ತಂದಿರಿಸಿದರೂ॥2॥ ಕಾಶಿ ಪೀತಾಂಬರ ಜರಿಶಾಲ್ಗಳು ಘನಾನೂತನ ವಸ್ತ್ರಾಭರಣವನೂ ಪ್ರೀತಿಯಿಂದ ಪಾರ್ವತಿ। ನಗುತಲಿ ಬೇಗನೇ ಆತುರದಲಿ ತಂದಿರಿಸಿದರೂ॥3॥ ನೆರೆದಿಹ ಸಭೆಯಲಿ ಹರಸಿ ವಶಿಷ್ಠರೂ ಕೊಡುತಲಿ। ಉಡುಗೊರೆ ವೀಳ್ಯವನೂ ಹರಸುತ ಮಂತ್ರಾಕ್ಷತೆ। ವೇದೋಕ್ತದೀ ಪರಿಪರಿ ವಸ್ತ್ರದು ಕೂಲವನೂ॥4॥

ಜಗವಂದಿತಾ ಪನ್ನಗಶಯನ ಬಾ ರಾಗ: ಕದನಕುತೂಹಲ-ಆದಿತಾಳ

ಜಗವಂದಿತಾ ಪನ್ನಗಶಯನ ಬಾ। ಸೊಗಸಾದ ಮುತ್ತೀನ ಪೀಠಕೀಗ॥ಪ॥ ಸುರರಾಜ ವಂದಿತ ಸುಂದರಾ। ಧೀರ ಬಾರೊ ಶ್ರೀರಾಮಚಂದ್ರ॥ಅ.ಪ॥ ದಾನವಾಂತಕ ದೀನ ರಕ್ಷಕಾ। ವಾನರೇಂದ್ರ ಸೇವಿತ ಗಿರಿಧರಾ॥1॥ ಗಾನಲೋಲ ಮಾನಿತ ಸುರವರಾ। ಜ್ಞಾನಗೋಚರಾ ನಿತ್ಯಾನಂದಕರ॥2॥

ಚೆಂಡನಾಡಿದ ಶ್ರೀರಾಮಚಂದ್ರ ರಾಗ: ಖರಹರಪ್ರಿಯ

ಚೆಂಡನಾಡಿದ ಶ್ರೀರಾಮಚಂದ್ರ॥ಪ॥ ಸಲ್ಲಲೀತಾಂಗನೂ ನಲ್ಲೆಯಾ ಗಲ್ಲಾವಾ ಮೆಲ್ಲಾನೆ ಮುಟ್ಟುತ್ತಾ ಮಲ್ಲೀಗೇ ಹೂವ್ವೀನಾ॥1॥ ದಶರಥಾನ ಕಂದಾ ರಾವಣನಾ ಕೊಂದಾ। ಸೀತೆಯನ್ನೆ ತಂದಾ ಲೋಕಕ್ಕೆ ಆನಂದಾ॥2॥ ಸೇತುವೇಯ ಕಟ್ಟೀ ಶರಧೀಯ ದಾಟೀ। ವಿಭೀಷಣನೀಗೇ ಪಟ್ಟವನ್ನೇ ಕಟ್ಟೀ॥3॥

ನೀರಾಡಿನಾನ್ ಶ್ರೀರಾಮ (ತಮಿಳು-ಓಕುಳಿ) ರಾಗ: ನೀಲಾಂಬರಿ

ನೀರಾಡಿನಾನ್ ಶ್ರೀರಾಮ ನಿರೈತರುಂ ಕಳುಲ್ಶೂಳ ಶೀರಾರ್ ಕೈಲೆ ಸ್ನಾನಂ ಶೈಯ್ಯ ಶೀರ್ಮಗು ದಾಶರಥೆ ॥ಪ॥ ಮೇಳಂ ಪದಿನೆಟ್ಟುಂ ಕೊಟ್ಟ ಮೇಲಾರ್ ಗೀತಂ ಇಸೈಕ್ಕ। ತಾಳಾದಿಗಳುಡನ್ ಸೇರಾ ಶೀಲಮಿದು ಸೀತೈ ತಲೆಕುನಿಯಾ

॥1॥ ಪಪ್ಪಳ ಫಳ ಫಳವೆನ ತೈಲಾ ಪರಿಮಳ ಫಲವಿಧ ವೀಸಿಡ। ತಕಿಟ ತಕಿಟ ತದ್ಧೋಂಎನ ತಾಳಂಗಳ್ ತಲ್ಶೈತನಿ ತೀಂರ್ದಿಡ॥2॥

ಬಾರೇ ಗುಣಮಣಿ ನಿನ್ನನು ರಾಗ: ಅಭೇರಿ

ಬಾರೇ ಗುಣಮಣಿ ನಿನ್ನನು ಕರೆವೆ ರಾಮನ ರಾಣಿ। ಸೀತೆ ಬಾರೇ॥ಪ॥ ಜನಕನುದರದಿ ಜನಿಸಿ ಜಾನಕೀ ವರಮಾತೆ ಸೀತೆ ದನುಜಾಂತಕ ಶ್ರೀರಾಮನ ಕೊರಳಿಗೆ ಹೂಮಾಲೆ ಧರಿಸಿದ ವರಮಹಾಲಕ್ಷ್ಮೀ॥1॥ ಮಾಯಾಮೃಗವ ಕಂಡ ನೀ ಶ್ರೀರಾಮನಲಿ ಪ್ರಾರ್ಥಿಸಿದೆ। ನೀ ಶ್ರೀರಾಮನಲಿ ಪ್ರಾರ್ಥಿಸಿದೆ। ಋಷಿಯ ವೇಷದಿ ಬಂದು ರಾವಣ ವೇಗದಿ ಪಂಚವಟಿಯಲ್ಲಿ ಅಪಹರಿಸಿದ ಧೀರಾ॥2॥ ರಾಮನ ಕಡೆಯಿಂದ ಹುಟುಕುತಾ ಹನುಮನು ತಾ ಬಂದ। ಹುಡುಕುತ ಹನುಮನ ತಾ ಬಂದ। ರಾಮನ ಕಡೆಯಿಂದ ಮುದ್ರೆಯುಂಗುರವ ನೋಡಿ ಭರದಿ ಚೂಡಾಮಣಿ ಕಳುಹಿಸಿದ ದೇವಿ॥3॥ ರನ್ನದ ಮಂಟಪಕ್ಕೆ ನೀ ಬಾ ಪನ್ನಗ ವೇಣಿಯೆ ಬಾ। ಪನ್ನಗ ವೇಣಿಯೆ ಬಾ। ಸನ್ನುಂತಾಗಿಯೆ ಸಾರಸದಿಂದಲಿ। ಪನ್ನಗ ಶಯನನ ಪಟ್ಟದರಾಣಿಯೇ ॥4॥

ಭೂಮಿಜಾತೆ ಬಾರೇ ಸೀತೆ ರಾಗ: ಮೋಹನ

ಭೂಮಿಜಾತೆ ಬಾರೇ ಸೀತೆ। ಶ್ರೀಮನೋಜ್ಞಚಾರಿತೆ॥ಪ॥ ಹರುಷದಿಂದಾ ತರುಣಿಯರೂ ಬರೆದು ಚಿತ್ರದ ಹಸೆಯನ್ನೂ। ಕರುಣಿಸೀಗ ಸೀತೆ ಎನುತ। ಕರವಮುಗಿದು ಕರೆವರೂ॥1॥ ಮಲ್ಲಿಗೆ ಮನೋಹರೆ। ಫುಲ್ಲರೆಗುಣಾಕರೆ। ನಿಲ್ಲದೀಗ। ನೀನು ಬಾರೆ ಮೆಲ್ಲನೆ ಕರುಣಾಕರೇ॥2॥ ಜನಕಸುತೆ ನಿನ್ನ ರಾಮ। ಧನುಮುಖದಿ। ಕೈಪಿಡಿಯಲು। ವಿನಯದಿಂದ ಇನಕುಲೇಶಗೆ ವನಮಾಲೆಯನ್ಹಾಕಿದೆ॥3॥ ಬಾರೆ ಭಾಮಿನೀಮಣಿ। ತೋರೆಮಾರನರಗಿಣಿ। ಸಾರಿ ಸಾರಿ ಕರೆವರು ನಿನ್ನನ್ನು। ನೀರೇ ಕೋಕಿಲ। ಮಂಜುಳೆ॥4॥ ಎಲ್ಲಿ ಹೇ ಮನೋಜ್ಞಾವಾಣಿ। ಫುಲ್ಲರೇಸುಗುಣಾಕರೇ। ನಿಲ್ಲದೆನ್ನಾಮನವು ರಾಮ। ವಲ್ಲಭೇ ಸುಗುಣಾಕರೇ॥5॥

ಮೋಹನಾಂಗಿ ಸೀತೆಗೀಗ ರಾಗ: ಮಾಂಡ್

ಮೋಹನಾಂಗಿ ಸೀತೆಗೀಗ ಉಡಿಯತುಂಬಿರೇ। ಶ್ರೀರಾಮನರಸಿ ಜಾನಕೀಗೆ ಉಡಿಯ ತುಂಬಿರೇ॥ಪ॥ ಕದಳಿ ಕಿತ್ತಳೆ ನಿಂಬೆ ನಾರಿಕೇಳವು। ತೋರವಾದ ಬಿಡಿಯ ಮುತ್ತು ಉಡಿಯ ತುಂಬಿರೇ॥1॥ಮಾವು ಮಾದಲದ್ವಣ್ಣು ಸೀತಲಂಜೂರ। ಒದಗಿ ದಾಳಿಂಬ್ರ ತಂದು ಉಡಿಯ ತುಂಬಿರೇ॥2॥ ಹಣ್ಣು ತೆಂಗಿನಕಾಯಿ ಬಣ್ಣದರಿಶಿನ। ತೋರ ಮುತ್ತಿನ ಹಾರದಿಂದ ಉಡಿಯ ತುಂಬಿರೆ॥3॥ ಪಟ್ಟು ಪೀತಾಂಬರ ಕಾಶ್ಮೀರಾ ಖಣಗಳೂ। ಸಡಗರದಿಂ ನಾರಿಯರೆಲ್ಲ ಹರಸುತಲಿ॥4॥

ನೀರೆಯರೆಲ್ಲರೂ ಸೇರುತಾ ಹರುಷದಿ ರಾಗ: ಮಾಂಡ್

ನೀರೆಯರೆಲ್ಲರೂ ಸೇರುತಾ ಹರುಷದಿ। ನಾರಿ ಜಾನಕಿಗೆ ಮಡಿಲ ತುಂಬಿದರು॥ಪ॥ ಮುತ್ತಿನ್ಹಾಜಾರದೀ। ಪಟ್ಟೆಶಾಲುಗಳ್ಹಾಸುತಾ। ಸಾರಸಾಕ್ಷಿ ಸರಸ್ವತಿ। ನೀರಜಾಕ್ಷಿ ಪಾರ್ವತಿ। ಸಾರಸಾಕ್ಷಿಗೇ ಮಡಿಲ ತುಂಬಿದರು॥1॥ ಕಿತ್ತಳೆ ದಾಳಿಂಬವು। ಉತ್ತಮ ನಾರಿಕೇಳಾ। ಜಂಬು ನೇರಳೆಯಾ ಫಲ।... ಸಂಭ್ರಮದಿಂದಲೇ। ರಂಭೆ ಜಾನಕಿಗೆ ಮಡಿಲ ತುಂಬಿದರು॥2॥ ಭಾಮೆ ಪಾರ್ವತಿದೇವಿಗೆ। ಬಂಧುಬಳಗದವರೆಲ್ಲರೂ...। ಬೊಂಬಾಯಿ ಬನಾರಸ್। ಕಾಶ್ಮೀರ ದೇಶದ ಕಣಗಳ ತಂದು ಮಡಿಲ ತುಂಬಿದರೂ॥3॥

ಮಡಿಲ ತುಂಬಿದರೊಲಿದು ರಾಗ: ಕಾಮಾಚ್

ಮಡಿಲ ತುಂಬಿದರೊಲಿದು। ಮಾನಿನಿಯರು॥ಪ॥ ರತುನ ಪೀಠದೆ ಭೂಮಿ। ಸುತೆಯ ಕುಳ್ಳಿರಿಸುತೆ। ಹಿತದೆ ಮಂಗಳಗಾನ। ವತಿ ಸಂಭ್ರಮದಿಂದ॥1॥ ಇರುವಂತಿ ಸೇವಂತಿ। ಮರುಗ ಮಲ್ಲಿಗೆ ಜಾಜಿ। ಕುರವರ ಸರಸಿಜ। ವರಕುಸುಮಗಳ

ಮುಡಿದು॥2॥ ಗರುಣಿಯ ಫಾಲದೆ। ವರಕುಂಕುಮವನಿಟ್ಟು। ಸರಸದಿ ವೀಳೆಯವ ಕರ ಕಮಲದೊಳಿಟ್ಟು॥3॥ ನವವಿಧ ಫಲಗಳ ಹವಣಿಸಿ ಹರುಷದಿ। ಸುವಿಲಾಸ ದಿಂದಲಿ। ಅವನಿಜಾತೆಗೆ ಬೇಗ॥4॥ ಮಾಂಗಿಯರಸನು। ಮಂಗಳವೀಯಲೆಂದು। ಅಂಗನೆಯರು ಹರಸಿ। ಶೃಂಗಾರ ಶೀಲೆಗೆ॥5॥

ಕ್ಷೇಮದಲ್ಲಿರು ನೀನು ಜಾನಕಿ ದೇವಿಯೆ (ಆಶೀರ್ವಾದ) ರಾಗ: ಜುಂಜೋಟಿ

ಕ್ಷೇಮದಲ್ಲಿರು ನೀನು ಜಾನಕಿ ದೇವಿಯೆ ಭೂಮಿಯನಾಳುವ ರಾಮರ ಕರುಣದಿ॥1॥ ಸತಿಯು ಪತಿವ್ರತೆ ಅತಿಶಯದಿಂದಲಿ। ಸುತರನು ಪಡೆದು ನೀ ಸುಖಿಯಾಗಿರಮ್ಮ॥2॥ ಅತ್ತೆ ಮಾವನ ಮಾತು ಪುತ್ರಿ ನೀ ಮೀರದೆ ಹೆತ್ತವರಿಗೆ ನೀನು ಕೀರ್ತಿಯ ತಾರಮ್ಮ॥3॥ ಎಷ್ಟು ವರ್ಣಿಸಲಿ ಶ್ರೇಷ್ಠ ಶ್ರೀರಾಮರ। ಪ್ರೇಮದ ಪತ್ನಿಯೆ ವರ ಸೀತಾದೇವಿಯೆ॥4॥

ಪತಿಮಂದಿರದಲ್ಲಿ ಸುಖವಾಗಿ ಬಾಳು ರಾಗ: ಕಾಂಭೋದಿ

ಪತಿಮಂದಿರದಲ್ಲಿ ಸುಖವಾಗಿ ಬಾಳು ಅತಿಶಯ ಸುಖದಿ ಸಂಪದವ ನೀನಾಳು॥ಪ॥ ಮೆರೆವೊ ಅಯೋಧ್ಯೆಯು ಮಿಥಿಲಾಪುರವೆಂದೂ। ವರದಶರಥನನ್ನು ಜನಕನೆಂದು ತರುಣಿ ಕೌಸಲ್ಯೆಯಾ ಮಾತೆ ಎಂದೆನುತಾ। ವರಲಕ್ಷ್ಮಣನನ್ನು ಸುತನೆಂದು ತಿಳಿದು॥1॥ ಅರುಣೋದಯದಿ ಮುನ್ನೆದ್ದು ರಾಮರ ಪಾದಸರಸಿಜವನೆ। ಕಣ್ಣಗಳಿಗೊತ್ತುತಾ ಸ್ಮರಿಸಿ ಲೋಪಾಮುದ್ರೆ ಅರುಂಧತಿ ಮೊದಲಾದ ಪರಮ ಪತಿವ್ರತೆ ಎಂದೆನಿಸು ನೀ ಮಗಳೆ॥2॥ ಕೈಕಾದೇವಿ ಸುಮಿತ್ರೇರ ವಾರ್ತೆಗೆ ವಾದಿಸದಿರು ಭರತ ಶತೃಘ್ನರ ಕುಂದೆಣಿಸದೆ ಜೊತೆ ಸೋದರರಂತೆ ಕರುಣದಿಂ ಕಾಯುತಿರು ಸೀತಾದೇವಿ॥3॥ ಪತಿಯು ಕೋಪಿಸಿದರೆ ನೀನೆ ಸಮ್ಮತಳಾಗು ಶರಣಾಗತರನ್ನು ಪರಿಪಾಲಿಸು। ತರುಣಿವಂಶಕ್ಕೆ ಚೂಡಾರತ್ನವೆಂದೆನಿಸು॥4॥ ಗುರುಹಿರಿಯರನು ಕಂಡರೆ ಚರಣಾಶ್ರೀತಳಾಗು। ಹಿರಿಯರೊಳ್ ಸರ್ವದಾ ತಲೆಬಾಗಿಸು। ಬಂಧು ಬಾಂಧವರಿಗೆ ಹಿತವ ತೋರುವಳಾಗು। ನೆರೆನಂಬಿದವರಿಗೆ ಮಾತೆ ನೀನಾಗು॥5॥ ದೇವರೆನ್ನುತಾ ರಘುರಾಮರನು ಸೇವಿಸು। ಕಾಯ್ವನೇ ಪತಿ ಎಂದು ನೀ ಭಾವಿಸು। ಯಾವಾಗಲೂ ಸುವಾಸಿನಿಯರನು ಸೇವಿಸು। ಹೇಳುವಾ ಮಾತಾ ನೀನೇ ಪರಿಪಾಲಿಸು ॥6॥

ಆರತಿ ಎತ್ತಿರೆ ವಾರಿಜಮುಖಿ ಸೀತಾದೇವಿಗೆ ರಾಗ: ಮಾಂಡ್

ಆರತಿ ಎತ್ತಿರೆ ವಾರಿಜಮುಖಿ ಸೀತಾದೇವಿಗೆ। ಹದಿನಾಲ್ಕು ಲೋಕವ ಆಳಿದಂಥ ರಾಮಚಂದ್ರಗೆ॥ಪ॥ ಅರಡಿ ಕಂಕಣ ಕಮಲದಾರ್ತಿ ಸರಿಗೆ ಸರಗಳು। ವಂಕಿತೋಳ್ಗೆ ಇಟ್ಟಬಾಪುರಿ ಚಂದ್ರ ಕುಪ್ಪುಸ॥1॥ ಜೊಂಡು ಎಣ್ಣೆ ಚಂದ್ರಕೇದಿಗೆ ಹೆರಳ ಹಾಕುವೆ। ಬಂಗಾರು ಮುಡಿಗೆ ಮಲ್ಲಿಗೆ ಜಾಜಿ ಸಂಪಿಗೆ॥2॥ ಭೂಮಿದೇವಿ ಮಗಳು ಸೀತಾದೇವಿಗೆ। ಭೂಮಿ ಆಳ್ವ ರಾಜ ಶ್ರೀರಾಮಚಂದ್ರಗೆ॥3॥

ನಿದ್ರೆ ಗೈಯ್ಯುವ ನಮ್ಮ ಸ್ವಾಮಿ ರಾಗ: ಧನ್ಯಾಸಿ

ನಿದ್ರೆ ಗೈಯ್ಯುವ ನಮ್ಮ ಸ್ವಾಮಿ। ರಾಮ ಭದ್ರ ಮೂರ್‌ಜಗದಂತರ್ಯಾಮಿ॥ಪ॥ ಸದ್ದು ಮಾಡದಿರಿನ್ನು। ಸಾರಸಾಕ್ಷಿಯರೆಲ್ಲಾ। ಸತಿ ಸೀತೆ ಸಹಿತ ಹೂವಿನ ಮಂಚದಲಿ ಮಲಗಿ॥ಅ.ಪ॥ ಪಿಂಪೋಗಿನಿಮ್ಮಯ ಸದನಗಳಿಗೆ। ಉದಯವಾಗಲಿ ಬನ್ನಿಸನ್ನಿಧಿಗೆ। ಯೋಗಿಜನರು ಪೊರೆವೋ। ಪರಮ ಭಾಗವತಾತ್ಮಜರು। ಸಾಗಿಪಾದ। ನಿಜಕಮಲಗಳಿಗೆಲ್ಲರೂ॥1॥ ತುಂಬುರ ನಾರದಾದಿಗಳೂ। ವೀಣೆ ತಂಬೂರಿ ನಾದದಿವ್ಯಗಳು। ಗಂಭೀರಸ್ವರದಿಂದ ಗಾಯನಂಗಳವಾಡಿ। ಸಂಭ್ರಮದಿಂದಲಿ ಹಂಬಲು ಮರೆತಿಹ॥2॥ ಹದಿನಾಲ್ಕು ಲೋಕವನಾಳಿ। ತಾನಿಹೆನೆಂದು ಜನರಿಗೆ ಮೋದವ ಪೇಳಿ। ಸದಮಲಾತ್ಮಕ ನಮ್ಮ। ವಾದಿಯ ನಾ ತಾನು। ಮುದದಿಂದ ತನ್ನವರಿಗೆ ಅಭಯವ ಕೊಡುತಲೀ॥3॥



ಎಚ್ಚರಗೊಳು ರಾಮಾ ರಾಗ: ಪುನ್ನಾಗವರಾಳಿ

ಎಚ್ಚರಗೊಳು ರಾಮಾ ನೀ ಕಣ್ಗಳ ತೆರೆರಾಮಾ।।ಪ।। ನೀ ಕಣ್ಗಳ ತೆರೆ ರಾಮಾ।। ಸಚ್ಚಿದಾನಂದನು ಎಚ್ಚರಗೊಳುತಿರೆ। ಅಚ್ಚರಿ ಪಡುತಿದೆ ಮೂಜಗವು।।ಅ.ಪ.।। ಮೂಡಣದಲಿ ಪ್ರಭೆ ತೋರುತಿದೆ। ವೇದದ ಘೋಷವು ಕೇಳುತಿದೆ। ವೀಣೆಯು ಉದಯವ ಪಾಡುತಿದೆ। ಕೋಗಿಲೆ ನಿನ್ನ ಕೂಗುತಿದೆ।।1।। ತಂದೆಯ ಪದವಿಯು ಕಂದಗೆ ಕೊಡಲು। ಚಂದದಿ ಹರುಷದಿ ಬರುತಿಹರು। ಮಂಥರೆ ಬಲೆಯೊಳು ಸಿಲುಕಿದ ಕೈಕೆಯು। ವಿಪಿನಕೆ ಕಳುಹಲು ಕಾದಿಹಳು।।2।। ಸುರರೆಲ್ಲರು ನಿನ್ನಯ ದರುಶನಕೆ। ಹರುಷದಲೀ ತಾವ್ ಬರುತಿಹರು। ಜನಕನಸುತೆ ತಾ ನಿನ್ನಯ ಸೇವೆಗೆ। ನಗುತಲಿ ನಲಿಯುತ ಬಂದಿಹಳೋ।।3।। ಅಸುರರ ಬಾಧೆಗೆ ಬಳಲಿದ। ಭೂದೇವಿಯು ನಡುಗುತಲೀ ತಾ ಬಂದಿಹಳೋ। ಅಸುವನು ನೀಗುವುದೆಂದಿಗೋ ಎನುತ। ದಶಮುಖನು ತಾ ಕಾದಿಹನು।।4।।

ರಾಮನುಕ್ಕು ಮನ್ನನ್ ಮುಡಿ (ತಮಿಳು) ರಾಗ: ಹಿಂದೋಳ

ರಾಮನುಕ್ಕು ಮನ್ನನ್ ಮುಡಿ ತರಿತ್ತಾಲೆ ನಮ್ಮೈಯುಂಡೊರು ಕಾಲೇ।।ಪ।। ಪಾಮರಮೇ ಉನಕ್ಕು ಎನ್ನಡಿ ಪೇಚೇ। ಪಳಂ ನಳುವಿ ಪಾಲಿಲ್ ವಿಳುಂದಪ್ಪೋಲಾಚೆ।।ಅ.ಪ।। ಪರಶುರಾಮನ್ ಗರ್ವಂ ತೀರ್ತವನ್ಡಿ ಅವನ್। ನಮ್ಮೈಎಲ್ಲಾಂ ಕಾಪವನ್ಡಿ। ಪಟ್ಟಂಕಟ್ಟ ಏತ್ತವನ್ಡಿ ರಾಮನ್ ನಾಲು ಪೇರಿಲ್। ಮೂತ್ತವನ್ಡಿ ಅವನ್‌ತಾನ್ ಎನ್ ಕಣ್ಮಣಿ ।।ಚರಣ।।

ಕಣ್ಣು ಕಾಣದಂಥ ಮುದುಕಿ (ಶಬರಿ) ರಾಗ: ಕಾಂಬೋಧಿ

ಕಣ್ಣು ಕಾಣದಂಥ ಮುದುಕಿ ಕಾದಿಹಳು ನಿನಗೆ। ಕರಗ ಬಾರದೇನೋ ನೀನು ಶಬರಿಯ ಕರೆಗೆ। ಬಾಬಾರೋ ಬಾ ರಾಮ ಎಂದು ನಿನ್ನ ಕರೆಯೆ। ಬರಬಾರದೇನೋ ನೀನು ಅಯೋಧ್ಯೆಯ ದೊರೆಯೆ।।1।। ರಾಮನಾಮದಲ್ಲಿ ತನ್ನ ಬದುಕೆಲ್ಲ ಕಳೆದು। ನಿನ್ನ ನೋಡಲೆಂದೆ ಇನ್ನು ಜೀವದಲ್ಲಿ ಉಳಿದು। ಹಣ್ಣಾದ ಹೆಣ್ಣವಳು ಹಣ್ಣಿನಂಥ ಮನಸು। ತಿಳಿಯ ಬಾರದೇನೋ ನಿನಗೆ ಆ ಮುದುಕಿಯ ಕನಸು।।2।। ಕೈಕಾಲು ನಡುಗಿದರು ಕಾಡಲ್ಲಿ ನಡೆದು। ನಿನಗಾಗಿ ತಂದಿಹಳು ಹಣ್ಣುಕಾಯಿ ತರಿದು। ನಿನ್ನ ಸೇವೆಗಾಗಿ ಅವಳು ಕಾದಿಹಳು ರಾಮ। ಇನ್ನು ಏಕೆ ಕಾಯಿಸುವೆ ಬೇಗ ಬಾರೋರಾಮ।।3।। ಪಾದಸ್ಪರ್ಶದಿಂದ ಕಳೆದ ಅಹಲ್ಯೆಯ ಶಾಪ। ಯಾಕೆ ಸ್ವಾಮಿ ನಿನಗೆ ಈ ಶಬರಿ ಮೇಲೆ ಕೋಪ? ಕರುಣಾಕರ ಶ್ರೀರಾಮ ದರ್ಶನವ ತೋರೋ? ಇನ್ನು ತಾಳಲಾರಳವಳು ನೀನು ಬೇಗ ಬಾರೋ।।4।।

ಎಂತನಿ ನೇ ವರ್ಣಿಂತುನು (ಕೀರ್ತನೆ) ರಾಗ: ಮುಖಾರಿ-ರೂಪಕತಾಳ

ಎಂತನಿ ನೇ ವರ್ಣಿಂತುನು ಶಬರೀ ಭಾಗ್ಯ।।ಪ।। ದಾಂತುಲ ವರಕಾಂತಲು ಜಗ ಮಂತ ನಿಂಡಿಯುಂಡಗ।।ಅ.ಪ।। ಕನುಲಾರ ಸೇವಿಂಚಿಕಮ್ಮನಿ ಫಲಮುಲ ನೊಸಗಿ। ತನುವು ಪುಲಕರಿಂಚಿ ಪಾದಯುಗಮುಲಕು ಮ್ರೊಕ್ಕಿ। ಇನಕುಲಪತಿ ಸಮುಖಂಬುನ ಪುನರಾವೃತ್ತಿ ರಹಿತ ಪದ। ಮುನಬೊಂದಿನ ತ್ಯಾಗರಾಜನುತುರಾಲಿ ಪುಣ್ಯಂಬುನು।।ಚರಣ।।

ಶಬರಿಯ ಮನ ಪುಲಕಗೊಂಡಿದೆ ರಾಗ: ಶಹನ

ಶಬರಿಯ ಮನ ಪುಲಕಗೊಂಡಿದೆ। ರಾಮನ ನಾಮ ಹೃದಯ ತುಂಬಿದೆ।।ಪ।। ರಾಮನ ಕಾಣುವ ಹಂಬಲ ಮನದಲಿ। ರಾಮಗೊಪ್ಪಿಸಲು ಫಲವು ಕೈಯಲಿ। ಕಾತುರ ದೃಷ್ಟಿಯು ಕಣ್ಣ ನೋಟದಲಿ। ಬಂದಾನೊ ಬಾರನೊ ಚಿಂತೆ ಮನದಲಿ।।1।। ಬಾಗಿದ ಒಡಲು ಮಂಜಾದ ಕಣ್ಗಳು। ಭಕ್ತಿ ಆವೇಶವು ನರನರಗಳಲು। ಅದಮ್ಯ ಉತ್ಸಾಹ ಮೂಡಿ ಬಂದಿಹುದು। ದೃಢವಿಶ್ವಾಸವು ಎದೆ ತುಂಬಿಹುದು।।2।। ಸುಂದರ ಪುಷ್ಪವು ಹರಿವಾಣ ತುಂಬಿದೆ। ಪಾದಪೂಜೆಯ ಮಾಡೆ ಸಿದ್ಧತೆಯಾಗಿದೆ। ರಾಮನಾಗಮನಕೆ ಕಾಲಕೂಡಿದೆ। ಚೈತನ್ಯ ದಾಸನ ಭಾಗ್ಯತೆರೆದಿದೆ।।3।।

ನೋಡಿದ್ಯಾ ಶ್ರೀರಾಮ ಮೃಗವಾ

ನೋಡಿದ್ಯಾ ಶ್ರೀರಾಮ ಮೃಗವಾ। ಆಡುತಾಡುತ ಬರುವ ಸೋಜಿಗವಾ।।ಪ।। ಕಾಲು ಕೈ ಮೋರೆ। ಕೊರಳಂತೆ ಮಾಟ। ನೀಲಬಣ್ಣದ ರೆಕ್ಕೆಯ ನೋಟ। ಹಾಡಲೆತಿರುತಿರುಗೀ। ಹಾ ಕುವಮಾಟ। ನೀಲಬಣ್ಣದ ರೆಕ್ಕೆಯ ನೋಟ।।1।। ಅಚ್ಚಕರಿದೂ ಬಿಳಿದೂ ಕೆಂಪೂ। ಅಚ್ಚ ನೀಲದರೆಕ್ಕೆಯ ಗುಂಪೂ। ಮೆಚ್ಚಿಬರುತಿದೆ ಎನಕಣ್ಣೆದುರು। ಮೆಚ್ಚಿಬರುತಿದೆ ಎನ್ನಕಣ್ಣೆಂಕಂಡು।।2।। ಮಕ್ಕಳು ಎನಗಿಲ್ಲವೊ ಇದನೂ ಅಕ್ಕರದಿಂದ ಸಾಕಿ। ಕೊಂಬುವೆನೂ ಘಕ್ಕನೆನಗೆ ಚಾರುಮೃಗವತಂದು ಕೊಡು ಪ್ರಾಣ ಕಾಂತ।।3।। ಎನ್ನ ಭಿನ್ನಪವ ಮನ್ನಿಸುಪೇಂದ್ರ। ನಿನ್ನ ನಂಬಿದೆ ಸದ್ಗುಣ ಸಾಂದ್ರ। ಎನ್ನರುಹಕೇಳುತ್ತಮರಾಜೇಂದ್ರ। ಘನ ಅಯೋಧ್ಯಾ ಪುರರಘುರಾಮಚಂದ್ರಾ।।4।। ಇಂತೂ ಸೋಜಿಗವಾದ ಮೃಗವು ಕಂಡೂ ಇರಲಿಲ್ಲ ಕೇಳೀ ಇರಲಿಲ್ಲ ಜನಕನಪುರದೊಳಗೂ ಇಲ್ಲ। ತಂದುಕೊಡದಿದ್ರೆ ಮನಸುನಿಲ್ಲೋದಿಲ್ಲ।।5।। ಸೀತೇಕೇಳೂ ಮಾಯದಮೃಗವೂ। ಮೃಗವಾ ಚಿಹ್ನೆಯು ಇದರಲ್ಲಿ ಕಾಣದೂ ನೋಡೀಬಹೇನೆಂದು। ಪೊರಟು ಶ್ರೀರಾಮ ಅರಣ್ಯವೆಲ್ಲಾ ಸುತ್ತಿ। ಬೆಂಡಾಗಿ ಮಾರೀಚನಾಗಿರ ಬಹುದೆಂದೂ। ನಾನೇ ಕೊಲ್ಲುವೆ ಈ ಕ್ಷಣವೆಂದೂ।।6।। ಅಲ್ಲಲ್ಲಿ ನಿಲ್ಲೋದು ಓಡುವುದೂ। ಎಲ್ಲಿಹೋದರೂ ಕೈಗೆ ಸಿಕ್ಕದೂ ರೋಷದಿಂ ಬಾಣವ ತೆಗೆದೂ ಶ್ರೀರಾಮ ಬಿಡಲು ಮುಕ್ತಿಯ ನೊಂದಿತಾಕ್ಷಣದೀ।।7।।

ಏನುಕಾರಣ ಮಲಗಿದೆ ಶ್ರೀನಾಥ ರಾಗ: ಭೌಳಿ

ಏನುಕಾರಣ ಮಲಗಿದೆ ಶ್ರೀನಾಥ। ರಘುಕುಲೋತ್ತಮ ರಾಮ ದರ್ಭಶಯನ।।ಪ।। ವನವಾಸ ತಿರುಗಲಾರೆ ಎಂದು ಮಲಗಿದೆಯೋ। ವನದೇಶ ಮಾರ್ಗವನು ಕೋರೆನೆಂದು ಮಲಗಿದೆಯೋ। ದನುಜ ಬಲವೆಂದು ವ್ಯಾಕುಲದಿ ಮಲಗಿದೆಯೋ। ಜನನ ಮರಣ ದೂರ ರಾಮ ರಾಮ।।1।। ಸೀತೆ ಪೋದಳು ಎಂದು ಚಿಂತೆಯೊಳು ಮಲಗಿದೆಯೋ। ಸೇತುವೆ ಕಟ್ಟುವುದು ಅಸಾಧ್ಯವೆಂದು ಮಲಗಿದೆಯೋ। ಕೋತಿಗಳ ಕೈಹರಣ ವಾಂಗದೆಂದು ಮಲಗಿದೆಯೋ। ಪಾತಕಾ ಭಜನ ದೂರ ರಾಮರಾಮ।।2।। ಆ ನೀಲ ಹರಿಹಯಕೆ ಕರುಣಿಸಿ ಮಲಗಿದೆಯೋ। ವನಜ ಸಂಭವಗೆ ನೀ ಒಲಿದು ಮಲಗಿದೆಯೋ। ಮುನಿಗಳು ಸ್ತೋತ್ರವ ಮಾಡಲು ಹಿಗ್ಗಿ ಮಲಗಿದೆಯೋ। ತಿಳಿವರಿವು ಎನಗಿದೆಯೋ ವಿಜಯ ವಿಠಲ।।3।।

ಮುತ್ತಿನುಂಗುರ ರಾಮ ಕೊಟ್ಟ ಹನುಮಗೆ (ಸುಂದರಕಾಂಡ)

ಮುತ್ತಿನುಂಗುರ ರಾಮ ಕೊಟ್ಟ ಹನುಮಗೆ ಮಿತ್ರೆ ನೋಡಿಬಾರೆಂದು ಉತ್ತರ ಹೇಳಿದ। ಧೀರ ಹನುಮನು ರಾಮರ ಪಾದಕೆರಗಿದ। ಬುದ್ಧಿವಂತನೇ ಹನುಮ ರೌದ್ರರೂಪದಿ।।1।। ಏಳು ಶರಧಿಯ ಹನುಮ ಬೇಗದಾಟಿದಾ ಪೋಗಿ ಲಂಕೆಗೆ ಹನುಮ ಆಗಸೇರಿದಾ। ಕೇರಿಕೇರಿ ಮನೆಗಳು ಬೀದಿಬೀದಿ ಮನೆಗಳಲ್ಲಿ ಸೀತೆಕಾಣದೇ ಹನುಮ ಗಾಬರಿಯಾದನು।।2।। ಅಶೋಕವನದಲ್ಲಿ ಆಕೆ ಸೀತೆ ದೇವಿಯು ಭೂಪ ಹನುಮನಾ ಕಂಡು ಭೀತಿಗೊಂಡಳು। ಅಂಜಬೇಡವೇ ತಾಯೆ ಅಂಜನೆ ಕುಮಾರನೇ ಇಂದು ರಾಮರಮುದ್ರಿಕೆ ಕೊಂಡು ಬಂದೆನೇ।।3।। ಸೀತೆಗುಂಗುರ ಕೊಟ್ಟು ಮಾತನಾಡಿದಾ ಭಾರಿವನಗಳನ್ನೆ ಸುಟ್ಟುಸೂರೆಮಾಡಿದಾ। ಅಂಬು ಸುತ್ತಿದಾ ಕೊಂಬೆಯಲ್ಲಾಡಿ ಸಿದ। ಲಿಂಬೆವನಗಳನ್ನೇ ಕಿತ್ತು ದೊಂಬಿ ಮಾಡಿದಾ।।4।। ಬಾಲಸುತ್ತಿದಾ ಬಲದ ಹಸ್ತವೆತ್ತಿದಾ। ಭಾರಿ ಮನೆಗಳನ್ನು ಸುಟ್ಟು ಸೂರೆಮಾಡಿದಾ। ಮೂರು ನಾಮದಾ ಹನುಮ ಬಂದು ನಿಂತನೇ। ರಂಗವಿಠಲನೇ ಹನುಮ ಪುರಂದರದಾಸನೆ।।5।।

ಎನ್ನ ಕಂದ ಹಳ್ಳಿಯ ಹನುಮ ರಾಗ: ಹಿಂದುಸ್ಥಾನಿಕಾಫಿ

ಎನ್ನ ಕಂದ ಹಳ್ಳಿಯ ಹನುಮ। ಚೆನ್ನಾಗಿ ಇಹರೆ ಲಕ್ಷ್ಮಣ ದೇವರು।।ಪ।। ತುಪ್ಪ ಪಂಚಾಮೃತವಂದು ಅಡವಿಗೆಡ್ಡೆಗ ಳಿಂದು। ಕರ್ಪೂರವೀಳ್ಯವಂದು ಕರುಕು ಇಂದು। ಸುಪ್ಪತ್ತಿಗೆ ಮಂಚವಂದು ಹುಲ್ಲು ಹಾಸಿಗೆ ಇಂದು। ಶ್ರೀಪತಿ ರಾಘವ

ಕ್ಷೇಮದಲ್ಲೈದಾರೆ।।1।। ನವವಸ್ತ್ರಗಳು ಅಂದು ನಾರಸೀರೆಗಳಿಂದು। ಹೂವಿನ ಗಂಟು ಅಂದು ಜಡೆಗಳಿಂದು। ಜವಾಜಿ ಕಸ್ತೂರಿಯಂದು ಭಸಿತ ಧೂಳಿಯಿಂದು। ಶ್ರೀವರ ರಾಘವ ಕ್ಷೇಮದಲ್ಲೈದಾರೆ।।2।। ಕನಕ ರಥಗಳಂದು ಕಾಲನಡಿಗೆ ಇಂದು। ಘನಸತ್ತಿಗೆಯಂದು ಬಿಸಿಲು ಇಂದು। ಸನಕಾದಿಗಳೋಲೈಪ ಆದಿಕೇಶವ ನಮ್ಮ ಹನುಮೇಶ ರಾಘವ ಕ್ಷೇಮದಲ್ಲೈದಾರೆ।।3।।

ಕ್ಷೇಮವೇ ಹನುಮ ನಮ್ಮವರಿಗೆ (ಲಂಕಾದಹನ) ರಾಗ: ಮಧ್ಯಾಮಾವತಿ-ಅಟ್ಟತಾಳ

ಕ್ಷೇಮವೇ ಹನುಮ ನಮ್ಮವರಿಗೆ। ಕ್ಷೇಮವೇ ಹನುಮ।।ಪ।। ರಾಮ ಲಕ್ಷ್ಮಣರು ರಾಜ್ಯದಲಿ ಸುಸ್ಥಿರವಾಗಿ।।ಕ್ಷೇಮವೇ।। ।।ಅ.ಪ.।। ಮದನನಂಗವ ಪೋಲ್ವರಾಮ। ಬಲು। ಚದುರ ಲಕ್ಷ್ಮಣನು ನಿಸ್ಸೀಮ। ಮೊದಲಿನಂಗದ ಕಾಂತಿ ಕಳವಳಿಸದೆ ಮತ್ತೆ। ಎದೆಗುಂದಲಿಲ್ಲವಲ್ಲ।। ತಮ್ಮೊಳು ಪ್ರೇಮವದು ಕುಂದಲಿಲ್ಲವಲ್ಲಾ। ನೀ ಬರುವ ದಿನದೊಳಗೆಂತಿದ್ದರೆಲ್ಲ।।1।। ದಶಕಂಠ ಕಳವಿನೊಳ್ತಂದ ಇನ್ನು ಉಸುರಲೇನಧಿಕ ನಿರ್ಬಂಧ। ಪಶುಪತಿಯೊಬ್ಬನೆ ಬಲ್ಲನಲ್ಲದೆ ಬೇರಿನ್ನುಸಿರುವೆನಾರ್ಗೆ ನಾನು। ಇನ್ನೊಮ್ಮೆ ಜೀವಿಸುವಂಥ ಪೇಳು ನೀನು। ನೋಡಿದೆಯಾ ರಾಕ್ಷಸ ಮಾಳ್ಪ ಬಗೆಗಳನು।।2।।ಭೂತಳದೊಳಗೆ ಎನ್ನಂಥ ಕಡು ಪಾತರಿಕಲ್ಲ ಹನುಮಂತ। ಮಾತಾಪಿತರ ಬಂಧು ಬಳಗವೆಲ್ಲವ ಬಿಟ್ಟು। ಈ ತೆರನಾದೆನಲ್ಲಾ। ರಾಕ್ಷಸರ ವಿ। ಘಾತವ ಕಂಡೆಯಲ್ಲ। ಎನ್ನಯಪ್ರಾಣ। ನಾಥನ ನಗಲ್ದೆನಲ್ಲಾ।।3।। ಇನ್ನು ಜೀವಿಸಲಾರೆ ನಾನು। ಇದನೆನ್ನ ಕಾಂತಗೆ ಪೇಳು ನೀನು। ನಿನ್ನಾಣೆನಿಮಿಷ ಬಿಟ್ಟಿರಲಾರದಂತವ। ನೆನ್ನ ಹಂಬಲ ತೊರೆದ। ಸ್ನೇಹದಿ ನಾವು ಚೆನ್ನಾಗಿದ್ದುದ ಮರೆದ। ಈ ಮಾತಿಗೆ ನಿನ್ನೊಳೇನೆಂ ದೊರೆದ ।।4।।

ಕ್ಷೇಮವೇನೈ ರಾಮಚಂದ್ರನು

ಕ್ಷೇಮವೇನೈ ರಾಮಚಂದ್ರನು। ಅನುಜಸೌಮಿತ್ರಿ ಸಹಿತಾ ।। ಎಂದು ಬರುವನೋ ರಾಮಚಂದ್ರನು ಕೊಂದು ಈ ಖಲಬೃಂದನನ್ನು। ಬಂಧನಾವ ಬಿಡಿಸಿಯನ್ನನು। ಇನ್ನೆಂದಿಗೆ ಬರುವನೋ ರಾಮಚಂದ್ರ।।1।। ಕರುಣೆಸೀತೆಯು ಅಗಲಿಕಾಣಳೋ ಕೊರಗುತಿರುವಳು ರಾಮಚಂದ್ರಗೆ। ದುರುಳರಾವಣಯನ್ನನೀಗಲೆ ಬಾಧಿಸುತಿರುವನೋ ರಾಮಚಂದ್ರ।।2।। ಹೆಣ್ಣು ಜನ್ಮದಿ ಪುಟ್ಟಿನಾ ಬಲುಪುಣ್ಯ ಹೀನಳಾದೆನೇ। ಕಪಿಸೈನ್ಯವಾ ಕೂಡಿಕೊಂಡು ಇನ್ನೆಂದಿಗೆ ಬರುವನೋ। ರಾಮಚಂದ್ರ।।3।। ಜನಕರಾಯನ ಕುವರಿಯಾಗಿ ದಶರಥನಿಗೆ ಸೊಸೆಯೆಂದೆಣಿಸಿ। ಧರಣಿಪಾಲನ ಕರವ ಪಿಡಿದು ಇದಾವ ಭಾಧೆಗೆ ಸಿಲುಕಿದೆನೋ ರಾಮಚಂದ್ರ।।4।।

ಜೀವಿಸಲಾರೆ ಜೀವವ ತೊರೆಯಬೇಕು ರಾಗ: ಶಿವರಂಜನಿ

ಜೀವಿಸಲಾರೆ ಜೀವವ ತೊರೆಯಬೇಕು। ಸಾಯಬೇಕೂ ನಾನೂ। ಭೂಮಿಯೊಳಗಿರಲಾರೇ।।ಪ।। ಜನಕ ರಾಜನ ಪುತ್ರಿಯಾಗಿ ಜನಸಿದೇ ನಾನು। ಜಾನಕೀಯಿಂದಲೀ ನಾಮವನುಧರಿಸಿದೆ ನಾನು। ದಶರಥನ ಮನೆಯಲ್ಲಿ ಸೊಸೆಮುದ್ದೆನಿಸಿದೆ ನಾನು। ಅಸುರಕುಲಸಂಹಾರ ಭೂಷರಾದ ರೆನಗೆ।।1।। ರಾಮ ಸ್ವಗೃಹದಲ್ಲಿ ಕೈಕೆಮಾಡಿದ ಕಾರ್ಯ। ಪೇಳಲಳವೊ ಮಾರುತಾತ್ಮಜನೆ ಕೇಳು। ನಾರುಸೀರಿಯನುಡಿಸಿ ನಮ್ಮತ್ತೆ ಕಳುಹಿದರು।।2।। ಹಿರಿಯನಾದ ದಶರಥನು ಮರಣ ಗೈದು ಪೋಗೇ। ಕಿರಿಯನಾದ ಭರತಗೇ ರಾಮ ಪಾದುಕೆಯನಿತ್ತು। ತರಳ ಲಕ್ಷ್ಮಣ ಸಹಿತ ವನದೊಳಗೆ ಇರುತಿರಲೂ। ಮಾಯದಾಮೃಗವಕಂಡು ಬಯಸಿದೆ ನಾನು।।3।। ಮೃಗದ ಬೇಟೆಗೆ ಪೋದನೂತರಲು। ತರುಣ ಲಕ್ಷ್ಮಣ ಬರೆದ ಗೆರೆಯನು ದಾಟಿ। ದುರುಳರಾವಣ ಬಂದು ಬಿಕ್ಷೆಯನೆ ಬೇಡಲೂ। ಧರಣಿಸಹಿತಲೆ ಪೋಗಿ। ವನಕೆ ಗುರಿಯಾದೆ।।4।। ಒಂದು ದಿನ ಹಗಲಿರಳು ಏಳುಯುಗವಾಗಿದೇ। ಆಂಜನೆಯನೇ ಕೇಳು ವನದೊಳಗೆ ಇರಲಾರೆ। ಮುಖ್ಯಭಂಟನು ನೀನೇ ಸರ್ವಬಂಧುವು ನೀನೇ। ರಾಮರಾ ಕೂಡಿಸುವ ಕಾರ್ಯಮಾಡಯ್ಯ।।5।। ಮನ್ಮಥನ ಮಾತು ನೀ ಲಾಲಿಸಮ್ಮಾ। ಜೀವಿಸಬೇಕು ಜೀವವ ತೊರೆಯಬೇಡ। ಕ್ರೋಧನೆಯ ಮಾಡಬೇಡ ಪೋಗಿನಾ ಶೀಘ್ರದಲಿ। ಮನೋರಥವ

ಪರಿಪೂರ್ಣಮಾಡುವೆನೂ॥6॥ ಸಕಲಸೈನ್ಯವ ಕೂಡಿ ಅಯೋಧ್ಯೆಗೆ ಪೋಗಿ। ಪುರಕೆತೆರಳುವಿರೆಂದ। ನಗುತ ಹನುಮಂತಾ॥7॥ ಮಾರುತಾತ್ಮಜನೆ ಪೇಳು ಮನದಾ ವ್ಯಥೆಯ। ಸೀತೆಯ ಕಾಣದೆ। ಕ್ಷಣವು ನಾನಿರಲಾರೆ। ಜಾನಕಿಯ ಕಾಣದೆ। ಜಗದೊಳು ನಾನಿರಲಾರೆ। ಮಡದಿ ಸೀತೆಯ ತೊರೆದು। ವನವಾಸ ವೆಂತು ಕಳೆವುದು॥8॥

ಉಂಗುರವನಿತ್ತ ಹನುಮಂತ ರಾಗ: ಮೋಹನ-ಛಾಪುತಾಳ

ಉಂಗುರವನಿತ್ತ ಹನುಮಂತ ರಾಮನಾಮ। ಉಂಗುರವನಿತ್ತ ಹನುಮಂತ ರಾಮನಾಮ॥ಪ॥ ಉಂಗುರವನಿತ್ತ ಧೀಮಂತ ಜಯವಂತ। ಉಂಗುರವನಿತ್ತ ರಘು ಪುಂಗವನ ಅಂಗನೆಗೆ॥ಅ.ಪ॥ ಶ್ರೀಯು ಜಯ ಕಾಂತಿ ಸುಖ ಕಾಯ ಬಲ ಕೀರ್ತಿ ದೀರ್ಘಾಯುಗಳನಿತ್ತು ಪೊರೆದಂಥ॥1॥ ಪುತ್ರರನು ಪೌತ್ರರನು ಮಿತ್ರರನ್ನು ಸದ್ಗುಣ ಕಳತ್ರರನು ಪಾಲಿಸುವಂಥ॥2॥ ಭಕ್ತಿಯನು ಭವ್ಯತರ ಮುಕ್ತಿಯನು ದಿವ್ಯವಹ ಯುಕ್ತಿಯನು ತಾನೆ ಕೊಡುವಂಥ॥3॥ ಹಸ್ತದಲಿ ಮುದದಿಂದ ಸಮಸ್ತ ದೀನ ಜನರ್ಗೆ ಸ್ವಸ್ತಿಯನು ಮಾಡುತಿರುವಂಥ॥4॥ ಜ್ಞಾನ ಹರಿ ಭಕ್ತಿಸನ್ಮಾನಗಳ ಕೊಟ್ಟು ಅಜ್ಞಾನಗಳನೆಲ್ಲ ಕಳೆವಂಥ॥5॥ ಶಿಕ್ಷಿಸುತ ಶ್ರಾತವರ ರಕ್ಷಿಸುತ ಬಾಂಧವರ ಸುಕ್ಷೇಮದಿಂದ ಪೊರೆವಂಥ॥6॥ ಹಿಂಗದೆ ಸಮಸ್ತ ಶುಭ ಮಂಗಳವ ಖಾದ್ರಿವರ ಸಿಂಗ ತಾ ಪಾಲಿಸುವಂಥ॥7॥

ನೋಡಮ್ಮ ತಾಯೆ ಸೀತಾದೇವಿ ರಾಗ: ಸಿಂಧೂಬೈರವಿ

ನೋಡಮ್ಮ ತಾಯೆ ಸೀತಾದೇವಿ। ನೋಡಮ್ಮ ತಾಯೆ॥ಪ॥ ನೋಡಮ್ಮ ಉಂಗುರ। ಶ್ರೀರಾಮಕೊಟ್ಟದ್ದು। ಸೀತೆಗುಂಗುರಕೊಟ್ಟು ಮಾತಾಡಿಬಾರೆಂದು॥1॥ ಪಂಪಾಕ್ಷೇತ್ರದಲ್ಲಿ ನಿಂತೂ ರಘುರಾಮರೂ। ಸಂತಾಪದಿಂದಲಿ ಸತಿಗ್ಹೇಳಿಬಾರೆಂದೂ॥2॥ ಹೆಣ್ಣಿಗೋಸ್ಕರ ಪೋಗೀ। ವನವಕಿತ್ತಾಡಿದಾ। ಲಂಕೇಗೆ ಬೆಂಕೀಯ ಹಚ್ಚೀ ತಾ ನೋಡಿದಾ॥3॥ ವಾಲೀನಾ ಕೊಂದೂ ಸುಗ್ರೀವಗೇ ಪಟ್ಟಕಟ್ಟೀ। ವಾನರಂಗಳ ಬಿಟ್ಟು ಎದುರೀಗೆ ಬರುತಾನೆ॥4॥ ಸೇತೂವೇ ಕಟ್ಟೀ। ಶ್ರೀರಾಮರೂಬರುತಾರೆ। ರಾವಣನನ್ನೇಕೊಂದು। ಸೀತೆ ನಿನ್ನೊಯ್ವರೂ॥5॥ ವಾಸುದೇವಗೆ ಪೋಗಿ। ವರ್ತಮಾನವನ್ಹೇಳಿ। ಚೂಡಾರತ್ನವನಿತ್ತ ಪಾದಾವೆ ಗತೀಯೆಂದೂ॥6॥

ಜಯ್ ಜಯ್ ಹನುಮ ರಾಗ: ಶಂಕರಾಭರಣ

ಜಯ್ ಜಯ್ ಹನುಮ ಜಯ ಹನುಮಾ। ಜಯ್ ಜಯ್ ಹನುಮ ಜಯ ಹನುಮಾ॥ಪ॥ ಮಾರುತಿ ರಾಯ ಜಯ ಹನುಮಾ। ಮಹಾನುಭಾವ ಜಯ ಹನುಮಾ॥ಆ.ಪ॥ ಅಂಜನಿ ಕುವರ ಜಯ ಹನುಮಾ। ಅತಿಬಲವಂತ ಜಯ ಹನುಮಾ॥ ವೀರಾಧಿವೀರ ಜಯ ಹನುಮಾ। ವಾನರ ಶೂರ ಜಯ ಹನುಮಾ॥1॥ ರಾಮದೂತವರ ಜಯ ಹನುಮಾ। ಶರಧಿಯ ದಾಟಿದಜಯ ಹನುಮಾ। ಲಂಕಿಣಿ ಹೆದರಿಸಿ ಜಯ ಹನುಮಾ। ಲಂಕೆಗೆ ನುಗ್ಗಿದ ಜಯ ಹನುಮಾ॥2॥ ಅಶೋಕವನದಲಿ ಜಯ ಹನುಮಾ। ಜಾನಕಿ ಕಂಡ ಜಯ ಹನುಮಾ॥ ಮಾತೆಗೆ ನಮಿಸಿ ಜಯ ಹನುಮಾ। ಕುಶಲವ ಪೇಳಿದ ಜಯ ಹನುಮಾ॥3॥ ರಾವಣನೆದುರಲಿ ನಿಂತು ಹನುಮಾ। ಖಂಡಿಸಿ ಮಾತಾಡಿದ ಹನುಮಾ॥ ಅಸುರರ ಕೈಲಿ ಬಾಲವ ಕೊಟ್ಟು। ಲಂಕೆಯ ಸುಟ್ಟ ದಿಟ್ಟ ಹನುಮಾ॥4॥ ಮಾತೆಯ ಚರಣಕೆ ನಮಿಸುತ ಹನುಮಾ। ವಾನರ ಶೂರ ನಲಿಯುತ ನಿಂದ॥ ಸೀತೆಯ ಕ್ಷೇಮವ ರಾಮಗೆ ಪೇಳ್ದ। ಚೂಡಾಮಣಿಯ ಕೊಟ್ಟ ಹನುಮ॥5॥

ಶಿರೋರತ್ನವನಿತ್ತಳು ಸೀತೆ ರಾಗ: ಸುರುಟಿ-ಆದಿತಾಳ

ಶಿರೋರತ್ನವನಿತ್ತಳು ಸೀತೆ। ಖರಾರಾತಿಗೆ ಕುರುಹುಕೊಡೆಂದಾ। ಮರುತ್ಸುತಗೆ ಲೋಕೈಕಮಾತೆ॥ಪ॥ ಸಾರಸಾಪ್ತ ಹಿಮಕರ ಕಾಂತಿಯ। ಸೂರೆಗೊಳಿಸಿ ಶೋಭಿಸುವಂಥ। ಹೀರ ಕುರುವಿಂದಂಗಳಿಂದಲ। ಚಾರುತರದಿ ರಚಿಸಿರುವಂಥ। ವಾರಿರುಹದಾಕಾರದಿಂದಲ। ತೋರುವ ವಿಸ್ಮಯಗೊಳಿಪಂಥ। ಭೂರಿ ವಿಚಿತ್ರ ನಯನಾನಂದವ। ಬೀರಿ ಮನವ ಮಿಗೆ ತೋಷಿಸುವಂಥ॥1॥ ಸುಂದರಿಯರು ಈ ರತುನವನು ನಲ। ದಿಂದ ಧರಿಸೆ ಶುಭವೀವಂಥ। ಸುಂದರವು -

ದೀರ್ಘಾಯುವಾಗುವ ನಂದನರನು ಪಾಲಿಸುವಂಥ। ಕುಂದದಿಹ ಮಾಂಗಲ್ಯ ಭಾಗ್ಯವ। ಚೆಂದದಿ ಕರುಣಿಸಿ ಪೊರೆವಂಥ। ಎಂದೆಂದಿಗು ಸತಿಪತಿಯರು ಸಂಭ್ರಮದಿಂದಲಿರುತ ಲೇಸಾಗುವಂಥ।।2।। ಶ್ರೀ ಮುಕುಂದಾಂಘ್ರಿಯಲಿ ಭಕ್ತಿಯ। ತಾಮಸವಿಲ್ಲದೆ ಕೊಡುವಂಥ। ನೇಮದಿಂ ಸುಜ್ಞಾನ ಮಾರ್ಗವ ಕಾಮಿಪರಿಗೆ ಕೃಪೆಗೈವಂಥ। ಕ್ಷೇಮವಹ ವೈರಾಗ್ಯ ಭಾಗ್ಯನಿ। ಷ್ಕಾಮ ಗುಣಗಳನ್ನೊಗ್ಗೊಳಿಪಂತ। ಶ್ರೀ ಖಾದ್ರಿನೃಸಿಂಹನ ಕರುಣವು। ಪ್ರೇಮದಿ ಬಹುಬೇಗಾಗುವಂಥ।।3।।

ಏನೆಂದಳಯ್ಯ ಸೀತೆ ರಾಗ: ನಾದನಾಮಕ್ರಿಯೆ-ಝಂಪೆತಾಳ

ಏನೆಂದಳಯ್ಯ ಸೀತೆ। ಹನುಮನಿನಗೆ। ಏನ್ನುಡಿದಿಹಳು ಪ್ರೀತೆ।।ಪ।। ಚೆನ್ನಿಗ ಚೆಲುವನೆ ಕೇಳೋ। ಜಾನಕಿಯು। ನಿನ್ನ ಬಿಟ್ಟಿರಲಾರಳು। ನಿನ್ನಿರುಳು ನೀ ನೀಲಕುಂತಳೆ ಕನಸಿನಲಿ। ಚೆನ್ನಾಗಿ ನಿಂತೆಯೆಂದಳೋ ರಾಮ।।1।। ಸ್ವಾಮಿ ರಾಯರ ಪಾದವ। ಎಲೆ ಕಪಿಯೆ। ನಾನೆಂತು ಬಿಟ್ಟಿರಲಿ। ದಾನವನ ಶಿರವರಿದು ಲಂಕೆಯ ಪುರವನ್ನು। ದಹನವ ಮಾಡೆಂದಳೋ ರಾಮ।।2।। ಎಲ್ಲಿಂದ ಬಂದೆ ಹನುಮ। ನೀನೆನ್ನ। ಸೊಲ್ಲ ಕೇಳೋ ಪ್ರೇಮ। ವಲ್ಲಭನ ಕಾಣದೆ ನಿಮಿಷ ಯುಗವಾಗಿದೆ। ನಿಲ್ಲಲಾರೆ ಎಂದಳು ರಾಮ।।3।। ಚಿಂತಿಸುತ ಬಡವಾದಳೋ। ಜಾನಕಿಯು। ಕಾಂತಿಹೀನಾಗಿ ಇಹಳೋ। ಅಂತರಂಗದಿ ಪ್ರಾಣಕಾಂತ ಕಾಂತ ಎನುತ। ಭ್ರಾಂತಿಯಲಿ ಮರುಗುತಿಹಳೊ ರಾಮ।।4।। ಆಂಜನೇಯ ತನಯ ಕೇಳೋ। ನೀ ಪೋಗೇ। ಕಂಜನಾಭನಿಗೆ ಹೇಳೋ। ಕುಂಜರನ ಕಾಯ್ದ ಶ್ರೀ ಪುರಂದರ ವಿಠಲನ್ನ। ಪಂಜರದ ಅರಗಿಣಿ ಎಂದಳು ರಾಮ।।5।।

ಆದೌ ದಶರಥರಾಜ (ಸಂಸ್ಕೃತ ಶ್ಲೋಕ-ರಾಮಾಯಣ)

ಆದೌ ದಶರಥರಾಜ ಗರ್ಭಜನನಂ। ಬಾಲ್ಯೋಚಿತಂ ಕ್ರೀಡನಂ। ಮೌಂಜೀ ಬಂಧನಂ। ವೇದಶಾಸ್ತ್ರ ಪಠನಂ। ಗಾಧೇಯಶುಶ್ರೂಷಣಂ। ವಿದ್ಯಾಂತಗ್ರಹಣಂ। ಸುಬಾಹು ಮರಣಂ। ಸ್ತ್ರೀ ಶಾಪವಿಮೋಚನಂ। ಶಂಭೋಃಕಾರ್ಮುಖ ಭಂಜನಂ। ಜನಕಜಾ ಕಲ್ಯಾಣ ಸಂಧಾಯನಂ। ಮಾರ್ಗೇ ಭಾರ್ಗವರಾಮಗರ್ವ ಹರಣಂ। ಮಾತಾ ಪಿತ್ರೋ ಶುಶ್ರೂಷಣಂ। ಕೈಕೇಯೀ ಕೃತ ದಂಡಕಾದಿ ಗಮನಂ। ಹತ್ವಾ ಮೃಗಂ ಕಾಂಚನಂ। ವೈದೇಹಿ ಹರಣಂ ಜಟಾಯು ಮರಣಂ. ಸುಗ್ರೀವ ಸಂಭಾಷಣಂ। ವಾಲೀನಿಗ್ರಹಣಂ ಸಮುದ್ರತರಣಂ। ಲಂಕಾಪುರಿ ದಾಹನಂ। ಪಶ್ಚಾದ್ರಾವಣ ಕುಂಭಕರ್ಣ ಹನನಂ। ಏತದ್ಧಿರಾಮಾಯಣಂ।।

ಅಲ್ಲಿ ನೋಡಲು ರಾಮ ರಾಗ: ಶಿವರಂಜನಿ-ಆದಿತಾಳ

ಅಲ್ಲಿ ನೋಡಲು ರಾಮ ಇಲ್ಲಿ ನೋಡಲು ರಾಮ ಎಲ್ಲೆಲ್ಲಿ ನೋಡಿದರಲ್ಲಿ ರಾಮರೂಪ।।ಪ।। ರಾವಣನ ಮೂಲಬಲವ ಕಂಡು ಕಪಿಸೇನೆ। ಆವಾಗಲೆ ಬೆದರಿ ಓಡಿದವು। ಈ ವೇಳೆ ನರನಾಗಿ ಇರಬಾರದೆಂದೆಣಿಸಿ। ದೇವ ರಾಮಚಂದ್ರ ಬಹುರೂಪ ತಾನಾದ।।1।। ಅವನಿಗೆ ಇವ ರಾಮ। ಇವನಿಗೆ ಅವ ರಾಮ। ಬುವಿಯೊಳಗೆ ಬೇರೆ ರೂಪವುಂಟೆ। ಅವನಿಯೊಳಿರುತಿಪ್ಪ ದುರುಳ ಜನರೆಲ್ಲ। ಅವರವರೆ ಹೊಡೆದಾಡಿ ಹತರಾಗಿ ಹೋದರು।।2।। ಹನುಮಾದಿ ಸಾಧು ಜನರು ಅಪ್ಪಿಕೊಂಡು। ಕುಣಿಕುಣಿದಾಡಿದರು ಅತಿ ಹರುಷದಲಿ। ಕ್ಷಣದಲ್ಲಿ ಪುರಂದರವಿಠಲರಾಯನು। ಕೊನೆಗೊಡೆಯನು ತಾನೊಬ್ಬನಾಗಿ ನಿಂತ।।3।।



ಕಂಗಳಿಂದಲಿ ಕಂಡು ದೇವರ ರಾಗ: ಮೋಹನ

ಕಂಗಳಿಂದಲಿ ಕಂಡು ದೇವರ ಕರಗಳಿಂದಲಿ ಪೂಜಿಸಿ। ಮಂಗಳಾರತಿ ಎತ್ತಿ ಬೆಳಗುವ ಸನ್ನುತಾಂಗಿಯರೆಲ್ಲರೂ।।ಪ।। ಕೋಸಲಾಧಿಪ ರಾಮಮೂರ್ತಿಗೆ ಆಸತೀ ಮಣಿ ಸೀತೆಗೆ। ಸಂತೋಷದಿಂದಲಿ ಬೆಳಗುವಾರತಿ ಭರತ ಲಕ್ಷ್ಮಣರವರಿಗೂ।।1।। ಶಿಷ್ಟಜನರೋದ್ಧಾರ ಸ್ವಾಮಿಗೆ ರಾಕ್ಷಸಾಂತಕ ರಾಮಗೆ। ಇಷ್ಟಸಲ್ಲಿಸಿ ತಳೆದ ಕೀರುತಿ ಹನುಮಮೂರುತಿಗಾರುತಿ।।2।।

ರಘುಕುಲ ತಿಲಕ ಶ್ರೀರಾಮನ ರಾಗ: ಮೋಹನ

ರಘುಕುಲ ತಿಲಕ ಶ್ರೀರಾಮನ ಕರೀರೆ ನೀವ್ ಅಘಪರಿಹಾರಕನಾ।।ಪ।। ಖಗರಾಜ ದ್ವಿಜನ ಶ್ರೀ ಸುಗುಣಾಂಬುಧಿ ಯನೀಗ। ನಾಗಕನ್ನೆಯರೇ ನೀವ್ ನವಭದ್ರ ಪೀಠಕೆ।।ಅ.ಪ।। ಕ್ಷೀರಾಬ್ಧಿ ಶಯನನಾ ಧರೆಜಾತೆ ಕಾಂತನಾ। ಸುರಪತಿ ಪ್ರಮುಖನ ನೀವ್। ಗುರುಪರಬ್ರಹ್ಮನ ಕೌರವಾರಿಯ। ಕಂಸಾರಿ ಅಚ್ಯುತನ ಕೋದಂಡದೀಕ್ಷನಾ।।1।। ವಟಪತ್ರ ಶಯನನ ಶ್ರೇಷ್ಠಭಾಸುರಹರನ। ಜಟಾಯುವನು ಕಾಯ್ದನಾ। ಅಡವಿಯೋಳ್ ದಿಟದಿಂದ ದಶವರುಷವಿದ್ದನಾ। ಕುಲಟಕಲ್ಮಶ ರಹಿತನಾ ಕಾರುಣ್ಯ ಹೃದಯನಾ।।2।। ಶಬರೀಯುಚ್ಚಿಷ್ಟಫಲ ಭೋಜ್ಯನಾ। ಜ್ಯೇಷ್ಠ ರಾಮನಾ ಕೌಸ್ತುಭಮಣಿ ಹಾರನಾ ಅಭಿಲಾಷೆಯಿಂ ವಿಭೀಷಣಗೆ ರಾಜ್ಯವನಿತ್ತು। ವೈಭವದಿಂ ಚೋಳಪುರದಿ ನೆಲೆಸಿಹ ದಿವ್ಯ।।3।।

ಕರೆವೆನು ರಾಮಚಂದ್ರನ ರಾಗ: ಸಿಂಧೂಭೈರವಿ

ಕರೆವೆನು ರಾಮಚಂದ್ರನ। ಶಶಿಮುಖಿ ಸೀತಾಪ್ರಿಯನ।।ಪ।। ಮುನಿಯೋಗವನ್ನ ನೀಕ್ಷಣದಿಂದ ಸಲಹಿದೆ। ಅನುಜರೊಡಗೂಡಿ ವನಕೆ ತೆರಳಿದೆ।।1।। ವನಿತೆ ಜಾನಕಿಯನ್ನು ಅಪಹರಿಸಿದ ನೆಂದು। ಕಪಿ ಸೈನ್ಯರೊಡಗೂಡಿ ಲಂಕೆಗೆ ತೆರಳಿದೆ।।2।। ದಶಕಂಠನನೆ ಕೊಂದು ಶಶಿಮುಖಿ ಸೀತೆಯತಂದು। ಬಿಸಜನ್ಯೆಯ್ಯನೆ ಬಂದು ರಾಜ್ಯವಾಳಿದನೆಂದು।।3।।

ಫಲಧಾನವನ್ನು ಕೊಡುವೋ ಶ್ರೀರಾಮರೂ ರಾಗ: ಹಂಸಾನಂದಿ

ಫಲಧಾನವನ್ನು ಕೊಡುವೋ ಶ್ರೀರಾಮರೂ। ಫಲಧಾನವನ್ನು ರಾಜ್ಯಾಭಿಷೇಕದೀ। ರಾಮಾವತಾರದೀ ಪೂಜ್ಯಾರ ಕೂಟದಿ। ವೇದಾದಿಂ ಘೋಷಿಸೀ...।।ಪ।। ಸೀತಾಸಮೇತಾ.... ಸ್ವೀಕರಿಸಿ ಪೀಠ ಭೂಷಾಣಾಲಂಕೃತ ಮೋಕ್ಷದಾತಾ।।ಅ.ಪ.।। ಅಷ್ಟದಿಕ್‌ಪಾಲರೂ ವಸಿಷ್ಠ ವಾಲ್ಮೀಕರು ಅಗಸ್ತ್ಯಾದಿ ವ್ಯಾಸರು ಸಮಸ್ತಋಷೀಂದ್ರರೂ... ತುಂಬುರ ನಾರದರು ಮಂಗಳ ವಾದ್ಯದಿ ಗಂಧಸುಪುಷ್ಪದಿ ರಘುನಂದನ ಪೂಜಿಸೀ...।।1।। ಇಂದ್ರನು ಧಾನ್ಯದ ಗಂಧಫಣಿ ಫಲತಾಂಬೂಲದ್ರವ್ಯಕೆ ಸೀತೆಗಂಗೆಯನು ಹಾಕುತಾ... ಕರಸಿ ಕುಬೇರನಾಸುರಿಸಿದ ಕಾಂಚನ ಇಡುತಾಂಜನೇಯನು ಕೂಡುವೋನು ಲಕ್ಷ್ಮಣ।।2।।

ಕನುಗೊಂಟಿನಿ ಶ್ರೀರಾಮುನಿ ನೇಡು ರಾಗ: ಬಿಲಹರಿ, ಆದಿತಾಳ

ಕನುಗೊಂಟಿನಿ ಶ್ರೀರಾಮುನಿ ನೇಡು।।ಪ।। ಇಲಲೋನ ಸೀತಾ ನಾಯಕುನಿ ನೇಡು।।ಅ.ಪ.।। ಭರತ, ಲಕ್ಷ್ಮಣ, ಶತ್ರುಘ್ನಲು ಕೊಲುವ ಪವಮಾನ ಸುತುಡು ಪದಮುಲ ಬಟ್ಟು, ಧೀರುಲೈನ ಸುಗ್ರೀವ ಪ್ರಮುಖುಲು ವಿನುತಿಸೇಯ ತ್ಯಾಗರಾಜನುತುನಿ ನೇಡು।।ಚ।।

ಚೇತುಲಾರ ಶೃಂಗಾರಮು ಚೇಸಿ ರಾಗ: ಖರಹರಪ್ರಿಯ-ಆದಿತಾಳ

ಚೇತುಲಾರ ಶೃಂಗಾರಮು ಚೇಸಿ ಜೂತುನು ಶ್ರೀರಾಮ।।ಪ।। ಸೇತುಬಂಧನ ಸುರಪತಿ ಸರಸೀರುಹಭವಾದುಲು ಪೊಗಲನಾ।।ಅ.ಪ.।। ಮೆರಗು ಬಂಗಾರಂದೆಲು ಬೆಟ್ಟಿ ಮೇಟಿಯೌ ಸರಿಗ ವಲ್ವಲುಗಟ್ಟಿ ಸುರತುರು ಸುಮಮುಲ ಸಿಗನಿಂಡ ಜುಟ್ಟಿ ಸುಂದರಮಗು ಮೋಮುಸಮುದ್ದು ಬೆಟ್ಟಿ।।1।। ಮೋಲನು ಕುಂದನಪು ಗೆಜ್ಜೆಲು ಗೂರ್ಚಿ ಮುದ್ದುಗ ನುದುಟ ತಿಲಕಮು ದೀರ್ಚಿ ಯಲಕಲಪೈ ರಾವಿರೇಕಯು ಜೂರ್ಚಿ ಯಂದಮ್ಮೈನ ನಿನ್ನುರಮುನ ಚೇರ್ಚಿ।।2।। ಅಣಿ ಮುತ್ಯಾಲ ಕೊಂಡೆ ವೇಸಿ ಹಾವುಸುಗ ಪರಿಮಳ ಗಂಧಮು ಪೂಸಿವಾಣಿ ಸುರುಟಿ ಚೇ ವಿಸರಗ ವಾಸಿ ವಾಸಿ ಯನುಚು ತ್ಯಾಗರಾಜನು ತಯನಿ ರೋಸಿ।।3।।

ಏಳು ಆರೋಗಣೆಗೆ ಏಕೆ ತಡವೋ ರಾಗ: ಕಾಂಭೋದಿ

ಏಳು ಆರೋಗಣೆಗೆ ಏಕೆ ತಡವೋ।।ಪ।। ಆಲಸ ಮಾಡದಲೆ ಮೂಲರಾಮಚಂದ್ರ। ಕುಡಿಬಾಳೆಲೆ ಹಾಕಿ ಸಡಗರದಿಂದ

ಮಣೆಹಾಕಿ ಎಡೆಮಾಡಿ ಬಡಿಸಲು ಶ್ರೀದೇವಿ ಕಾದಿಹಳು ಎಣ್ಣೋರಿಗೆ ಅತಿರಸವು ಸಣ್ಣ ಶ್ಯಾವಿಗೆ ॥1॥ ಪೇಣಿಅನ್ನಧಧ್ಯಾನ್ನ। (ಕ್ಷೀರಾನ್ನಗಳನ್ನು) ಬೆಣ್ಣೆ ದೋಸೆ, ಹುಗ್ಗಿ, ಕಾಯ್ ಹಾಲು ಬಡಿಸಲು ಶ್ರೀದೇವಿ ಬಂದು ಕಾದಿಹಳು॥2॥ ನಿತ್ಯ ತೃಪ್ತನು ನೀನು। ನಿನ್ನುದರದೊಳಿರುವ ಉತ್ತಮ ಪುರುಷರು ಉಣ್ಣಲಿ ಏಳು। ಮುಕ್ತಿದಾಯಕ ನಮ್ಮ ಪುರಂದರವಿಠಲ ಭಕ್ತರ ಭಿನ್ನಪವ ಕೇಳು, ನೀನೇಳೋ॥3॥

ಆರಗಿಂಪವೇ ಪಾಲಾರಗಿಂಪವೇ — ರಾಗ: ತೋಡಿ-ರೂಪಕತಾಳ

ಆರಗಿಂಪವೇ ಪಾಲಾರಗಿಂಪವೇ॥ಪ॥ ರಘುವೀರ ಜನಕಜಾ ಕರ ಪವಿತ್ರಿತಮೌ ವೆನ್ನಪಾ॥ಅ.ಪ॥ ಸಾರಮೈನ ದಿವ್ಯಾನ್ನಮು ಷಡ್ರಸಯುತ ಭಕ್ಷಣಮುಲು ದಾರ ಸೋದರಾದುಲತೋ ತ್ಯಾಗರಾಜ ವಿನುತ ಪಾ॥ಚರಣ॥

ವಿಡಮು ಸೇಯವೇ ನನ್ನು — ರಾಗ: ಖರಹರಪ್ರಿಯ-ಆದಿತಾಳ

ವಿಡಮು ಸೇಯವೇ, ನನ್ನು ವಿಡನಾಡಕುವೇ॥ಪ॥ ಪುಡಮಿ ತನಯ ಚೇತಿ ಮಂಚಿ। ಮಡುಪುಲನುಚು ತಲಚಿ ತಲಚಿ॥ಅ.ಪ॥ ರಾಜಮಾನ್ಯೂಡೌ ಸೌಮಿತ್ರಿರತನತಮ್ಮ ಪಡಿಗಬಟ್ಟಿ ತೇಜರಿಲ್ಲ ನಿಲಚಿನಾಡು ದೇವ ದೇವ ಜಾಜಿಕಾಯಲು, ಏಲಕುಲ ಜಾಪತ್ರಿ ವಕ್ಕಲಾಕುಲು ರಾಜರಾಜವರ ತ್ಯಾಗರಾಜು ಪ್ರೇಮತೋ ನೊಸಗು॥ಚ॥

ಶ್ರೀ ಸಾರ್ವಭೌಮ ಶುಭಕರ

ಶ್ರೀ ಸಾರ್ವಭೌಮ। ಶುಭಕರ ವೀಳ್ಯವ ಸ್ವೀಕರಿಸೈ। ಶ್ರೀರಾಮ ರಾಮಾ ಪ್ರೇಮಾ ರಾಮಾ॥ಪ॥ ಶ್ಯಾಮ ಸುರಮುನಿ ವರವಿನುತ ಸುನಾಮ। ಜಗದನುಪಮಗುಣ ಗಣಸ್ತೋಮ। ಖರತರ ದಶವದನವಿರಾಮ। ಹನುಮಂತ ವಿಭೀಷಣ ಹೇಮ ಧಾಮ। ಬಹುಮಾನದಾನ ನಿಜ। ಕಾಮಿನಿವಚನ ಪ್ರೇಮ ಸುಧಾವನ ॥1॥ ರಂಗಾ ರಘುರಾಮ ಸರಸಿಜ ಮಮಭೃಂಗಾ ಮಲ ಯದುಕುಲ ಜಲಜ ತರಂಗಾ। ಮಿತಬಲಯುತ ಗರುಡತುರಂಗಾ। ಅಖಿಲಲೋಕ ವಿಮೋಚನಾ। ನಾಗವಲ್ಲೀದಳ ಕುಂಕುಮ ಕೇಸರಿ। ಪೂಗಚೂರ್ಣ ಕರ್ಪೂರವಿಲೇಪಿತ ॥2॥ ಈಶಾನುತ ಸರಸಿಜಭವ ಜಗದೀಶ। ಹೃತ್ಕನಕ ಕಶಿಪು ದನುಜೇಶಸುತಾನುತ ನರಹರಿ ವಿಠಲೇಶ। ಸುರಪೋದನ ಸೇವಿತಾವಾಸುಕೀಶ। ವಸುಧೀಶಕೃಪಾರಸ ಕೋಶರಾಶಿ। ಕುಸುಮಾವಳಿ ಶೋಭಿತ ॥3॥

ಕೊಲುವ ಮರೆಗದಾ — ರಾಗ: ತೋಡಿ-ಆದಿತಾಳ

ಕೊಲುವ ಮರೆಗದಾ ಕೊಲುವ ಮರೆಗದಾ। ಕೋದಂಡಪಾಣಿ॥ಪ॥ ನಲುವಕು ಪಲುಕುಲ ಚೆಲಿಯಕು ರುಕ್ಮಿಣಿಕಿ। ಲಲಿತಕು ಸೀತಕು ಲಕ್ಷ್ಮಣುನಿ ಕರುದೈನ॥ಅ.ಪ॥ ವೇಕುವ ಜಾಮುನ ವಲಯುಚು ತಂಬೂರ।ಚೇಕುನಿ ಗುಣಮುಲ ಚೆಲುವೊಂದ ಪಾಡುಚು। ಶ್ರೀಕರುಣಿಕಾಶ್ರೀತ ಚಿಂತಾಮಣುನಿಕಿ। ಆಕಲಿ ದೀರ ಪಾಲಾರಗಿಂಪನು ಚೇಸೇ॥11॥ ವಿನವಯ್ಯ ಸರಿಪ್ರೋದ್ದು ವೇಳನಾಥುನಿಕಿ। ಚನುವುನ ಪನ್ನೀಟ ಸ್ನಾನಮುಕಾವಿಂಚಿ। ಘನುನಿಕಿ ದಿವ್ಯ ಭೋಜನುಮುನು ಬೆಟ್ಟಿಕ। ಮ್ಮನಿ ವಿಡೆ ಮೊಸಗುಚು ಮರುವಕ ಸೇವಿಂಚೇ॥2॥ ಭಾಗವತುಲು ಬಾಗುಗಾ ಘನನಯ। ರಾಗಮುಲಚೇ ದೀಪಾರಾಧನ ಮೊನರಿಂಚಿ। ವೇಗಮೇಶ್ರೀಹರಿವಿರುಲಪೈ ಬವಳಿಂಚಿ। ಚೋಕೊಟ್ಟಿ ತ್ಯಾಗರಾಜ ಸುಮುಖುನಿ ಲೇಪೇ॥3॥

ಆರತಿ ರಾಮ ತುಮ್ಹಾರಾ

ಆರತಿ ರಾಮ ತುಮ್ಹಾರಾ ಜಯ ಜಯ। ಪ್ರಾಣನಾಥ ರಘುನಾಥ ಮುರಾರಿ॥ಪ॥ ಶುಕನಾರದ ಮುನಿಸಾದರ ಗಾವೇ। ಭರತ ಶತ್ರುಘ್ನ ಚವರ ಡುಲಾವೇ॥1॥ ಪೀತ ವಸನ ವೈಜಯಂತಿ ಮಾಲಾ। ಮೇಘವರನ್‌ತನು ನಯನ ಬಿಸಾಲ॥2॥ ಛತ್ರಧರತಿಹೈ ಲಚುಮನ ಭ್ರಾತಾ। ಆರತಿ ಕರತ ಹೈ ಕೌಸಲ್ಯ ಮಾತಾ॥3॥ ಸಮ್ಮುಖ ಶರಣ ರಹೇ ಹನುಬೀರಾ॥ ಬಾರಬಾರ ಗುಣ ಗಾವೇ ಕಬೀರಾ॥4॥

ಆರತಿಯ ತಾರೇ ನೀರೆ

ಆರತಿಯ ತಾರೇ ನೀರೆ ಮಾರನ ಪಿತನಿಗೆ ಬೆಳಗೋಣ। ರಾಮಚಂದ್ರನಿಗೆ ಮುದದಿ ಸಖಿಪ್ರಿಯೇ ಸುಶೀಲೆ॥ಪ॥ ದಶರಥಸುತಗೆ ಹರನ ಧನುವ ಮುರಿದು ಜನಕ ಸುತೆಯಗೆಲಿದಗೆ। ತಂದೆಯ ಮಾತಿಗೋಸುಗ ತನ್ನರಾಜ್ಯವನೆ ತೃಣಕೆಣೆಮಾಡಿದಗೆ। ಕುರಿತುರಗರಥ ತೃಣಶಮವೆಂದು ಭಾವಿಸಿದಾತಗೆ। ವನನಿವಾಸಕೆ ಸತಿ ಅನುಜಸಹಿತಪೊರಟು ನಿಂತವಗೆ॥1॥ ವನಕೆ ಪೊರಟು ಗುಹನೊಡನೆ ಸಖತನ ಬೆಳೆಸುತಪ್ರೇಮಿಸಿದವಗೆ। ವರಮುನಿಯ ಪದಕೆರಗಿ ಚಿತ್ರಕೂಟದಿ ನೆಲೆಸಲನುವಾದಗೆ। ಭರತನ ಲಾಲಿಸಿ, ದಂಡಕಾವನಖಂಡಿಸುತ ರಕ್ಕಸರ ಸದೆಬಡಿದಗೆ। ಸಜ್ಜನರ ಪಾಲಿಸುತ, ಪಂಚವಟಿಗೆ ಬಂದಾಶ್ರಮವಂ ಸೇರಿದಗೆ॥2॥ ಪಿತಸಖ ಜಟಾಯುವಂ ಪರಿಪಾಲಿಸಿ ಖರತ್ರಿಶೂಲನ ತಂದವಗೆ। ಮಾಯದ ಮೃಗವನೆ ಕಂಡು ಸತಿ ಅಭಿಲಾಷೆಗಾಗಿ ಪೊರಟಗೆ। ದಶಮುಖ ತಸ್ಕರನಪಹರಿಸಲು ಸೀತೆಯ ಅರಸುತ ಹೊರಟಗೆ। ಅರಸಿಯ ವಾರ್ತೆಯ ಹನುಮನು ತರಲು ಸಾಗರವನೆ ಪೊರೆದಗೆ। ಅರಿಯ ಸಂಹರಿಸಿ ಸೀತೆಯ ಸಹಿತಲಯೋಧ್ಯೆಗೆ ಬಂದು ಪರಿಪಾಲಿಸಿದವಗೆ॥3॥

ಮಂಗಳಾರತಿ ಪಟ್ಟಾಭಿರಾಮರಿಗೆ ರಾಗ: ಮಾಧ್ಯಮಾವತಿ

ಮಂಗಳಾರತಿ ಪಟ್ಟಾಭಿರಾಮರಿಗೆ। ಜಯಮಂಗಳಾರತಿ ತಂದು ಬೆಳಗಿರೆ॥ಪ॥ ರಾಮ ಸೀತೆಯರು ರಥವೇರಿ ಬರುತಿರಲು। ಡ್ವಾರ್ಯಾ ಕಂಕಣ ವಂಕಿಯಿಟ್ಟು। ಆರುತಿ ಬೆಳೆಗುವೆ। ಭರತ ಶತ್ರುಘ್ನರಾಮ ಲಕ್ಷ್ಮಣರೂ। ಬೇಟೆಯಾಟವ ಆಡಿ ಬರಲು। ಆರತಿ ಬೆಳಗುವೆವು॥ ರಾಮಗೆ ಧಾಮಗೆ ಶ್ಯಾಮಗೆ ಸುಪ್ರೇಮಗೆ। ದಶರಥನ ಪುತ್ರನಾದ। ಕೋದಂಡರಾಮಗೆ। ರಘುರಾಮಗೆ। ಆನಂದ ರಾಮಗೆ। ಶಶಿವದನೆ ಸೀತೆಯ ಕರವಾ ಪಿಡಿದಗೆ। ಕೌಸಲ್ಯೆಸುತಗೆ। ಜಾನಕಿ ಪತಿಗೆ ಆರತಿ ಬೆಳಗುವೆವು॥

ಜೋ ಜೋ ರಾಮ ರಾಗ: ರೀತಿಗೌಳ-ಆದಿತಾಳ

ಜೋ ಜೋ ರಾಮ ಆನಂದ ಘನ ॥ಪ॥ ಜೋ ಜೋ ದಶರಥ ಬಾಲ ಜೋಜೋ ಭೂಜಾಲೋಲ॥ಅ.ಪ॥ ಜೋಜೋ ರಘುಕುಲ ತಿಲಕ ರಾಮ ಜೋಜೋ ಕುಟಿಲ ಕರಾಳಕ ರಾಮ॥1॥ ಜೋ ಜೋ ನಿರ್ಗುಣ ರೂಪ ರಾಮ ಜೋ ಜೋ ಸುಗುಣ ಕಲಾಪ ರಾಮ॥2॥ ಜೋ ಜೋ ರವಿಶಶಿ ನಯನ ರಾಮ ಜೋ ಜೋ ಫಣಿವರ ಶಯನ ರಾಮ॥3॥ ಜೋ ಜೋ ಮೃದುತರ ಭಾಷ ರಾಮ ಜೋ ಜೋ ಮಂಜುಳ ವೇಷ ರಾಮ॥4॥ ಜೋ ಜೋ ತ್ಯಾಗರಾಜಾರ್ಚಿತ ರಾಮ ಜೋ ಜೋ ಭಕ್ತಸಮಾಜ ರಾಮ॥5॥

ತೀರುನಾ ನಾಲೋನಿದುಗ್ಧ ರಾಗ:ಸಾವೇರಿ-ಝಂಪೆತಾಳ

ತೀರುನಾ ನಾಲೋನಿದುಗ್ಧ ॥ಪ॥ ಸಾರಮೌನೀ ಪಾದ। ಸಾರಸಮು ನಾದು ಹೃದಯಾರ ವಿಂದಮುನ ಬೆಟ್ಟಿ ಕಟ್ಟುಕೋಕ॥ಅ.ಪ॥ ಕಮ್ಮ ವಿಲ್ತುನಿ ಗನ್ನ। ಕಾಂತಿಗಲಿಗಿನ ಹರೇ ಮುಮ್ಮಾರು ಪಾಲನ್ನ। ಮಾ ಭುಂಜಿಂಪಬೆಟ್ಟಿ ಕಮ್ಮನಿ ವಿಡಂ ಬೊಸಗಿ। ಕಡುರತ್ನಮುಲು ಮೊರಯು ಕಮ್ಮ ಪಡಿಕನುಬಟ್ಟಿ। ತಾನಿಪುಡು ನಿಲುವಕನು॥1॥ ಅನುದಿನಮು ನೀದು ಪಾದಾಬ್ಜಮುಲ ನೊತ್ತುಚುನು। ಗನಕ ಮಯ ಮೌಸುರಟಿ। ಕರಮುನಿಡಿ ವಿಸರಿ ಘನಮೈನ ಫಣಿ ತಲ್ಪ। ಮುನನುಂಚಿ ಪಾಡುಚುನು ಗನುಲಾರ ಸೇವಿಂಚಿ।ಕಾಲಮುಲ ಗರಪಕನು॥2॥ ರಾಜಾಧಿ ರಾಜಸುರ। ರಾಜವಂದಿತ ಪಾದ ಶ್ರೀಜಾನಕೀ ರಮಣ। ಶೃಂಗಾರ ಜಲಧೇ ರಾಜಧರುಡಗು ತ್ಯಾಗ। ರಾಜ ಪೂಜಿತಡನುಚು ರಾಜಿಲ್ಲು ನೀ ಕೀರ್ತಿ। ರಾಜಿನಾ ಬೋಗಡುಕನು॥3॥

ಅಸುರ ಬಾಧಿಸುತಿರಲು

ಅಸುರ ಬಾಧಿಸುತಿರಲು ಋಷಿಗಳು ಸ್ತುತಿಮಾಡೆ। ದಶರಥನ ಗರ್ಭದಲಿ ಜನಿಸಿ ಬಂದೆ॥1॥ ಶಿಶುವಾಗಿ ಕೌಸಲೆಗೆ

ಬಾಲಲೀಲೆಯ ತೋರ್ದು। ಕುಶಲದಿಂ ನಾಲ್ವರ ಕೂಡೆ ಬೆಳೆದೆ॥2॥ ಅಸುರರನೆ ಬಡಿದಟ್ಟಿ ಋಷಿಯ ಯಾಗವ ಕಾಯ್ದು। ವಸುಧೆಯೊಳು ಶಿಲೆಯನ್ನು ಸತಿಯಮಾಡಿ॥3॥ ಮಿಥಿಲ ಪಟ್ಟಣಕೈದಿ ಮೃಡನ ಧನುವನೆ ಮುರಿದು। ಶಶಿಮುಖಿಯ ಜಾನಕಿಯ ಕರವ ಪಿಡಿದು॥4॥ ಪಥದೊಳಗೆ ಬರುತ ಭಾರ್ಗವರೊಡನೆ ಹೋರಾಡಿ। ದಾಶರಥಿಗೆ ಏಕೀಭಾವವನೆ ತೋರಿ॥5॥ ಪರಮ ಹರುಷದಲಿ ಸಾಕೇತನಗರಿಗೆ ಬಂದು। ಕಿರಿಯ ಮಾತೆಯ ಕಠಿಣನುಡಿಕೇಳಿ॥6॥ ಚಿತ್ರಕೂಟಕೆ ಬಂದು ಕೃತ್ಯವೆಲ್ಲವ ನಡೆಸಿ। ಭ್ರಾತೃ ಭರತನಿಗೆ ಪಾದುಕೆಯನಿತ್ತು॥7॥ ವನದೊಳಗೆ ಸಂಚರಿಸಿ ರತ್ನಕೊಂಡು ಬರಲು। ಅತ್ಯಂತ ಹರುಷದಲಿ ಶರಧಿ ಕಟ್ಟಿ॥8॥ ಮಿತ್ರೆಜಾನಕಿಗರುಹಿ ರತ್ನಕೊಂಡು ಬರಲು। ಅತ್ಯಂತ ಜಾನಕಿಯ ಅಗ್ನಿಹೊಗಿಸಿ॥9॥ ದುಷ್ಟರಾಕ್ಷಸಕುಲವ ಕುಟ್ಟಿ ಬೇರನೆ ಸವರಿ। ಸೃಷ್ಟಿಸುತೆ ಜಾನಕಿಯ ಅಗ್ನಿಹೊಗಿಸಿ॥10॥ ಪಟ್ಟಣಕೆ ಬಂದು ಭರತನಿಗೆ ಪೇಳಿ। ಅಷ್ಟಗಂಗೆ ಉದಕವನೆ ತಂದು॥11॥ ಅಷ್ಟಋಷಿಗಳು ಎಲ್ಲಕೂಡಿಕೊಂಡು। ಪಟ್ಟಾಭಿಷೇಕವನು ಮಾಡುತಿರಲೆಂದು॥12॥ ಸೃಷ್ಟಿಯೊಳು ಜಗನ್ನಾಥವಿಠಲನಿಗೆ ಪುಷ್ಪ। ವೃಷ್ಟಿಗಳನೆಲ್ಲರೂ ಕರೆದರಾಗ॥13॥

ಜಾನಕೀ ನಾಯಕ ನೀಕು ಜಯ ಮಂಗಳಂ ರಾಗ: ಧನ್ಯಾಸಿ-ಆದಿತಾಳ

ಜಾನಕೀ ನಾಯಕ ನೀಕು ಜಯ ಮಂಗಳಂ ನೃಪ। ಸೂನ ಸುಂದರ ಮುನಕು ಶುಭಮಂಗಳಂ ಹರೇ॥ಪ॥ ಫಾಲ ಮುನಕು ನೀದು ಕಪೋಲಮುನಕು ಮಂಗಳಂ। ನೀಲವರ್ಣ ನೀ ಪಲು ವಜ್ರಾಲಮುನಕು ಮಂಗಳಂ॥1॥ ಯೌವ್ವನ ಮುನುಕು ಚಿರುನವ್ವನಕು ಮಂಗಳಂ। ದುವ್ವಿನ ಯಲಕಲಮೀದಿ ಪುವ್ವುಲಕು ಮಂಗಳಂ॥2॥ ಮಾಟಲಕು ರತ್ನಾಲಕಿರೀಟಮುನಕು ಮಂಗಳಂ। ನಾಟಕ ಸೂತ್ರಧಾರ ನೀತೇಟಕಂಡ್ಲಕು ಮಂಗಳಂ॥2॥ ಬಾಣ ಮುನಕು ಕುಸುಮಬಾಣ ಜನಕ ಮಂಗಳಂ। ಜಾಣತನ ಮುನಕು ನೀಲೋಕ ತ್ರಾಣುನಕು ಮಂಗಳಂ॥4॥ ಉಂಗುರ ಮುನಕು ನೀದೃಷ್ಟಾಂಗ ಮುನಕು ಮಂಗಳಂ। ಪೊಂಗುಚು ಪದಮುಲುನುಂಡು ಗಂಗಕುನು ಮಂಗಳಂ॥5॥

ಮಂಗಳಂ ಶ್ರೀರಾಮಚಂದ್ರಗೆ ರಾಗ: ಅಭೇರಿ

ಮಂಗಳಂ ಶ್ರೀರಾಮಚಂದ್ರಗೆ। ಚಂದ್ರ ವದನೆ ಸೀತಾದೇವಿಗೆ। ಲಕ್ಷ್ಮಣ ಭರತ ಶತೃಘ್ನಾದಿಗಳಿಂ। ಆಂಜನೇಯಂ ಸೇವಿತಗೆ॥ಪ॥ ಸೃಷ್ಟಿಯೊಳು ಅತಿ ಶ್ರೇಷ್ಠ ಅಯೋಧ್ಯೆ ಪಟ್ಟಣದೊಳು ಸಿಂಹಾಸನದಿ। ಶ್ರೇಷ್ಠ ವಸಿಷ್ಠಾದಿಗಳಿಂ ಕೂಡಿ। ಪಟ್ಟಾಭಿಷೇಕಾಲಂಕೃತಗೆ॥1॥ ದಿಟ್ಟ ಹನೂಮ ಶಿಷ್ಟರ ಸಹಾಯದಿ। ಥಟ್ಟನೆ ಸೇತುವೆ ಕಟ್ಟಿದಗೆ। ದುಷ್ಟ ರಾವಣನ ಕುಟ್ಟಿ ಸಂಹರಿಸಿ। ಪಟ್ಟದೊಲ್ಲಭೆತಂದ ರಾಮನಿಗೆ॥2॥ ಭಜಕ ಜನರ ಮೇಲಿನ ನಿಜ ಮೋದದಿ। ನಿಜ ಸುಖವನ್ನೆಮಗೀಯುತಿಹ। ಸುಜನವಿಪೋಷಕ ಕುಜನ ವಿನಾಶಕ। ನಿಜಸುಖದಾಯಕ ರಾಮನಿಗೆ॥3॥

ಮಂಗಳಂ ಜಾನಕೀರಮಣನಿಗೆ ರಾಗ: ಕಾಂಬೋದಿ-ಮಿಶ್ರಛಾಪು

ಮಂಗಳಂ ಜಾನಕೀರಮಣನಿಗೆ। ಜಯಮಂಗಳಂ ಶ್ರೀ ರಾಮಚಂದ್ರಗೆ॥ಪ॥ ದಶರಥ ಸುತನಿಗೆ। ದೈತ್ಯ ಸಂಹಾರಗೆ। ಶಶಿಮುಖಿ ಕೌಸಲ್ಯನಂದನಗೆ। ಪಶುಪತಿ ಮಿತ್ರಗೆ। ಪಾವನ ಚರಿತ್ರಗೆ। ದಶಕಂಠವೈರಿ ಸೀತಾರಾಮಚಂದ್ರಗೆ॥1॥ ಜನಕಸುತೆಯು ಸೀತೆ ವಾಮಭಾಗ ದೊಳಿರೆ। ಅನುಜ ಲಕ್ಷ್ಮಣನು ಚಾಮರವ ಬೀಸೆ। ಹನುಮಂತ ಭಕ್ತೀಲಿ ಪಾದವ ಪಿಡಿದರೆ ಮನಸಿಜನಾಭ ಸೀತಾ ರಾಮಚಂದ್ರಗೆ॥2॥ ಕರುಣಾಕರನಿಗೆ ಕಂಜಲೋಚನನಿಗೆ। ಶರಣಾಗತ ಪರಿಪಾಲನಗೆ। ಗರುಡವಾಹನನಿಗೆ ಗಜರಾಜವರದಗೆ। ಪರಮ ಮಂಗಳ ಮುದ್ದು ಪಟ್ಟಾಭಿರಾಮಗೆ॥3॥

ದುಷ್ಟರೆಲ್ಲರ ಮರ್ದಿಸಿ (ಆಶೀರ್ವಾದ) ರಾಗ: ಮಧ್ಯಮಾವತಿ

ದುಷ್ಟರೆಲ್ಲರ ಮರ್ದಿಸಿ ಶ್ರೀರಾಮನು ಮಿತ್ರೆ ಜಾನಕಿ ಸಹಿತ। ತಟ್ಟನೆ ತೆರಳಲು ವಿಪ್ರರು। ವಿಪ್ರರೊಡನೆ ರಾಮ। ಭಕ್ತವತ್ಸಲ ರಾಮ। ಸುಖವಾಗಿ ಇರು ಎಂದು ಮಂಗಲ ಜಯ॥ಪ॥ ಶೃಂಗಾರ ಶ್ರೀರಾಮ ಅಂಗನೆ ಸಹಿತಾಲೆ।

ಚಂದದಿಂ ರಾಜ್ಯವನಾಳೆಂದು ಹರಸುತ॥1॥ ಅಯೋಧ್ಯೆ ಕಡೆ ತಂದರು। ಶ್ರೀರಾಮರಿಗೆ ಪಟ್ಟ ಕಟ್ಟುವೆನೆಂದರು। ಪಟ್ಟ ಕಟ್ಟುವೆನೆಂದು ಪದಕ ಕೀರಿಟವನ್ನಿಟ್ಟು। ಪಟ್ಟಾಭಿರಾಮ ಸುಖವಾಗಿ ಇರು ಎಂದು॥2॥ ಮುಂಗಡೆಯೊಳು ನಿಂದರು। ಶ್ರೀರಾಮರಿಗೆ ಮಂಗಳವಾಗಲೆಂದು। ಭೃಂಗ ಕುಂತಳೆಯರು ಮಂಗಳಾರತಿಯೆತ್ತಿ ಸೇತು ಬಂಧನ ರಾಮ। ಸುಖವಾಗಿ ಇರುಎಂದು॥3॥ ರಾಜ ಸಿಂಹಾಸನದಲ್ಲಿ ಶ್ರೀರಾಮರು ನಾರಿ ಜಾನಕಿ ಸಹಿತ। ಆ ಮಹಾಸುರರು ಆಗ ಮಳೆಗರೆಯಲು। ಭೇರಿ ದುಂದುಭಿವಾದ್ಯ ಮೊಳಗುತ್ತ ಇರುವಂತೆ॥4॥



ಶ್ಯಾಮವರ್ಣನೇ ಶ್ರೀ ರಾಮನೇಳು

ಶ್ಯಾಮವರ್ಣನೇ ಶ್ರೀ ರಾಮನೇಳು। ಪೂರ್ಣ ಕಾಮನ ಪ್ರೇಮದಿ ಎಬ್ಬಿಸಿದಳೆ ಕೌಸಲ್ಯ ದೇವಿ ॥ಪ॥ ವಂಶೋದ್ಧಾರನೆ ಕೌಸಲ್ಯತನಯ। ಕೌಶಿಕರ ಯಾಗವ ಕಾಯಬೇಕು। ಸಂಶಯ ವಿಲ್ಲದೆ ಅಸುರರನಳಿಯಬೇಕು। ರಘುವಂಶೋದ್ಧಾರನೆಂದೆನಿಸಬೇಕಯ್ಯಾ॥1॥ ಮಿಥಿಲಾಪುರದ ಪಟ್ಟಣಕೆ ಹೋಗಲಿಬೇಕು। ಅಹಲ್ಯೆಗೆ ಮುಕ್ತಿ ಕೊಡಲು ಬೇಕು। ಸತಿಯೊಳು ಜಾನಕಿಯ ತರಬೇಕು। ಮುಂದೆ ಮಿತಿಯಿಲ್ಲದ ಶೌರ್ಯವ ಮಾಡಬೇಕಯ್ಯ॥2॥ ಮಾತೆಯ ನುಡಿಕೇಳಿ ಮನೆಯಿಂದ್ಹೊ ರಡಲಿಬೇಕು। ಅಸುರ ಜಾತಿಯ ಕುಲಗಳಳಿಯಬೇಕು। ಪಾತಕ ಮಾಯಾಮೃಗವ ಕೊಲ್ಲಲಿಬೇಕು। ಮುಂದೆ ಸೀತೆ ಕದ್ದಸುರನ ಶಿಕ್ಷಿಸಬೇಕಯ್ಯ॥3॥ ಆಲಯಕ್ಹೋಗಬೇಕು। ಕಿಷ್ಕಿಂದ ನಗರಕ್ಕೆ। ಸಾಲು ಸಾಲಾಗಿ ಅಸುರರನಳಿಯಲಿ ಬೇಕು। ವಾಲಿಯ ಕೊಂದು ಸುಗ್ರೀವನ ಮನ್ನಿಸಲಿಬೇಕು। ಮುಂದೆ ಮಾಲ್ಯಾವಂತದಲ್ಲಿ ನೀನಿರಬೇಕಯ್ಯಾ॥4॥ ಘನಹರುಷದಲಿ ಸೇತುವೆಯ ಕಟ್ಟಲಿಬೇಕು। ಅನುಬಂಧಿ ಶರಧಿಯ ದಾಟಲಿಬೇಕು। ದನುಜನ ದಶಶಿರಗಳು ಅಳಿಯಬೇಕು। ಅವನನುಜಂಗೆ ಸ್ಥಿರಪಟ್ಟವನು ಕಟ್ಟಬೇಕಯ್ಯ ॥5॥ ಮಡದಿಯ ತರಬೇಕು ಮಹಾತ್ಮನೆಂದೆನಿಸಬೇಕು। ದೃಢಭಕ್ತಿ ಯಿಂದ ಅಯೋಧ್ಯೆಗೆ ಹೋಗಬೇಕು। ದೃಢಭಕ್ತಿಯಿಂದ ಕೋಟೆಲಿದ್ದ ಕೇಶವರಾಯ ಕಡುಚೆಲ್ವ ಮೂರ್ತಿ ಎಂದೆನಿಸಬೇಕಯ್ಯ॥6॥

ಶ್ರೀರಾಮಂ ಜಾನಕೀ ಕಾಂತಂ (ಧ್ಯಾನಶ್ಲೋಕ)

ಶ್ರೀರಾಮಂ ಜಾನಕೀ ಕಾಂತಂ ಕೌಸಲ್ಯಾನಂದನ ವರ್ಧನಂ। ಪಿತೃವಾಕ್ಯೈಕನಿರತಂ ಅಹಲ್ಯಾ ಶಾಪ ಮೋಚನಂ॥ ಇಕ್ಷ್ವಾಕು ಕುಲಸಂಭೂತಂ ರಾವಣಾರಿಂ ಜಿತೇಂದ್ರಿಯಂ। ಏಕಪತ್ನೀ ವ್ರತಧರಂ ದ್ವಿಬಾಹುಂ ಲಕ್ಷ್ಮಣಾಗ್ರಜಂ॥ ಅಯೋಧ್ಯಾಧಿಪತಿಂ ದೇವಂ ರೂಪಯೌವನಶಾಲಿನಂ। ಧನುರ್ಬಾಣಧರಂ ವೀರಂ ಜಾಮದಗ್ನ್ಯಮದಾಪಹಂ॥ ಸುಗ್ರೀವ ಹನುಮತ್ಪ್ರೀತಂ ಷಡಕ್ಷರ ಮನುಪ್ರಿಯಂ। ವಿಭೀಷಣೇಷ್ಟ ದಾತಾರಂ ಶ್ರೀರಾಮ ಪ್ರಮಾಮಾಮ್ಯಹಂ॥ ಸತ್ಯದೇವ ಪ್ರಪನ್ನಾಯ ತವಾಸ್ಮೀತಿಯಾ ಚತೇ। ಅಭಯಂ ಸರ್ವಭೂತೇಭ್ಯೋ ದಾದಂ ಮೆ ಮ್ಯೇತದ್ವ್ರತಂ ಮಮ॥

ಸತ್ಯದೇವ ಪ್ರಪನ್ನಾಯ (ಶ್ರೀರಾಮನ ಅಭಯವಾಕ್ಯ)

ಸತ್ಯದೇವ ಪ್ರಪನ್ನಾಯ ತವಾಸ್ಮೀತಿಯಾ ಚತೇ। ಅಭಯಂ ಸರ್ವಭೂತೇಭ್ಯೋ ದಾದಂ ಮ್ಯೇತದ್ವ್ರತಂ ಮಮ॥

ಚೆಲ್ಲಿದರು ಮಲ್ಲಿಗೆಯ ಶ್ರೀರಾಮನಿಗೆ ರಾಗ: ಸಿಂಧುಭೈರವಿ

ಚೆಲ್ಲಿದರು ಮಲ್ಲಿಗೆಯ। ಶ್ರೀರಾಮನಿಗೆ॥ಪ॥ ಅಂದದ ಚೆಂದದ ರವಿಕುಲ ತಿಲಕಗೆ॥ಅ.ಪ॥ ಸಿಂಧು ಸುತೆಯೆನಿಸಿ ಲೋಕಪಾವನೆಯಾದ। ಸೀತೆಯು ನಮಿಸಿದ ರಾಮನ ಪಾದಕ್ಕೆ॥1॥ ತಂದೆಯ ಮಾತಿನಂತೆ ವನವಾಸ ಹೊರಟಂಥ। ಅಹಲ್ಯೆಗೆ ಮೋಕ್ಷವ ಕೊಟ್ಟಂಥ ಪಾದಕ್ಕೆ॥2॥ ಭರತನ ಆಸೆಯಂತೆ ಪಾದುಕೆ ಕೊಟ್ಟಂಥ। ಮೋಕ್ಷವ ಕೊಡುವಂಥ ರಾಮನ ಪಾದಕ್ಕೆ॥3॥ ಶಬರಿಯು ಕಾದಿಹಳು ರಾಮ ಬರುವನೆಂದು। ಶಬರಿಗೆ ಮೋಕ್ಷವ ಕೊಟ್ಟಂಥ ಪಾದಕ್ಕೆ॥4॥ ರಾಮನ ಭಕ್ತನಾದ ವೀರ ಹನುಮಂತನಿಗೆ। ಅಂಜನೆ ಸುತನಿಗೆ ಒಲಿದಂಥ ಪಾದಕ್ಕೆ॥5॥ ಅನುಜ ವಿಭೀಷಣಗೆ

ಅಭಯವ ನೀಡಿದಂಥ। ಚಿನ್ನದ ರನ್ನದ ವಜ್ರದ ಪಾದಕ್ಕೆ॥6॥ ದಶಮುಖ ರಾವಣನ ಶಿರಗಳ ಛೇದಿಸಲು। ಬ್ರಹ್ಮಾಸ್ತ್ರವನ್ನು ಪಡೆದವನ ಪಾದಕ್ಕೆ॥7॥

ಪೂಜಿಸುವೆ ಸೀತಾರಾಮರನ್ನು ರಾಗ: ಮಾಂಡ್-ಆದಿತಾಳ

ಪೂಜಿಸುವೆ ಸೀತಾರಾಮರನ್ನು। ಆನಂದದಿಂದಲಿ ಭರತ ಲಕ್ಷ್ಮಣರನ್ನು॥ಪ॥ ನಮಗಿದು ಸ್ವಾಮಿ ನಿಮಗೆ ಬಲು ಪ್ರೇಮ। ಸ್ಮರಿಸುವೆ ಸ್ವಾಮಿ ಸರ್ವಾಂತರ್ಯಾಮಿ। ಭಕ್ತರ ಕಾಪಾಡುವೋ ಕೃಷ್ಣಸ್ವಾಮಿ। ನಿನ್ನ ಭಜನೆಯನ್ನು ಮಾಡುವೇವು ರಾಮಚಂದ್ರ॥1॥ ಸೇತುವೆಯ ಕಟ್ಟಿ ಶರಧಿಯನ್ನು ದಾಟಿ। ವಿಭೀಷಣ ದೇವರಿಗೆ ಪಟ್ಟವ ಕಟ್ಟಿ। ದುಷ್ಟ ರಾವಣನನ್ನು ಕೊಂದುಬಿಟ್ಟು। ಶಶಿಮುಖಿ ಸೀತೆಯನ್ನು ತಂದುಬಿಟ್ಟೆ॥2॥ ವಾಲಿಯನು ಕೊಂದೆ ಸುಗ್ರೀವನೊಳು ನಿಂದೆ। ಸುಖವಾಗಿ ಸ್ನೇಹವನು ಬಯಸಿ ಬಂದೆ। ಭಕ್ತ ಹನುಮಂತ ನಿನ್ನ ಭಜನೆಯಿಂದ। ಸೀತೆಯ ಬಂಧನವ ಬಿಡಿಸಿ ತಂದ॥3॥

ರಾಮನಾಮವನು ನುಡಿ ನುಡಿ ರಾಗ: ಮಧ್ಯಮಾವತಿ-ಆದಿತಾಳ

ರಾಮನಾಮವನು ನುಡಿ ನುಡಿ। ಕಾಮಕ್ರೋಧಗಳ ಬಿಡಿ ಬಿಡಿ॥ಪ॥ ಹರಿ ನಿರ್ಮಾಲ್ಯವ ಮುಡಿ ಮುಡಿ ಪರಮಾಮೃತ ರಸ ಕುಡಿ ಕುಡಿ। ಗುರುಗಳ ಚರಣವ ಹಿಡಿಹಿಡಿ ಬಂದ ದುರಿತಗಳೆಲ್ಲವ ಹೊಡಿ ಹೊಡಿ॥1॥ ಸಜ್ಜನ ಸಂಗವ ಮಾಡೋ ಮಾಡೋ ದುರ್ಜನ ಸಂಗವ ಬಿಡೋ ಬಿಡೋ। ನಮ್ಮ ಅರ್ಜುನ ಸಾರಥಿಯ ನೋಡೋ ನೋಡೋ ಹರಿ ಭಜನೆಯಲಿ ಮನ ಇಡೋ ಇಡೋ॥2॥ ಕರಿರಾಜವರದನ ಸಾರೋ ಸಾರೋ ಶ್ರಮ ಪರಿಹರಿಸೆಂದು ಹೊರೋ ಹೊರೋ। ವರದ ಭೀಮೇಶನ ದೂರದಿರೋ ನಮ್ಮ ಪುರಂದರವಿಠಲನ ಸೇರೋ ಸೇರೋ॥3॥

ರಾಮನಾಮ ಭಜಿಸಿದವಗೆ ರಾಗ: ಹಿಂದೋಳ-ಆದಿತಾಳ

ರಾಮನಾಮ ಭಜಿಸಿದವಗೆ ಉಂಟೇ ಭವದ ಬಂಧನ ಶ್ರೀ॥ಪ॥ ಕಾಮಹರನ ಸತಿಯು ಸದಾ ನೇಮದಿಂದ ಭಜಿಸುವ ಶ್ರೀ॥ಅ.ಪ॥ ಶಿವನು ಧನ್ಯನಾದ ಮೌನಿಯುವತಿ ಪಾವನೆಯಾದಳು। ರವಿಯಸುತನು ಪದವಿ ಪಡೆದ ಧ್ರುವನು ದಿವಿಜನೆನಿಸಿದ॥1॥ ಕರಿವರದ ಪ್ರಹ್ಲಾದ ದ್ರೌಪದಿ ವರವಿಭೀಷಣರೆಲ್ಲರೂ। ಹರಿಯಸ್ಮರಣೆ ಮಾಡಿ ಸೌಖ್ಯ ಪರಮ ಪದವಿ ಪಡೆದರು॥2॥ ಗಿರಿಜೆ ರಾಮಮಂತ್ರದಿಂದ ಪರಮ ಮಂಗಳೆಯಾದಳು। ವರದ ಗೋಪಾಲವಿಠ್ಠಲ ನಾಮ ದುರಿತಕಾನನ ಪಾವಕ॥3॥

ರಾಮ ಎಂಬುವ ಎರಡು ಅಕ್ಷರದ ರಾಗ: ಶಹನ-ಆದಿತಾಳ

ರಾಮ ಎಂಬುವ ಎರಡು ಅಕ್ಷರದ ಮಹಿಮೆಯನು। ಪಾಮರರು ತಾವೇನು ಬಲ್ಲರಯ್ಯ॥ಪ॥ ರಾ ಎಂದ ಮಾತ್ರದೊಳು ರಕ್ತಮಾಂಸದೊಳಿದ್ದ ಆಯಸ್ತವಾದ ಅತಿ ಪಾಪವನ್ನು। ಮಾಯವನು ಮಾಡಿ ಮಹರಾಯ ಮುಕ್ತಿಯ ಕೊಡುವ ದಾಯವನು ವಾಲ್ಮೀಕಿ ಮುನಿರಾಯ ಬಲ್ಲ॥1॥ ಮತ್ತೆ ಮ ಎಂದೆನಲು ಹೊರಬಿದ್ದ ಪಾಪಗಳು ಒತ್ತಿ ಒಳಪೊಗದಂತೆ ಕವಾಟವಾಗಿ। ಚಿತ್ತಕಾಯಗಳ ಪವಿತ್ರಮಾಡುವ ಪರಿಯ ಭಕ್ತವರ ಹನುಮಂತನೊಬ್ಬ ತಾ ಬಲ್ಲ॥2॥ ಧರೆಯೊಳೀ ನಾಮಕ್ಕೆ ಸರಿಮಿಗಿಲು ಇಲ್ಲೆಂದು ಪರಮ ವೇದಗಳೆಲ್ಲ ಪೊಗಳುತಿಹವು। ಸಿರಿಯರಸ ಪುರಂದರವಿಟ್ಠಲನ ನಾಮವನು ಸಿರಿ ಕಾಶಿಯೊಳಗಿಪ್ಪ ಶಿವನು ತಾ ಬಲ್ಲ॥3॥

ರಾಮ ರಾಮ ಮುಕುಂದ ಮಾಧವ

ರಾಮ ರಾಮ ಮುಕುಂದ ಮಾಧವ ರಾಮ ಸದ್ಗುರು ಕೇಶವ। ರಾಮದಶರಥ ತನಯದೇವ ರಾಮ ಶ್ರೀ ನಾರೇಯಣ॥1॥ ಪರಮ ಪಾವನ ಪಕ್ಷಿವಾಹನ ಪದ್ಮನಾಭ ಜನಾರ್ಧನ ಹರಿಲಹರಿ ಕ್ಷೀರಾಬ್ಧಿಶಯನ ಅಮರ ಶ್ರೀ ನಾರೇಯಣ॥2॥ ಪಾಹಿಮಾಂ ಪರಮಾತ್ಮ ರಕ್ಷಕ ಪಾಹಿಮಾಂ ಸರ್ವಾತ್ಮಕ। ಪಾಹಿಮಾಂ ಪ್ರದ್ಯುಮ್ನ ಜನಕ ಪಾಹಿಮಾಂ ನಾರೇಯಣ॥3॥ ಜಯತು ಜಯತು ಗಜೇಂದ್ರ ರಕ್ಷಣ ಜಯತು ಭಕ್ತ ಅಪೇಕ್ಷಣ। ಜಯತು ಜಯ ಶ್ರೀ ಸತ್ಯಭಾಷಣ

ಜಯತು ಶ್ರೀ ನಾರೇಯಣ॥4॥ ವಂದನಮು ಶ್ರೀ ವಿಠಲೇಶ್ವರ ವಂದನಮುಂ ಜಗದೀಶ್ವರ। ವಂದನಮು ಶ್ರೀ ವೆಂಕಟೇಶ್ವರ ವಂದನಮು ನಾರೇಯಣ॥5॥ ಶರಣು ಶರಣು ಭುಜಂಗಶಯನ ಶರಣು ಯದುಕುಲ ಪಾವನ। ಶರಣು ಶರಣು ಪ್ರಪಂಚ ಪಾಲನ ಶರಣು ಶ್ರೀ ನಾರೇಯಣ॥6॥

ಕೋದಂಡರಾಮ್ ಪಾಹಿ ರಾಗ: ಕಾಪಿ

ಕೋದಂಡರಾಮ್ ಪಾಹಿ ಕೋದಂಡರಾಮ। ಪಟ್ಟಾಭಿರಾಮ ಪಾಹಿ ಪಟ್ಟಾಭಿರಾಮ॥ಪ॥ ದಶರಥ ಸುತಪ್ರಭು ರಾಜಾರಾಮ ಕೌಸಲ್ಯ ಸುತವಿಭು ಸೀತಾರಾಮ। ಜಾನಕೀ ಪ್ರಿಯಕರ ರಾಜಾರಾಮ ಧ್ಯಾನಗೋಚರನೆ ಸೀತಾರಾಮ॥1॥ ಶ್ಯಾಮಲ ಶರೀರ ರಾಜಾರಾಮ ಕಾಮಿತಾರ್ಥಪ್ರದ ಸೀತಾರಾಮ। ಇನಕುಲ ತಿಲಕನೆ ರಾಜಾರಾಮ ಘನಮಹಿಮಾಮಯ ಸೀತಾರಾಮ॥2॥ ರಾವಣನಾಶಕ ರಾಜಾರಾಮ ವಿಭೀಷಣಪಾಲಕ ಸೀತಾರಾಮ। ಹನುಮದ್ವಂದಿತ ರಾಜಾರಾಮ ಮನುಕುಲೋತ್ತಮನೆ ಸೀತಾರಾಮ॥3॥ ರಾಮಸುತ್ರಾಮನೆ ರಾಜಾರಾಮ ರಾಮನಿಸ್ಸೀಮನೆ ರವಿಕುಲಸೋಮ। ಶೇಷಶಯನ ಹರಿ ರಾಜಾರಾಮ ಕೇಶವದಾಸನುತ ಸೀತಾರಾಮ॥4॥

ಭಜರಾಮಂ ಭಜರಾಮಂ ರಾಗ: ಮೋಹನ

ಭಜರಾಮಂ ಭಜರಾಮಂ ಭಜರೇ ಮಾನಸ ಭಜರಾಮಂ॥ಪ॥ ಕಲ್ಯಾಣ ರಾಮಂ ಭಜರಾಮಂ। ಕೋದಂಡ ರಾಮಂ ಭಜರಾಮಂ। ಪಟ್ಟಾಭಿರಾಮಂ ಭಜರಾಮಂ। ಪಾವನ ರಾಮಂ ಭಜರಾಮಂ॥1॥

ರಾಮಚಂದ್ರ ರಘುವೀರ ರಾಗ: ಕಾನಡ

ರಾಮಚಂದ್ರ ರಘುವೀರ, ರಾಮಚಂದ್ರ ರಣಧೀರ। ರಾಮಚಂದ್ರ ರಘುರಾಮ, ರಾಮಚಂದ್ರ ಪರಂಧಾಮ। ರಾಮಚಂದ್ರ ರಘುನಾಥ ರಾಮಚಂದ್ರ ಜಗನ್ನಾಥ। ರಾಮಚಂದ್ರ ಮಮಬಂಧು, ರಾಮಚಂದ್ರ ದಯಾಸಿಂಧು। ರಘುವೀರ, ರಣಧೀರ, ರಘುರಾಮ, ಪರಂಧಾಮ, ರಘುನಾಥ, ಜಗನ್ನಾಥ, ಮಮಬಂಧು, ದಯಾಸಿಂಧು॥

ಶ್ರೀರಾಮ್ ಜಯರಾಮ್ ರಾಗ: ಸಿಂಧೂಭೈರವಿ

ಶ್ರೀರಾಮ್ ಜಯರಾಮ್ ಜಯ ಜಯರಾಮ್। ಜಾನಕಿ ಜೀವನ ರಾಂ। ಪತಿತ ಪಾವನ ರಾಮ ಹರೇ ಜಯ। ರಾಘವ ಸುಂದರ ರಾಂ॥1॥ ದೀನೋದ್ಧಾರಣ ರಾಮಹರೇ ಜಯ। ಮಾರುತಿ ಸೇವಿತ ರಾಂ (2ಸಾರಿ)। ಜಯ ಜಯ ರಾಮ ಜಯ ರಘುರಾಮ। ಜಾನಕಿ ಜೀವನ ರಾಮ್॥2॥

ರಾಮ ರಾಮ ಜನಕಜೇಶ ರಾಗ: ಕಾನಡ

ರಾಮ ರಾಮ ಜನಕಜೇಶ ರಾಮ ರಾಮ ಭಕ್ತಪ್ರೇಮಿ ಕಾಮಿತಾರ್ಥದಾತ ರಾಮರಾಮ ॥ಸೀತಾ॥ ಬಿಸಜಮಿತ್ರ ವಂಶಜಾತ ರಾಮ ರಾಮ। ನಿತ್ಯ ಕುಶಲದಿಂದ ಸಲಹೋ ಎಮ್ಮನು ರಾಮ ರಾಮ॥ಸೀತಾ॥1॥ ಜತನದಿಂದ ಜನರಿಗೆಲ್ಲ ಸುಖವ ತೋರಿಸೋ ರಾಮ। ಸತತ ನಿನ್ನನು ಧ್ಯಾನಗೈವ ಮತಿಯ ಪಾಲಿಸೋ॥ಸೀತಾ॥2॥ ದಂಡಪಾಣಿ ಭಯಖಂಡನ ರಾಮ ರಾಮ ರಾಮ। ಕೋದಂಡಪಾಣಿ ಮಂಡಲೇಶ ರಾಮರಾಮ॥ಸೀತಾ॥3॥ ಪ್ರಣತಜನರ ಪೊರೆಯೋ ಸೀತಾರಾಮ ರಾಮ। ಪ್ರತಿಕ್ಷಣದೊಳ್ ನಿನ್ನ ಧ್ಯಾನ ಗೈವೆವು ರಾಮರಾಮ ॥ಸೀತಾ॥4॥ ಭಾನುಕೋಟಿ ಭಾಸುರಾಂಗನೆ ರಾಮರಾಮ। ನಿತ್ಯಸಾನುರಾಗದಿಂದ ಕಾಯೋ ರಾಮರಾಮ॥ಸೀತಾ॥5॥ ಮೂರು ಲೋಕದಲ್ಲಿ ಸುಖದ ಪೈರು ಬೆಳೆಯಲಿ ರಾಮ। ಮಾರಿಕಾದಿ ದೋಷವೆಲ್ಲ ದೂರವಾಗಲೀ॥ಸೀತಾ॥6॥ ವಾಲಿಬಾಲಪಾಲ ನೀಲಮೇಘಶ್ಯಾಮರಾಮ ರಾಮರಾಮ ಜನಕಜೇಶ ರಾಮರಾಮ॥ಸೀತಾ॥7॥

ನನ್ನು ಪಾಲಿಂಪ ರಾಗ ಮೋಹನ-ಆದಿತಾಳ

ನನ್ನು ಪಾಲಿಂಪ ನಡಚಿ। ವಚ್ಚಿತಿವೋ। ನಾ ಪ್ರಾಣನಾಥ॥ಪ॥ ವನಜನಯನ ಮೋಮುನು ಚೂಚುಟಜೀವನಮನಿ। ನೆನರುನ ಮನಸು ಮರ್ಮಮುದೆಲಿಸಿ॥ಅ.ಪ॥ ಸುರಪತ ನೀಲಮಣಿ ನಿಭತನುವು ತೋ। ನುರಮುನ ಮುತ್ಯಪು ಸರುಲ ಚಯಮುತೋ। ಕರಮುನ ಶರಕೋದಂಡ ಕಾಂತಿತೋ। ಧರಣಿತನಯತೋ ತ್ಯಾಗರಾಜಾರ್ಚಿತ॥ಚ॥

ರಾಮ ನೀ ಸಮಾನಮೆವರು ರಾಗ: ಖರಹರಪ್ರಿಯ-ರೂಪಕತಾಳ

ರಾಮ ನೀ ಸಮಾನಮೆವರು ರಘುವಂಶೋದ್ಧಾರಕ॥ಪ॥ ಭಾಮಾ ಮರುವಂಪು ಮೊಲಕ ಭಕ್ತಿಯನು ಪಂಜರಪು ಚಿಲುಕ॥ಅ.ಪ॥ ಪಲುಕು ಪಲುಕುಲಕು ತೇನೆ-ಯೋಲುಕು ಮಾಟಲಾಡು ಸೋದರುಲಗಲ ಹರಿ ತ್ಯಾಗರಾಜ ಕುಲವಿಭೂಷ ಮೃದು ಸುಭಾಷ॥ಚರಣ॥

ಸುಜನಜೀವನ ರಾಮ ರಾಗ: ಕಾಮಾಚ್-ಆದಿತಾಳ

ಸುಜನಜೀವನ ರಾಮ ಸುಗುಣಭೂಷಣ ರಾಮ॥ಪ॥ ಭುಜಗ ಭೂಷಣಾರ್ಚಿತ ಬುಧಜನಾವನಾತ್ಮಜವಂದಿತ ಶ್ರಿತಚಂದ ದಶತುರಂಗ ಮಾಮವ॥ಅ.ಪ॥ ಚಾರುನೇತ್ರ ಶ್ರೀಕಳತ್ರ ಶ್ರೀರಮ್ಯಗಾತ್ರ। ತಾರಕನಾಮ ಸುಚರಿತ್ರ ದಶರಥ ಪುತ್ರ ತಾರಕಾಧಿಪಾವನ ಧರ್ಮಪಾಲಕ ತಾರಯ ರಘುವರ ನಿರ್ಮಲ ತ್ಯಾಗರಾಜಸನ್ನುತ ॥ಚರಣ॥

ರಾಮಚಂದ್ರಂ ಭಾವಯಾಮಿ ರಾಗ: ವಸಂತ-ರೂಪಕತಾಳ

ರಾಮಚಂದ್ರಂ ಭಾವಯಾಮಿ ರಘುಕುಲ ತಿಲಕಮುಪೇಂದ್ರಂ॥ಪ॥ ಭೂಮಿಜಾನಾಯಕಂ ಭುಕ್ತಿ ಮುಕ್ತಿದಾಯಕಂ ನಾಮಕೀರ್ತನ ತಾರಕಂ ನರವರಂ ಗತಮಾಯಿಕಂ॥ಅ.ಪ॥ ಸಾಕೇತ ನಗರೇನಿವಸಂತಂ ಸಾಮ್ರಾಜ್ಯಪ್ರದ ಹನುಮಂತಂ ರಾಕೇಂದುವದನಂ ಭಗವಂತಂ ರಮಣೀಯ ಕಲ್ಯಾಣ ಗುಣವಂತಂ ಕಾಕುಸ್ಥಂ ಧೀಮಂತಂ ಕಮಲಾಕ್ಷಂ ಶ್ರೀಮಂತಂ ನಾಕೇಶನುತಮನಂತಂ ನರಗುರುಗುಹವಿ ಹರಂತಂ॥ಚರಣ॥

ಮಾಮವ ಪಟ್ಟಾಭಿರಾಮ ರಾಗ: ಮಣಿರಂಗು-ಮಿಶ್ರಛಾಪುತಾಳ

ಮಾಮವ ಪಟ್ಟಾಭಿರಾಮ ಜಯಮಾರುತಿ ಸನ್ನುತ ನಾಮ ರಾಮ॥ಪ॥ ಕೋಮಲತರ ಪಲ್ಲವಪದ ಕೋದಂಡರಾಮ ಘನಶ್ಯಾಮಲ ವಿಗ್ರಹಾಬ್ಜನಯನ ಸಂಪೂರ್ಣಕಾಮ ರಘುರಾಮ ಕಲ್ಯಾಣರಾಮ ರಾಮ॥ಅ.ಪ.॥ ಛತ್ರ ಚಾಮರ ಕರಧೃತ ಭರತ ಲಕ್ಷ್ಮಣ ಶತ್ರುಘ್ನ ವಿಭೀಷಣ ಸುಗ್ರೀವ ಪ್ರಮುಖಾದಿ ಸೇವಿತ ಅತ್ರಿ ವಸಿಷ್ಠಾದ್ಯನುಗ್ರಹಪಾತ್ರ ದಶರಥಪುತ್ರ ಮಣಿರಂಗ ವಲ್ಯಾಲಂಕೃತ ನವರತ್ನ ಮಂಟಪೇ ವಿಚಿತ್ರ ಮಣಿಮಯ ಸಿಂಹಾಸನೆ ಸೀತಯಾ ಸಹಸಂಸ್ಥಿತ। ಸುಚರಿತ್ರ ಪರಮ ಪವಿತ್ರ, ಗುರುಗುಹ ಮಿತ್ರ ಪಂಕಜಮಿತ್ರ ವಂಶ ಸುಧಾಂಬುಧಿಚಂದ್ರ, ಮೇದಿನೀಪಾಲ ರಾಮಚಂದ್ರ॥ಚ॥

ಭಜೋರೇ ಭಯ್ಯಾ (ಹಿಂದಿ) ರಾಗ: ಶಿವರಂಜನಿ-ಆದಿತಾಳ

ಭಜೋರೇ ಭಯ್ಯಾ ರಾಮ ಗೋವಿಂದ ಹರಿ॥ಪ॥ ಜಪ ತಪ ಸಾಧನ ಕಛು ನಹಿ ಲಾಗತ। ಖರಚತ ನಹಿ ಗಠರೀ॥1॥ ಸಂತತಿ ಸಂಪತ್ ಸುಖಕೇ ಕಾರಣ ಜಾಸೇ ಭೂಲಪರೀ॥2॥ ಕಹತ ಕಬೀರ ಜಾಮುಖ ರಾಮ ನವೋ ಮುಖ ಧೂಲ್ ಭರೀ॥3॥

ಶ್ರೀರಾಮಚಂದ್ರ ಕೃಪಾಳು ಭಜಮನ (ಹಿಂದಿ) ರಾಗ: ಯಮನ್‌ಕಲ್ಯಾಣಿ

ಶ್ರೀ ರಾಮಚಂದ್ರ ಕೃಪಾಳು ಭಜಮನ ಹರಣ ಭವಭಯದಾರುಣಂ। ನವಕಂಜಲೋಚನ ಕಂಜಮುಖ ಕರಕಂಜ ಪದಸಂಚಾರುಣಂ॥ ಕಂದರ್ಪ ಅಗಣಿತ ಅಮಿತ ಛವಿ ನವನೀಲನೀರಜ ಸುಂದರಂ। ಪಟಪೀತ ಮಾನಹು ತಡಿತ ರುಚಿ ಶುಚಿ ನೌಮಿ ಜನಕ ಸುತಾವರಂ॥1॥ ಭಜ ದೀನಬಂಧು ದಿನೇಶ ದಾನವ ದೈತ್ಯವಂಶನಿಖಂಡನಂ ರಘುನಂದ

ಆನಂದಕಂದ ಕೋಸಲಚಂದ ದಶರಥ ನಂದನಂ।। ಶಿರಮುಕುಟ ಕುಂಡಲ ತಿಲಕ ಚಾರು ಉದಾರ ಅಂಗವಿಭೂಷಣಂ। ಆಜಾನುಭುಜ ಶರಚಾಪಧರ ಸಂಗ್ರಾಮಜಿತಖರದೂಷಣಂ।।2।। ಇತಿ ವದತ ತುಲಸೀದಾಸ ಶಂಕರ ಶೇಷಮುನಿಮನರಂಜನಂ। ಮಮ ಹೃದಯ ಕಂಜ ನಿವಾಸಕುರು ಕಾಮಾದಿಖಲಧಲ ಕಂಜನಂ।।3।।

ಕೃಪಾಲು ರಾಮನ ಭಜಿಸು (ಮೇಲಿನ ಕೃತಿಯ ಕನ್ನಡಭಾವಾನುವಾದ) ರಾಗ: ಯಮನ್‌ಕಲ್ಯಾಣಿ

ಕೃಪಾಲು ರಾಮನ ಭಜಿಸು ಮನವೆ। ಹರಿಪ ಭವಭಯ ದಾರುಣ।।ಪ।। ನವಕಂಜಲೋಚನ ಕಮಲಮುಖಕರ। ಕಮಲ ಸುಂದರ ಕಂಜಾರುಣ।।ಅ.ಪ।। ಅಸಂಖ್ಯ ಮದನರ ಅಮಿತ ಲಾವಣ್ಯ। ನವನೀಲ ನೀರಜ ಸುಂದರ। ಮಿಂಚಿನಂದದಿ ಹೊಳೆವ ಪೀತಾಂಬರ ಸ್ತುತಿಸಿ ನಮಿಪೆ ಜನಕ ಸುತಾವರ।।1।। ದೈತ್ಯವಂಶ ಸಂಹಾರ ಮಾಡಿದ। ದೀನಬಂಧುವ ಭಜಿಸುನೀ। ರಘುವಂಶ ರಂಜನ ದಿನೇಶವಂದ್ಯನ। ದೇದೀಪ್ಯ ದಶರಥನಂದನ।।2।। ಶಿರಮುಕುಟ ಕುಂಡಲ ತಿಲಕಸುಂದರ। ವಿಶಾಲಾಂಗ ವಿಭೂಷಿತ। ಆಜಾನುಬಾಹು ಕೋದಂಡ ಧರಿಸಿಹ। ಖರದೂಷಣಾದಿಯ ಗೆದ್ದವ।।3।। ಇಂತು ಹೇಳುವ ತುಲಸೀದಾಸ ಶಿವಶೇಷಮುನಿಮನ ರಂಜಿಪ। ಕಾಮಾದಿ ಅರಿಗಳ ನಾಶಮಾಡಿ। ವಾಸಮಾಡೆನ್ನ ಹೃತ್ಕಮಲದಿ।।4।।

ಓ ರಾಮ ನೀ ನಾಮ ರಾಗ: ಪೂರ್ವಿಕಲ್ಯಾಣಿ-ಏಕತಾಳ

ಓ ರಾಮ ನೀ ನಾಮ ಏಮಿ ರುಚಿರಾ। ಓ ರಾಮಯ್ಯಾ ನೀ ನಾಮಮೆಂತ ರುಚಿರ।।ಪ।। ಕರಿರಾಜ ಪ್ರಹ್ಲಾದ ಧರಣಿ ವಿಭೀಷಣುಲ ಗಾಚಿನ ನೀನಾಮಮೆಂತ ರುಚಿರ।।1।। ಕದಳೀ ಖರ್ಜೂರಾದಿ ಫಲಮೂಲ ಅಧಿಕಮ್ಮೈನ ನೀನಾಮಮೆಂತ ರುಚಿರ।।2।। ನವರಸಮುಲಕನ್ನ ನವನೀತಮುಲಕಂಟೆ ಅಧಿಕಮ್ಮೈನ ನೀನಾಮಮೆಂತ ರುಚಿರ।।3।। ಪನಸ ಜಂಬೂದ್ರಾಕ್ಷ ಫಲಮುಲಕಂಟೆ ಅಧಿಕಮ್ಮೈನ ನೀ ನಾಮಮೆಂತ ರುಚಿರ।।4।। ಅಂಜನಾತನಯ ಹೃತ್ಕಂಜತಲಮುಲಂದು ರಂಜಿಲ್ಲು ನೀ ನಾಮ ಮೆಂತ ರುಚಿರ।।5।। ಸದಾಶಿವುಡು ಸದಾ ಭಜಿಂಚೆ ಸದಾನಂದಮ್ಮೈನ ನಾಮಮೆಂತ ರುಚಿರ।।6।। ಅರೆಯ ಭದ್ರಾಚಲ ಶ್ರೀರಾಮದಾಸುನಿ ಏಲಿನ ನೀನಾಮಮೆಂತ ರುಚಿರ।।7।।

ಪಲುಕೆ ಬಂಗಾರಮಾಯನಾ ರಾಗ: ಆನಂದಭೈರವಿ-ಆದಿತಾಳ

ಪಲುಕೆ ಬಂಗಾರಮಾಯನಾ ಕೋದಂಡಪಾಣಿ।।ಪ।। ಪಲುಕೇ ಬಂಗಾರಮಾಯೇ ಪಿಲುಚಿನ ಪಲುಕವೇಮಿ। ಕಲಲೋ ನೀ ನಾಮಸ್ಮರಣ ಮರವನು ಚಕ್ಕನಿ ತಂಡ್ರಿ।।1।। ಇರವೂಗಾ ನಿಸುಲೋನ ಪೊರಲಿನನುಡುತ ಭಕ್ತಿಕಿ ಕರುಣಿಂಚಿ ಬ್ರೋಚಿತಿವನಿ ನೆರನಮ್ಮಿತಿನಿ ತಂಡ್ರಿ।।2।। ಎಂತವೇಡಿನ ನೀಕಿಂತೈನ ದಯರಾದು ಪಂಥಮು ಸೇಯ ನೇನೆಂತಟಿವಾಡನು ತಂಡ್ರಿ।।3।। ಶರಣಾಗತ ತ್ರಾಣ ಬಿರುದಾಂಕುಡವು ಗಾದ ಕರುಣಿಂಚು ಭದ್ರಾಚಲರಾಮದಾಸ ಪರಿಪಾಲ।।4।।

ಬದುಕು ಬಂಗಾರವಾಯಿತು (ಮೇಲಿನ ಕೃತಿಯ ಕನ್ನಡಭಾವಾನುವಾದ) ರಾಗ: ಆನಂದಭೈರವಿ

ಬದುಕು ಬಂಗಾರವಾಯಿತು ಶ್ರೀ ರಾಮಚಂದ್ರ। ಬದುಕು ಬಂಗಾರವಾಯಿತು।।ಪ।। ಬದುಕು ಬಂಗಾರವಾಗಿ ಭಾಗ್ಯವು ಎನ್ನದಾಗಿ। ಭಗವಂತನ ಸ್ಮರಣೆ ಅನುಗಾಲ ಸಿಕ್ಕಿತು ಎನಗೆ।।1।। ಹರಿಯ ಸ್ಮರಣೆ ನಿರುತ ಹರಿಯ ಧ್ಯಾನವು ಸತತ। ಹರಿಯ ಕೊಂಡಾಡುತ ನಲಿವ ಕಾಲವು ಬಂತು।।2।। ಮನಸು ಹಗುರವಾಗಿ ಮನವು ಪಕ್ವವು ಆಗಿ। ದಿವ್ಯಾನುಭವ ಹೊಂದಿ ಜನ್ಮ ಸಾರ್ಥಕವಾಯಿತು।।3।। ಆಶಾಪಾಶವು ತೊಲಗಿ ಏಕಾತ್ಮ ರೂಪವಾಗಿ। ಆನಂದದಿಂದ ಬಾಳ್ವ ಚೈತನ್ಯ ದಾಸನು।।4।।

ಓಂ ರಾಮಂ ಶ್ಯಾಮಾಭಿರಾಮಂ ರಾಗ: ಕಲ್ಯಾಣಿ

ಓಂ ರಾಮಂ ಶ್ಯಾಮಾಭಿರಾಮಂ ರವಿಶಶಿ ನಯನಂ। ಕೋಟಿ ಸೂರ್ಯ ಪ್ರಕಾಶಂ ದಿವ್ಯಂ ದಿವ್ಯಾಸ್ತ್ರಪಾಣಿಂ ಶರಮುಖ ಶರಧಿಂ ಚಾರು ಕೋದಂಡ ಹಸ್ತಂ। ಭೀಮಂಭೀಮಾಟ್ಟ ಹಾಸಂ ಸಕಲ ಭಯಹರಂ ರಾಮಚಂದ್ರಂ ಭಜೇಹಂ।।

### ಸುಗ್ರೀವ ಮಿತ್ರಂ ಪರಮಂ (ಶ್ರೀರಾಮಾಷ್ಟಕಂ)

ಸುಗ್ರೀವ ಮಿತ್ರಂ ಪರಮಂ ಪವಿತ್ರಂ। ಸೀತಾಕಲತ್ರಂ ನವಮೇಘಗಾತ್ರಂ। ಕಾರುಣ್ಯ ಪಾತ್ರಂ ಶತಪತ್ರ ನೇತ್ರಂ। ಶ್ರೀರಾಮಚಂದ್ರಂ ಸತತಂ ನಮಾಮಿ॥ ಸಂಸಾರಸಾರಂ ನಿಗಮಪ್ರಚಾರಂ। ಧರ್ಮಾವತಾರಂ ಹೃತಭೂಮಿಭಾರಂ। ಸದಾವಿಕಾರಂ ಸುಖಸಿಂಧು ಸಾರಂ। ಶ್ರೀರಾಚಂದ್ರಂ ಸತತಂ ನಮಾಮಿ॥ ಲಕ್ಷ್ಮೀ ನಿವಾಸಂ ಜಗತಾಂ ನಿವಾಸಂ। ಲಂಕಾವಿನಾಶಂ ಭುವನಪ್ರಕಾಶಂ। ಭೂದೇವವಾಸಂ ಶರದಿಂದು ಹಾಸಂ। ಶ್ರೀರಾಮಚಂದ್ರಂ ಸತತಂ ನಮಾಮಿ॥ ಮಂದಾರ ಮೂಲಂ ವಚನೇರಸಾಲಂ। ಗುಣೈರ್ವಿಶಾಲಂ ಹತಸಪ್ತತಾಲಂ। ಕ್ರವ್ಯಾದಕಾಲಂ ಸುರಲೋಕಪಾಲಂ ಶ್ರೀರಾಮಚಂದ್ರಂ ಸತತಂ ನಮಾಮಿ॥ ವೇದಾಂತಗಾನಂ ಸಕಲೈಸ್ಸಮಾನಂ। ಹೃತಾರಿಮಾನಂ ತ್ರಿದಶಪ್ರದಾನಂ। ಗಜೇಂದ್ರಯಾನಂ ವಿಗತಾವಸಾನಂ। ಶ್ರೀರಾಮಚಂದ್ರಂ ಸತತಂ ನಮಾಮಿ॥ ಶ್ಯಾಮಾಭಿರಾಮಂ ನಯನಾಭಿರಾಮಂ। ಗುಣಾಭಿರಾಮಂ ವಚನಾಭಿರಾಮಂ। ವಿಶ್ವಪ್ರಣಾಮಂ ಕೃತಭಕ್ತಕಾಮಂ। ಶ್ರೀರಾಮಚಂದ್ರ ಸತತಂ ನಮಾಮಿ॥ ಲೀಲಾಶರೀರಂ ರಣರಂಗಧೀರಂ। ವಿಶ್ವೈಕಸಾರಂ ರಘುವಂಶಹಾರಂ। ಗಂಭೀರನಾದಂ ಜಿತಸರ್ವವಾದಂ। ಶ್ರೀರಾಮಚಂದ್ರಂ ಸತತಂ ನಮಾಮಿ॥ ಖಲೇಕೃತಾತಂ ಸ್ವಜನೇ ವಿನೀತಂ। ಸಾಮೋಪಗೀತಂ ಮನಸಾ ಪ್ರತೀತಂ। ರಾಗೇಣಗೀತಂ ವಚನಾದತೀತಂ। ಶ್ರೀರಾಮಚಂದ್ರಂ ಸತತಂ ನಮಾಮಿ॥ ಶ್ರೀರಾಮಚಂದ್ರಸ್ಯ ವರಾಷ್ಟಕಂ ತ್ವಾಂ ಮಯೇರಿತಂ ದೇವಿ ಮನೋವಿಶುದ್ಧಯೇ। ಪಠಂತಿ ಶೃಣ್ವಂತಿ ಗೃಣಂತಿ ಭಕ್ತ್ಯಾ। ತೇಸ್ವೀಯಕಾಮಾನ್ ಪ್ರಲಭನ್ತಿ ನಿತ್ಯಂ॥

### ಇಕ್ಷ್ವಾಕು ಕುಲತಿಲಕ ಯಿಕನ್ನೈನ

ಇಕ್ಷ್ವಾಕು ಕುಲತಿಲಕ ಯಿಕನ್ನೈನ ಪಲುಕವೆ ರಾಮಚಂದ್ರಾ। ನನ್ನು ರಕ್ಷಿಂಪು ಮಿಕ ನೋ ರಘುಕುಲತಿಲಕ ಶ್ರೀರಾಮಚಂದ್ರಾ॥1॥ ಚುಟ್ಟು ಪ್ರಾಕಾರಮುಲು ಸೋಂಪುತೋ ಗಟ್ಟಿಸ್ತಿ ರಾಮಚಂದ್ರಾ। ಪ್ರಾಕಾರಾನಿಕ ಪಟ್ಟೆ ಪದಿವೇಲವರಹಾಲು ರಾಮಚಂದ್ರ॥2॥ ಗೋಪುರಮಂಟಪಾಲ್ ಕುದುರುಗಗಟ್ಟಿಸ್ತಿ ರಾಮಚಂದ್ರ। ನನ್ನು ಗ್ರೋತ್ತಗ ಜೂಡಕ ಯಿತ್ತರಿಬ್ರೋ ವುಮು ರಾಮಚಂದ್ರ॥3॥ ಭರತುನುಕು ಜೇಯಿಸ್ತಿ ಪಚ್ಚಲಪತಕಮು ರಾಮಚಂದ್ರಾ। ಪದಕಾನಿಕಿ ಬಟ್ಟೆ ಪದಿವೇಲವರಹಾಲು ರಾಮಚಂದ್ರಾ॥4॥ ಶತ್ರುಘ್ನುನಕು ನೇನು ಜೇಯಿಸ್ತಿ ಮೊಲತ್ರಾಡು ರಾಮಚಂದ್ರಾ। ಮೊಲತ್ರಾಟಕಿ ಬಟ್ಟೆ ಮೊಹರೀಲು ಪದಿವೇಲು ರಾಮಚಂದ್ರಾ॥5॥ ಲಕ್ಷ್ಮಣುನಕು ವೇಸ್ತಿ ಮುತ್ಯಾಲಪದಕಮು ರಾಮಚಂದ್ರಾ। ಪದಕಾನಿಕಿಪಟ್ಟೆ ಪದಿವೇಲವರಹಾಲು ರಾಮಚಂದ್ರ॥6॥ ಸೀತಮ್ಮಕು ಜೇಯಿಸ್ತಿ ಚಿಂತಾಕುಪತಮು ರಾಮಚಂದ್ರಾ। ಪತಕಾನಿಕಿ ಬಟ್ಟೆ ಪದಿವೇಲವರಹಾಲು ರಾಮಚಂದ್ರಾ॥7॥ ವಾಹನಮುಲು ಮೀಕು ವರುಸತೊ ಜೇಯಿಸ್ತಿ ರಾಮಚಂದ್ರಾ। ಜಗನ್ಮೋಹನ ಸಂಕೆಳ್ಳು ವೇಸಿರಿ ಕಾಳ್ಳಕು ರಾಮಚಂದ್ರಾ॥8॥ ಕಲಿಕಿತುರಾಯಿ ನೀಕು ಪೊಲುಪುಗ ಜೇಯಿಸ್ತಿ ರಾಮಚಂದ್ರಾ। ಕುಲುಕುಚು ದಿರಿಗೆದ ಎವರಬ್ಬ ಸೊಮ್ಮನಿ ರಾಮಚಂದ್ರಾ॥9॥ ಮೀತಂಡ್ರಿ ದಶರಥ ಮಹಾರಾಜು ಪೆಟ್ಟೆನಾ ರಾಮಚಂದ್ರಾ। ಲೇಕ ಮೀ ಮಾಮ ಜನಕಮಹಾರಾಜು ಪಂಪೆನಾ ರಾಮಚಂದ್ರಾ॥10॥ ಅಬ್ಬ ತಿಟ್ಟಿತಿನನಿ ಆಯಾಸಬಡವದ್ದು ರಾಮಚಂದ್ರಾ। ದೆಬ್ಬಲಕೋರ್ವಕ ಅಬ್ಬ ತಿಟ್ಟಿತಿ ನಯ್ಯ ರಾಮಚಂದ್ರಾ॥11॥ ಏಟಿಕಿ ಜಲ್ಲಿ ನ ನೀಳ್ಳಾಯೆ ನಾ ಬ್ರತುಕು ರಾಮಚಂದ್ರಾ। ನೇನು ಅಧಮುನಿಕಂಟೆನು ಅನ್ಯಾಯಮೈತಿನಿ ರಾಮಚಂದ್ರಾ॥12॥ ಸಕಾರುಪೈಕಮು ತೃಣಮುಗ ನೆಂಚುಮೀ ರಾಮಚಂದ್ರಾ। ಈ ದೆಪ್ಪರಮುನ ಗಾಚಿ ಯಪ್ಪುದೀರ್ಚುಮಯ್ಯ ರಾಮಚಂದ್ರಾ॥13॥ ಕೌಸಲ್ಯಾಪುತ್ರ ದಶರಥತನಯ ಶ್ರೀರಾಮಚಂದ್ರಾ ಕಾವು। ಕ್ಷೇಮಮುನ ಭದ್ರಾದ್ರಿಲೋ ನೆಲಕೊನ್ನ ಶ್ರೀರಾಮಚಂದ್ರಾ॥14॥ ಭಕ್ತುಲಂದರಿನಿ ಪರಿಪಾಲಿಂಚೆಂಡಿ ರಾಮಚಂದ್ರಾ ನೀವು। ಕ್ಷೇಮಮುಗ ಶ್ರೀರಾಮದಾಸುನಿ ನೇಲುಮು ರಾಮ॥15॥

### ಜಾನಕೀಪತಿಯ ನಾಮ — ರಾಗ: ನಾಟ

ಜಾನಕೀಪತಿಯ ನಾಮ। ಜಾವ ಜಾವಕೆ ಪಾಡೋ॥ಪ॥ ಜನುಮ ಜನುಮದ ಪಾಪ ಹಾರಿಹೋಗ್ವುದು ನೋಡು॥ಅ.ಪ॥ ಮಾಸ ಪ್ರಥಮದ ನಾಲ್ಕೈದರಲ್ಲಿ। ಮೂರುಮೇಲ್ನಾಕರ ತಾರೆಯಲಿ। ಮೂರೊಂದಧಿಪತಿಯ

ಅರಮನೆಯಲ್ಲಿ। ಮಾರಮಣ ತಾ ಅವತರಿಸಿದನಿಲ್ಲಿ॥1॥ ಜನಕನ ಮಾತಿಗೆ ಅಡವಿಗೆ ಪೋದ। ಜಡವಾಗಿದ್ದವರ ಕೃಪೆಮಾಡಿ ಸಲಹಿದ। ಜನಕನ ಸುತೆಯಳ ವಿರಹದಿ ನೊಂದ। ಭೂಜಾತೆಯ ಅರಸಲು ಕಪಿವರಗ್ಹೇಳಿದ॥2॥ ತರಣಿಯ ಪ್ರಾರ್ಥಿಸಿ ಶರವನ್ನೇ ಬಿಟ್ಟು। ತುಡುಗನ ಪ್ರಾಣವ ತೆಗೆದು ಅವನ। ತಮ್ಮಗೆ ಅರಸನ ಪಟ್ಟವ ಕಟ್ಟಿದ ತರುಣಿ ವರದ ನಮ್ಮ ಶ್ಯಾಮಸುಂದರ ರಾಮ॥3॥

ಸರಯೂ ತೀರವಿರಾಜಂ — ರಾಗ: ಬೃಂದಾವನಸಾರಂಗ

ಸರಯೂ ತೀರವಿರಾಜಂ। ಭಜಮನ। ರಾಮಚಂದ್ರ ರಘುವೀರಂ ಭಜಮನ॥ಪ॥ ಕೌಸಲ್ಯಾಸುತ। ದಶರಥತನಯಾ। ಕಾಕುತ್ಸಂ। ಕರುಣಾರಸಪೂರ್ಣಂ। ಜಾನಕಿ ಜೀವನ ರಾಮಂ। ಭಜಮನ॥1॥ ವಿಶ್ವಮಿತ್ರರ್ಜಿತ ಸಕಲಾಸ್ತ್ರಂ। ಯಜ್ಞವಿಘ್ನರಾಕ್ಷಸಹಂತಾರಂ। ಮಾರುತಿ ಹೃದಯ ನಿವಾಸಂ ಭಜಮನ॥2॥ ಲಕ್ಷ್ಮಣ ಭರತ ಶತ್ರುಘ್ನಸಮೇತಂ। ಭಕ್ತವತ್ಸಲಂ ಭೂಪತಿ ವಿಠಲಂ। ಜಯಜಯಜಯ ರಘುವೀರ ಸಮರ್ಥಂ॥3॥

ಆರತಿ ಶ್ರೀರಘುರಾಮರ ಪಾದಕೆ — ರಾಗ: ಆನಂದಭೈರವಿ

ಆರತಿ ಶ್ರೀರಘುರಾಮರ ಪಾದಕೆ। ಇನಕುಲ ಕೀರುತಿ ಬೆಳಗಿದ ಪಾದಕೆ॥ಪ॥ ದಶರಥ ನಂದನ ಶ್ರೀರಘುರಾಮಗೆ। ಕೌಸಲ್ಯ ಸುತನಿಗೆ ಬೆಳಗುವೆ ಆರತಿ। ಸೀತಾರಮಣಗೆ ಭಕ್ತಿಯ ಆರುತಿ। ಭರತಾಗ್ರಜಗೇ ಮಂಗಳಾರತಿ॥1॥ ಅಹಲ್ಯೋದ್ಧಾರಕ ರಾಮಗೆ ಆರತಿ। ಹನುಮತ್ಸೇವಿತ ಸ್ವಾಮಿಗೆ ಆರತಿ। ರಾಕ್ಷಸಮರ್ದನ ದೇವಗೆ ಆರತಿ। ಅಯೋಧ್ಯಾರಾಮಗೆ ಮಂಗಳ ಆರತಿ॥2॥ ರಘುಕುಲೋತ್ತಮ ರಾಮಗೆ ಆರತಿ। ಪುರುಷೋತ್ತಮಗೆ ಬೆಳಗುವೆ ಆರತಿ। ಆತ್ಮಾರಾಮಗೆ ಭಕುತಿಯ ಆರತಿ। ಜಾನಕಿ ಪ್ರಿಯನಿಗೆ ಮಂಗಳ ಆರತಿ॥3॥ ಕಾಂಚನ ಹರಿಣಿ ಹರಣಗೆ ಆರತಿ। ಭರತ ವಂದಿತನಿಗೆ ಬೆಳಗುವೆ ಆರತಿ। ಕನಕಾಂಬರಧರ ಸ್ವಾಮಿಗೆ ಆರತಿ। ರಾವಣ ಹರಣಗೆ ಮಂಗಳ ಆರತಿ॥4॥

ರಾಮ ಮಂಗಲಂ ತ್ರಿಜಗದ್ಧಾಮ ಮಂಗಲಂ — ರಾಗ: ಶಂಕರಾಭರಣ

ರಾಮ ಮಂಗಲಂ ತ್ರಿಜಗದ್ಧಾಮ ಮಂಗಲಂ॥ರಾಮ॥ ಕಾಮಿತಪ್ರದ ಭಕ್ತಹೃದಯಾ ರಾಮ ಮಂಗಲಂ॥ಜಯ ಜಯ॥ ಆದ್ಯ ಮಂಗಲಂ ತ್ರಿಜಗಾರಾಧ್ಯ ಮಂಗಲಂ॥ರಾಮ॥ ಬೋಧ್ಯ ಬೋಧಕ ರೂಪಕಾತ್ಮ ರಾಮ ಮಂಗಲಂ॥ಜಯ ಜಯ॥1॥ ಶಾಂತಿ ಮಂಗಲಂ ಬ್ರಹ್ಮಸುಕಾಂತಿ ಮಂಗಲಂ॥ರಾಮ॥ ಶಾಂತಿ ಸೀತಾ ಕಾಂತ ರಾಮ ಬ್ರಹ್ಮ ಮಂಗಲಂ॥ಜಯ ಜಯ॥2॥ ರಂಗ ಮಂಗಲಂ ದುರಿತ ವಿಭಂಗ ಮಂಗಲಂ॥ರಾಮ॥ ಕಂಗಳಾಗ್ರ ಪ್ರದೀಪ್ತ ನೀಲ ಜ್ಯೋತಿ ಮಂಗಲಂ॥ ಜಯ ಜಯ॥3॥ ರಾಮ ಮಂಗಲಂ ಶ್ರೀಗುರು ರಂಗ ಮಂಗಲಂ॥ರಾಮ॥ ರಾಮತತ್ವಾಮೃತ ರಸಾಯನ ಪೂರ್ಣ ಮಂಗಲಂ॥ಆತ್ಮಾ॥ ರಾಮ ತತ್ವಾಮೃತ ರಸಾಯನ ಪೂರ್ಣ ಮಂಗಲಂ॥ಜಯ ಜಯ॥4॥

ಮಂಗಳಂ ರಾಮಗೆ ಮಂಗಳಂ — ರಾಗ: ಸುರುಟಿ

ಮಂಗಳಂ ರಾಮಗೆ ಮಂಗಳಂ ಶ್ಯಾಮಗೇ ಮಂಗಳಂ ಸೀತಾಕಾಂತನಿಗೇ॥ಪ॥ ಚರಣಂಗುಷ್ಟದಿ ಹರನ ಧನುವನು। ಮುರಿದು ಸಿರಿಯ ತಂದಾತನಿಗೆ। ಪರಶುವ ಗೆಲಿದು ಕರುಣವ ತೋರಿ ಕರೆದು ವರವನಿತ್ತಾತನಿಗೇ॥1॥ ತಂದೆಯ ನೋಡಲು ಬಂದ ಮಗನನ್ನು। ಕಂದಾರಣ್ಯಕ್ಕೆ ಪೋಗೆನಲು। ತಂದೆಯ ಮಾತನು ವರವೆಂದು ಪಾಲಿಸಿ ಒಂದೇ ಮನಸಿನಿಂ ಪೊರಟಾತಗೇ॥2॥ ಜಾನಕಿ ಕೇಳಲು ಕನಕದ ಮೃಗವನು। ಭಾನುಕುಲೇಶ ತಾ ತರಲ್ ಪೋಗೇ। ಚಿನ್ಮಯನರಸಿಯ ವನದೊಳು ವಂಚಿಸಿ। ಜನಕ ತನುಜೆಯ ಕಾಣದೆ ಚಿಂತಿಸಿದ॥3॥ ಗಂಗಾ ನದಿಯನು ರಂಗನು ದಾಟಲು। ಪೊಂಗೊಳಲೂದುತ ಗುಹನಿಂದ। ತಿಂಗಳ ಚೆಲುವಿಗೆ ಪುಂಗ ಭರತನಿಗೆ। ಬಂಗಾರದ್ಪಾವಿಗೆ ನಿತ್ತಾತಗೇ॥4॥ ಸೀತಾಕಾಂತನು ವಾತಾತ್ಮಜನು ಸೀತೆಯ ಕಾಣದೇ ಹುಡಿಕಿದನು। ಸೀತೆಯ ಗುರುತನು ಆತನು ಕಾಣದೆ। ಪ್ರೀತಿಯಿಂ ಕೇಳಿ ಕೊಂಡಾಡಿದಗೇ॥5॥ ಶೂಲಪಾಣಿಯ ಸುಖನು ವಾಲಿಯ ಅನುಜಗೆ ಬಾಲೆರಮೆಯನುಕೊಡಿಸಿದಗೇ।

ವಾಲಿಯ ಕೊಲ್ಲುತ ಆಲಯ ರವಿಜಗೆ। ಲೀಲೆಯಿಂ ಪಟ್ಟವ ಕಟ್ಟಿದಗೇ।।6।। ಕಟ್ಟಲು ಸೇತುವೆ ಬೆಟ್ಟವ ತರಿಸಲು ಪಟ್ಟವ ಕಟ್ಟಿ ವಿಭೀಷಣಗೆ। ಮಟ್ಟದಿಂ ಸೇತುವೆ ಕಟ್ಟಿ ಶರಧಿಗೆ। ನೆಟ್ಟಗೆ ಪೊರಟ ಶ್ರೀರಾಮನಿಗೇ।।7।। ಶಶಿಮುಖಿ ಸೀತೆಗೆ ಕುಶಲವರುದಿಸಲು। ಕುಶಲವ ಕೇಳುತ ಮೆರೆದವಗೆ। ದಾಸ ಜನರುಗಳ ಆಸಯ ತೀರಿಸಿ। ವಾಸ ಅಣುಗ ಒಳ್ಳೆ ಶ್ರೀರಾಮನಿಗೆ।।8।।



## ಸಂಕ್ಷಿಪ್ತರಾಮಾಯಣಗಳು

### ಪೂರ್ವಂ ರಾಮ

ಪೂರ್ವಂ ರಾಮ ತಪೋವನಾನಿಗಮನಂ ಹತ್ವಾ ಮೃಗಃ ಕಾಂಚನಂ। ವೈದೇಹೀ ಹರಣಂ ಜಟಾಯು ಮರಣಂ ಸುಗ್ರೀವ ಸಂಭಾಷಣಂ। ವಾಲಿನಿಗ್ರಹಣಂ ಸಮುದ್ರತರಣಂ ಲಂಕಾಪುರೀ ದಹನಂ। ಪಶ್ಚಾದ್ರಾವಣ ಕುಂಭಕರ್ಣ ಮಥನಂ ಏತದ್ಧಿ ರಾಮಾಯಣಂ।।

### ಅಯೋಧ್ಯೆಯ ರಾಜ (ಸ್ವರ-ರಾಮಾಯಣ)

ಅಯೋಧ್ಯೆಯ ರಾಜ ದಶರಥ। ಆತನ ಮಗನೇ ಶ್ರೀರಾಮಚಂದ್ರ। ಇವನ ಹೆಂಡತಿ ಸೀತಾಮಾತೆ। ಈಕೆ ಜನಕರಾಜನ ಮಗಳು। ಉತ್ತಮ ಆದರ್ಶ ಇವರ ಜೀವನ। ಊರಿನಲ್ಲಿ ಪ್ರತಿಯೊಬ್ಬರಿಗೂ ಇವರನ್ನು ಕಂಡರೆ ಪ್ರೀತಿ। ಋಷಿಗಳಿಗೆ ಈ ದಶರಥನ ಊರು ತಪೋಭೂಮಿಯಾಗಿತ್ತು। ಎಲ್ಲರೂ ರಾಮ ಸೀತೆಯರನ್ನು ತುಂಬು ಗೌರವದಿಂದ ಕಾಣುತ್ತಿದ್ದರು। ಏಕಾ ಏಕಿ ಅಡಚಣೆಯೊಂದು ಬಂತು। ಐಕ್ಯತೆ ಒಡೆಯಿತು। ಒಂದೇ ಮಾತಿನಿಂದ ರಾಮನನ್ನು ಕಾಡಿಗೆ ಅಟ್ಟಿ ಭರತನಿಗೆ ಪಟ್ಟಕಟ್ಟುವಂತೆ ಕೈಕೆ ಹಠ ಹಿಡಿದಳು। ಓ ರಾಮ ಎಂದು ದಶರಥ ಕೈಕೇ ಮಾತು ಕೇಳಿ ಪ್ರಾಣ ಬಿಟ್ಟ। ಔದಾರ್ಯ ಭರತ ಕಾಡಿನಲ್ಲಿ ರಾಮನ ಕಂಡು ಆತನ ಪಾದುಕೆಯನ್ನು ಹೊತ್ತು ತಂದ। ಅಂಜಲಿ ಬದ್ಧನಾಗಿ ಶ್ರೀರಾಮ ಪಾದುಕೆಗೇ ಪಟ್ಟಕಟ್ಟಿ ಭರತ ರಾಜ್ಯ ನಡೆಸಿದ। ಅಃ ಅದೆಂಥಹ ಸೋದರ ಪ್ರೇಮ ಭರತನದು।।

### ಅಯೋಧ್ಯೆ ಅರಸನು (ಅಕ್ಷರ ರಾಮಾಯಣ)

ಅ- ಅಯೋಧ್ಯೆ ಅರಸನು ದಶರಥನೆಂಬುವನು। ಆ- ಆತ್ಮಜರಾಗಲಿಯೆಂಬುವ ಆಸೆಯೊಳು। ಇ- ಇಷ್ಟಿಯ ಮಾಡಿದನುತ್ತಮರೀತಿಯೊಳು। ಈ- ಈಶ್ವರ ಕೃಪೆಯಿಂದ ದೊರೆಕಿತು ಪಾಯಸವು। ಉ- ಉದಾತ್ತನಿತ್ತನು ಮೂವರು ಸತಿಯರಿಗೆ। ಊ- ಊಟವ ಮಾಡಲು ಪಡೆದರು ನಾಲ್ವರನು। ಋ- ಋಷಿವರ ವಿಶ್ವಾಮಿತ್ರರು ಬೇಡಿದರು। ೠ- ೠಕ್ಷಜನರನು ಶಿಕ್ಷಿಸಲೆಂದು। ಎ- ಎಸುಗೆಯೊಳಂಜದೆ ರಾಮನ ಕಳುಹೆಂದು। ಏ- ಏಳಿಗೆ ಹೊಂದಲು ಹೊರಟನು ಲಕ್ಷ್ಮಣನು। ಐ- ಐತಂದಾಶ್ರಮಕೆ ಇಷ್ಟಿಯ ಕಾಪಾಡಿ। ಒ- ಒಮ್ಮೆಲೆ ಜನಕನ ಪುರವನು ಸೇರಿದನು। ಓ- ಓಲಗದೊಳು ರಾಮನು ಶಿವಧನುಸನುಮುರಿದು। ಔ- ಔತ್ಸುಕ್ಯವನು ಸಭೆಯೊಳು ಹೆಚ್ಚಿಸಿದ। ಅಂ- ಅಂಬಾ ಸನಿಹದೊಲಾದುವು ಮದುವೆಗಳು। ಅಃ- ಅಃ ಶ್ರೀರಾಮನ ವಿವಾಹದ ವೈಭವವೂ। ಕ- ಕಟು ವರಗಳ ಪೂರೈಸಲು ಕೈಕೇಯಿಯ। ಖ- ಖತಿಗೊಳ್ಳದೆ ಲಕ್ಷ್ಮಣ ಸೀತೆಯರೊಡನೆ। ಗ- ಗಮನ ಮಾಡಿದಾ ರಾಮನು ಕಾನನಕೆ। ಘ- ಘಟಸಂಭವನಿತ್ತನು ಹರಿಚಾಪವನು। ಙ- ಙ ಙ ಎನ್ನುವ ಪ್ರಾಣಿಗಳೊಡನಾಡಿದನು। ಚ- ಚಳಿಗಾಳಿಗಳೆಲ್ಲವ ಸಹಿಸುತಲಿ। ಛ- ಛವಿಗುಂದದೆ ಕಾಲವ ಕಳೆಯುತಲಿ। ಜ- ಜಯರಾಘವ ಎನ್ನುತ ಭರತನು ಬಂದು। ಝ- ಝಗಝಗಿಸುವ ಪಾದಕೆಗಳ ತೊಡಿಸಿದನು। ಞ- ಜ್ಞಾನಿವರೇಣ್ಯನು ಭರತನನಪ್ಪಿದನು। ಟ- ಟವುಳಿಯನಾಡೆನು ರಾಜ್ಯವನೀಯುವೆನು। ಠ- ಠಕ್ಕೆಯ ಹಾರಿಸುವೆನು, ಎನೆ ರಾಮನು ಖಂಡಿಸಿದ। ಡ- ಡಗೆಯಳಿಯಲು ಪಾದುಕೆಗಳ ಕೈಕೊಂಡು। ಢ- ಢಕ್ಕೆಯ ಬಾರಿಸುತ್ತೈದಿದನಾ ಭರತ। ಣ- ಣಣಣಣ ಶಬ್ದವು ಎಲ್ಲೆಡೆ ಕೇಳಿಸಿತು। ತ- ತರುಣಿಯ ಮಾತರನು ಲೆಕ್ಕಿಸಿ ರಾಘವನು। ಥ- ಥಳಥಳಿಸುವ ಜಿಂಕೆಯ

ಹಿಂದೋಡಿದನು। ದ- ದನಿಯ ಕೇಳುತೆ ಲಕ್ಷ್ಮಣ ತೆರಳಿದನು। ಧ- ಧನ್ವಿಗಳಾಶ್ರಮವನು ಸೇರುವ ಮೊದಲೆ। ನ- ನಲ್ಲೆಯನಪಹರಿಸಿದ್ದನು ರಾವಣನು। ಪ- ಪತ್ನಿಯನಪಹರಿಸಿದನೈ ರಾವಣನು। ಫ- ಫಲ ಹೊಂದಲು ಸುಗ್ರೀವನ ಮೊರೆ ಹೋಗೆ। ಬ- ಬಲಿಷ್ಠನನು ಕಳೆದು ಜಟಾಯುವಿಗೆ। ಭ- ಭವಬಾಧೆಯನು ತಪ್ಪಿಸಿದನು ರಾಘವನು। ಮ- ಮರ್ಕಟವೀರನ ಮೈತ್ರಿಯ ಬೆಳಸಿದನು। ಯ- ಯಮಪುರಿಗಟ್ಟಿದ ರಾಮನು ವಾಲಿಯನು। ರ- ರಮಣಿಯ ವಾರ್ತೆಯ ತಂದನು ಮಾರುತಿಯು। ಲ- ಲವಣಾಂಬುಧಿಗೈತಂದರು ವಾನರರು। ವ-ವತ್ಸಲನಾಶ್ರಯವಿತ್ತನು ವಿಭೀಷಣಗೆ। ಶ- ಶರಧಿಯ ದಾಟತೆ ಯುದ್ಧವ ನಡೆಸಿದರು। ಷ- ಷಡ್ಗುಣಸಹಿತನು ರಾವಣನನು ಕೊಂದು। ಸ- ಸತಿಯೊಡಗೂಡಿ ಅಯೋಧ್ಯೆಗೆ ತೆರಳಿದನು। ಹ- ಹನುಮನು ಭರತಗೆ ವಷಯವ ತಿಳುಹಿದನು। ಳ(ಲ)- ಲಕ್ಷ್ಮೀವಲ್ಲಭನಿಳೆಯನು ಆಳಿದನು। ಕ್ಷ- ಕ್ಷಮಾಭರಿತನೆಲ್ಲರ ಕಾಪಾಡಿದನು। ಶ್ರೀರಾಮನು ಎಲ್ಲರ ಕಾಪಾಡಿದನು। "ಅಕ್ಷರರಾಮಾಯಣಂ ಸಂಪೂರ್ಣಂ"

ಸಾರ ಸುವರ್ಣ ಮಂಟಪದ

ಸಾರ ಸುವರ್ಣ ಮಂಟಪದ ಮಧ್ಯದಲ್ಲಿ ಸಾರಸಾಕ್ಷಿಯರು ಕೂಡಿ। ಸಾರಮುತ್ತಿನ ಹಸೆಮಣೆಯನ್ನಾಸುತ ಪೂರ್ವಾಚಾರವೆಲ್ಲವನು ಮಾಡಿ। ನಾರಾಯಣಾಂಶ ಸಂಭೂತನಾಗೆ ಸೆದಿರ್ಪ ಧೀರರಾಘವನ ನೋಡಿ॥ಶೋಭಾನೆ॥ ಮೂರುಲೋಕದಿ ನಿನಗೆಣೆ ಯಾರೆನ್ನು ತೋರಂತೆ ಗುಣವ ಪಾಡಿ। ಚಾರುಕಿರೀಟ ಕೇಯೂರ ಕುಂಡಲ ಮಣಿಹಾರ ಗಳಾಂತಿಹ ಶ್ರೀರಘುರಾಮನೆ ಬಾರೆಂದು ಹಸೆಗೆ ಕರೆವರು॥ಶೋಭಾನೆ॥ ಪ್ರಥುವಿಯ ಭಾರವನಿಳುಹ ಲೋಸುಗ ದಶರಥನುದರದಿ ಜನಿಸಿ। ಕೃತುವ ಪಾಲಿಸಿ ಮಿಥಿಲಾನಗರದಿ ಪಶುಪತಿಯ ಚಾಪವ ಜಯಿಸಿದ॥ಶೋಭಾನೆ॥ ರತಿಶತಸಮ ಸುಂದರಾಂಗಿಯಾಗೆಸೆದಿರ್ಪ ಸತಿ ಸೀತೆಯನೆ ಒಲಿಸಿ ಪಥದಿ ಭಾರ್ಗವನ ಗೆಲ್ಲುತ। ನಿಜಪಟ್ಟಣಕತಿಹಿತದಲಿ ಗಮಿಸಿ॥ಶೋಭಾನೆ॥ ಪಿತನ ನೇಮವನಾಂತು ಸತಿ ಸಹಜಾತನ ಜತೆಯಿಂದ ವಿಪಿನಕೆ ಗತಿಸಿದ ರಾಮನ ಶತಪತ್ರಾಕ್ಷಿಯರು ಕರೆವರು॥ಶೋಭಾನೆ॥ ಇರುತ ದಂಡಕವೆಂಬ ವರವಿಪಿನದಿ ಲಂಕೇಶ್ವರನ ಸೋದರಿ ಬರಲೂ ತರಿದು ಆಕೆಯ ನಾಸಿಕವ ಪಂಚವಟಿಗೈದಿ ಹರುಷದಿ ನೆಲೆಸಿರಲೂ ॥ಶೋಭಾನೆ॥ ದುರುಳ ಮಾರೀಚ ಪೊನ್ಮೃಗವಾಗಿ ಸುಳಿಯಲು ಶರಚಾಪ ಪಿಡಿದೊಯ್ಯಲು ತರುಣಿ ಜಾನಕಿ ಪೇಳ್ದ ಬಿರುನುಡಿಯನು ಕೇಳುತಿರದೆ ಲಕ್ಷ್ಮಣ ಪೋಗಲೂ॥ಶೋಭಾನೆ॥ ಧರಣಿಜಾತೆಯ ದಶಶಿರನು ಕದ್ದೊಯ್ಯುದ ಅರುಣ ಕುಮಾರ ನಿಂದರಿತ ಶ್ರೀರಾಮನ ತರುಣಿಯರು ಹಸೆಗೆ ಕರೆವರು ॥ಶೋಭಾನೆ॥ ಮುಂದೆ ಪಂಪಾಸರಸಿಯ ತಡಿಯಲಿ ವಾಯುನಂದನನನು ಕಾಣುತ ಚಂದ ದಿಂದಾತನ ಪೆಗಲನೇರುತಲಿ ಕಿಷ್ಕಿಂಧ ಪರ್ವತಕ್ಕೈದುತ॥ಶೋಭಾನೆ॥ ದುಂದುಭಿ ರಟ್ಟೆಯ ಒಡೆದು ತಾಳಾವೃಕ್ಷದಿಂದವನ ಛೇದಿಸುತ। ಇಂದ್ರನಂದನನ ಸಂಹರಿಸಿ ತದ್ರಾಜ್ಯವ ನಂದಭಾನು ಜಗೀಯುತ॥ಶೋಭಾನೆ॥ ಗಂಧವನಾತ್ಮಜನಿಂದ ಜಾನಕಿ ಇರುವಂದವನರಿತ ಮಹೇಂದ್ರನಾಗಿಹ ರಾಮಚಂದ್ರಮನ ಹಸೆಗೆ ಕರೆವರು॥ಶೋಭಾನೆ॥ ಜಲಧಿಗೆ ಸೇತುವೆ ಕಟ್ಟುತ್ತ ಲಂಕೆಗೆ ಬಲಿಮುಖರೊಡನೆ ಹಾಯ್ದು ಬಲವೈರಿ ಸುತಜಾತನಿಂದ ರಾವಣನೊಳು ಕಲಹವನೆ ಗೈಯ್ದು ಅಳುಕದೆ ಸಕಲ ರಕ್ಕಸರನ್ನೆಲ್ಲರ ದಶಗಳನನು ಯುದ್ಧದಲಿ ಕೊಂದು ನಲಿವಿನಿಂದಾ ದೊರೆತನವ ವಿಭೀಷಣಗೊಲಿದು ಪಾಲಿಸುತಲಂದು॥ಶೋಭಾನೆ॥ ಲಲನ ಸೋದರ ಕಪಿಬಲ ಸಹ ಸಾಕೇತ ನಿಲಯಕೆ ತೆರಳಿದ ಚೆಲುವ ಶ್ರೀರಾಮನ ಲಲನೆಯರು ಹಸೆಗೆ ಕರೆವರು॥ ಶೋಭಾನೆ॥

ಅಯೋಧ್ಯ ಪುರವಂತೆ ರಾಗ: ಕಲ್ಯಾಣಿ

ಅಯೋಧ್ಯ ಪುರವಂತೆ। ಅಲ್ಲಿ ದಶರಥ ಭೂಪನಂತೆ। ಅಲ್ಲಿ ದಶರಥ ಭೂಪನಂತೆ। ಪುತ್ರರಿಲ್ಲದೆ ಬಹಳ ಚಿಂತೆಯಲಿ ಪುತ್ರ ಕಾಮೇಷ್ಠಿಯ ಮಾಡಿದನಂತೆ॥1॥ ಯಾಗ ಮಾಡಿದನಂತೆ। ಶ್ರೀಹರಿಯು ತೃಪ್ತನಾದನಂತೆ। ಪುತ್ರರು ನಾಲ್ವರು ಜನಿಸಿದರಂತೆ। ರಾಮ, ಲಕ್ಷ್ಮಣ, ಭರತ, ಶತ್ರುಘ್ನರಂತೆ॥2॥ ಮಿಥಿಲಾ ಪುರವಂತೆ ಅಲ್ಲಿ ಜನಕ ಭೂಪನಂತೆ। ಪುತ್ರಿಸೀತಾಂಗನೆ ಎಂಬುವಳಂತೆ ಸ್ವಯಂವರವಂತೆ। ರಾಮ ಪೋದನಂತೆ॥3॥ ಹರನ ಧನುವಂತೆ ರಾಮ ಧನುವನೆತ್ತಿದಂನತೆ। ಸೀತಾಂಗನೆ ಮಾಲೆ ಹಾಕಿದಳಂತೆ। ಅಯೋಧ್ಯ ಪಟ್ಟಣಕೆ ತೆರಳಿ ಪೋದನಂತೆ॥4॥ ಪರ್ಣ

ಶಾಲೆಯಂತೆ ನಾನಾ ವರ್ಣದ ಮೃಗವಂತೆ। ನಾನಾ ವರ್ಣದ ಮೃಗವಂತೆ। ತರುಣಿ ಸೀತಾಂಗನೆ ಬಯಸಿದಳಂತೆ। ಸುವರ್ಣದ ಮೃಗವ ಬೆನ್ನಟ್ಟಿ ಪೋದನಂತೆ ।।5।। ಲಕ್ಷ್ಮಣ ಅಲ್ಲಿಂದಹೋಗಲು ತಕ್ಷಣ ಕಳ್ಳ ಬಂದ। ಕಳ್ಳನು ಕದ್ದೊಯ್ಯಲು ಕಮಲಾಕ್ಷ ಪೋದನಂತೆ। ಕಾಂತೆಯನರಸುತ್ತ ಪೋದನಂತೆ।।6।। ಅಂಜನ ಸುತ ಬಂದ ಹರಿ ಪಾದಪಂಕಜ ಕ್ಕೆರಗಿ ನಿಂದ। ಮಂದರ ಗಮನೆಯ ಅರಸಿ ತಾರೆಂದು। ಅಂಜನ ಮೂರುತಿ ಅಂಜದೆ ಪೋದನಂತೆ।।7।। ಅಂಜುವರನೆ ಕೊಂದು। ಉಂಗುರವನೆ ಕೊಂಡು। ತರುಣಿ ಸೀತೆಗೆ ತೋರಿ। ಭರದಿ ಲಂಕಾಪುರಕ್ಕೆ ಹೋಗಿ ಚೂಡಾಮಣಿಯ ತಂದು ಹರಿಗೆ ಸಮರ್ಪಿಸಿ। ಹರುಷದಲಿ ಹರಂತೆ।।8।। ಸೇತುವೆಯನೆ ಕಟ್ಟಿ ಕಳ್ಳ ಕುಲನಾಥರ ಮುರಿದಟ್ಟಿ। ಸೀತೆಯ ಸಹಿತಾ ಮೋಹನ ವಿಠಲಾ ಭರದಿ ಅಯೋಧ್ಯೆಗೆ ತೆರಳಿದನಂತೆ।।9।। ಸಪ್ತ ಋಷಿಗಳಂತೆ। ರಾಮಗೆ ಪಟ್ಟಾಭೀಷೇಕ ವಂತೆ। ವಿಶ್ವಾಮಿತ್ರ ಅಗಸ್ತ್ಯ ಋಷಿಗಳಂತೆ। ಪಟ್ಟಾಭಿಷೇಕವ ಮಾಡಿದರಂತೆ।।10।।

ಶ್ರೀ ರಾಮ ನಾಮವನು ನುಡಿ ಮನವೆ

ಶ್ರೀ ರಾಮ ನಾಮವನು ನುಡಿ ಮನವೆ। ಸುಮ್ಮನಿರಲು ಸುಖವೇ।। ಸೋಮಮೌಳಿ ಸತಿಗೆ ಪೇಳಿದ। ರಾಮ ರಾಮ ರಾಮ ನೆಂಬುವ।।ಪ।। ದೇವ ದೇವನಾಗಿ ಜಗಕೆ। ಸೇವಿಸುವರ ಪೊರೆಯುವುದಕೆ। ಭೂವರಂಗೆ ದಶರಥಂಗೆ। ಕುವರನೆನಿಸಿ ಮುದವನಿತ್ತ ಶ್ರೀ।।1।। ಜನಕರಾಜ ಪುರಕೆ ನಡೆದು। ಘನ ಮಹೇಶನ ಧನುವ ಮುರಿದು। ಜನಕ ಸುತೆಯ ಕರವ ಪಿಡಿದು। ಮುನಿಪರಶುರಾಮನ ಗೆಲ್ದಶ್ರೀ।।2।। ಜನಕ ನಾಜ್ಞೆಯಿಂದ ಸಾರಿ। ವನಕೆ ಸೀತೆಯೊಡನೆ ಸೇರಿ। ವಿನಯ ಸಂಪದವನ್ನು ತೋರಿ। ಮುನಿಜನರನು ಪೊರೆದ ಪಾವನ।।3।। ಗೋತ್ರದೊಳ್ ಪವಿತ್ರನೆಂದು। ಸ್ತೋತ್ರಪಾತ್ರನಾಗಿ ಬಂದು। ಚಿತ್ರಕೂಟದಲ್ಲಿ ನಿಂದು। ಭ್ರಾತೃಗಿತ್ತ ಪಾದುಕಾಶ್ರಯ ।।4।। ಪಂಚವಟಿಯ ಸೇರಿ ಸಖಿಯ। ವಂಚಿಸಿದಳಾಕಾಮ ಮುಖಿಯ ಹೊಂಚಿದಂಡಿಸಿ ಶೂರ್ಪನಖಿಯ। ಕಾಂಚನಾಂಗಮೃಗವ ಮೆಟ್ಟಿದ।।5।। ನೀಲವೇಣಿ ಹರಣದಿಂದ। ಗೋಳಿಡಾಜಟಾಯುವಿಂದ। ಕೇಳಲಾಗ ಕಥೆಯ ಬಂದ। ವಾಲಿ ಪುರಕೆವೀರನಾರಘು।। ಮಾಡಿ ವಾಲಿವಧೆಯ ಬೇಗ। ಕೂಡಿದಾ ಸುಗ್ರೀವನಾಗ। ರೂಢಿಸುತ್ತ ಕಪಿಗಳಾಗ। ನೋಡಿ ವಾಯು ಸುತನ ಮೆಚ್ಚಿದ।।7।। ದಾಸರಾಂಜನೇಯಗರುಹಿ। ಭೂಸುತೆಯ ಬಳಿಗೆ ಕಳುಹಿ। ಆ ಸಮುದ್ರವನ್ನೇ ನಿಲುಹಿ। ವಾಸಿಯಿಂದ ಲಂಕೆಗೈದ ಶ್ರೀ।।8।। ರಾವಣಾದಿಗಳನು ಮಥಿಸಿ। ಆವಿಭೀಷಣನಿಗೆ ಹರಸಿ। ಪಾವನೇಯ ಸ್ವೀಕರಿಸಿ। ಭಾವಿಸಿದನು ಭರತ ಭಕ್ತಿಲಿ।।9।। ಕಿಂಕರಾಳಿಗಿತ್ತು ವರವ। ಬಿಂಕದಿಂದ ಸೇರಿಪುರವ। ಪಂಕಜಾಕ್ಷಿ ಯೊಡನೆ ಮೆರೆವ।ವೆಂಕಟಾರ್ಯ ಬಿಡದೆ ಕಾಪಾಡುವ ।।10।।

ಭಾವಯಾಮಿ ರಘುರಾಮಂ ರಾಗ: ಸಾವೇರಿ-ರೂಪಕತಾಳ-ರಾಗಮಾಲಿಕೆ

ಭಾವಾಯಾಮಿ ರಘುರಾಮಂ ಭವ್ಯ ಸುಗುಣಾ ರಾಮಂ।।ಪ।। ಭಾವುಕ ವಿತರಣಪರಾ ಪಾಂಗ ಲೀಲಾಲಸಿತಂ।।1।।
1. ।। ಸರಿ। ಗಸರೀ ।। ಮಪ । ದಪದಾ ।। ರಿಸ। ನಿಧನಿಧ ।। ಪಮ । ಗರಿಸಧ ।। ಸರಿಮಾ।ಗರಿ ಮಪಧಾಪಮ ।।
ಪಧಸಾ । ನಿಧನಿಧ ಪಮಪದ ।। ಗರಿಸಧ । ೯ ರಿಸಧಾ ಸಧಾ ।। ಗರೀನಿ ಧ ಧಮಾ ಗರಿಸಧಾ ।।

ರಾಗ : ನಾಟಕುರಂಜಿ (ಬಾಲಕಾಂಡ) ದಿನಕರಾನ್ವಯ ತಿಲಕಂ ದಿವ್ಯೌಗಾಧಿ ಸುತಸವನಾ ವನರಚಿತ ಸುಬಾಹು ಮುಖ ವಧಂ। ಅಹಲ್ಯಾಪಾವನಂ ಅನಘ ವಿಂಷ ಚಾಪ ಭಂಗಂ ಜನಕಸುತಾ ಪ್ರಾಣೇಶಂ ಘನ ಕುಪಿತ ಭೃಗುರಾಮಂ। ಗರ್ವಹರಾಮಿತ ಸಾಕೇತಂ।। (ಭಾವಯಾಮಿ)।।2।।
2. ।। ಮಗ । ಸಾನಿಧ ।। ನಿಸ । ರಿಗಮಾ ।। ನಿಧ । ಮಾಗರಿ ।। ಗಮ । ಪಗರಿಸ ।। ನಿಧನಿಸ । ರಿಗಮನಿ ಧನಿಪಧ
।। ನಿಸನಿದ । ನಿಸರಿಗ ಮಗಸನಿ ।। ಗರಿಸಧ । ೯ ರಿಸಧಾ ಸಧಾ ।। ಗರೀನಿ । ಧಮಾ ಗರಿಸಧಾ ।।

ರಾಗ : ಧನ್ಯಾಸಿ- (ಅಯೋಧ್ಯಾಕಾಂಡ) ವಿಹತಾಭಿಷೇಕ ಮಥ ವಿಪಿನಗತ ಮಾರ್ಯವಾಚಾ ಸಹಿತ ಸೀತಾ ಸೌಮಿತ್ರೀಂ ಶಾಂತತಮ ಶೀಲಂ ಗುಹನಿಲಯಗತಂ ಚಿತ್ರಕೂಟಾಗತ ಭರತ ದತ್ತ ಮಹಿತ ರತ್ನಮಯ ಪಾದುಕಂ ಮದನ ಸುಂದರಾಂಗಂ।। (ಭಾವಯಾಮಿ)।।3।।

3. ॥ ನಿಸ । ಗಾಮಪ ॥ ಗಮ । ಪಾಸಸ ॥ ರಿಸ । ರಿನಿಸಪ ॥ ಧಪ । ಗಾರಿಸ ॥ ನೀಸಗ । ಮಪಗಾ ಮಪನಿಸ ॥ ಪಾನಿಸ । ಗರಿಸನಿ ॥ ಧಪನಿಸ ॥ ಗರಿಸಧ ।॰ ರಿಸಧಾ ಸಧಾ ॥ ಗರೀನಿ । ಧಮಾ ಗರಿಸಧಾ ॥

ರಾಗ: ಮೋಹನ (ಅರಣ್ಯಕಾಂಡ) ವಿತತ ದಂಡಕಾರಣ್ಯ ಗತವಿರಾಧ ದಳನಂ ಸುಚರಿತ ಘಟ ಜದತ್ತಾನು ಪಮಿತ ವೈಷ್ಣವಾಸ್ತ್ರಂ ಪತಂಗವರ ಜಟಾಯುನುತಂ ಪಂಚವಟೀ ವಿಹಿತವಾಸಂ ಅತಿಘೋರ ಶೂರ್ಪಣಖ ವಚನಾಗತ ಖರಾದಿ ಹರಂ॥ (ಭಾವಯಾಮಿ)॥4॥

4. ॥ ಗಾ । ॰ ಪಗರಿ ॥ ಗರಿ । ಸಧಸರಿ ॥ ಗಾ । ॰ಪಧಸ ॥ ಧಪ । ಗರಿಸರಿ ॥ ಗಪಗಗ । ರಿಸ ರಿಗರಿರಿಸಧ ॥ ಸರಿಗರಿ । ಗಪಗಪ ಧಪಧಸ ॥ ಗರಿಸಧ । ॰ ರಿಸಧಾ ಸಧಾ ॥ ಗರೀನಿ। ಧಮಾ ಗರಿಸಧಾ ॥

ರಾಗ : ಮುಖಾರಿ (ಕಿಷ್ಕಿಂದಾಕಾಂಡ) ಕನಕ ಮೃಗ ರೂಪಧರ ಖಲಮಾರೀಚ ಹರಾ ಮಿಹಸುಜನ ವಿಮತ ದಶಾಸ್ಯಂ ಹೃತ್ತ ಜನಕಜಾನ್ವೇಷಣಂ ಅನಘ ಪಂಪಾ ತೀರಸಂಗಂ ಆಂಜನೇಯ ನಭೋಮಣಿ ತನುಜ ಸಖ್ಯ ಕರಂ ವಾಲಿ ತನುದಳನ ಮೀಶಂ॥ (ಭಾವಯಾಮಿ)॥5॥

5. ॥ ಪಾ । ॰ಮಗರಿ ॥ ಸಾ । ನಿಧಸರಿ ॥ ಮಾ । ॰ಗರಿಸ ॥ ರಿಮ । ಪಮನಿಧ ॥ ಸಾಸನಿ । ಧಪ ಪಾಮಗರಿಸ ॥ ನಿಧಸರಿ । ಪಮನಿಧ ಮಪಧಸ । ಗರಿಸಧ । ॰ ರಿಸಧಾ ಸಧಾ । ಗರೀನಿ । ಧಮಾ ಗರಿಸಧಾ ॥

ರಾಗ: ಪೂರ್ವಿಕಲ್ಯಾಣಿ (ಸುಂದರಕಾಂಡ) ವಾನರೋತ್ತಮ ಸಹಿತ ವಾಯುಸೂನು ಕರಾರ್ಪಿತ ಭಾನುಶತ ಭಾಸ್ವರ ಭವ್ಯ ರತ್ನಾಂಗುಲೀಯಂ ತೇನ ಪುನರಾನೀತ ನ್ಯೂನ ಚೂಡಾಮಣಿ ದರ್ಶನಂ ಶ್ರೀನಿಧಿಂ ಉದದಿ ತೀರಂ ಶ್ರಿತ ವಿಭೀಷಣ ಮಿಳಿತಂ॥ (ಭಾವಯಾಮಿ)॥6॥

6. ॥ ಗಾ । ಮಗರಿಸ ॥ ಧಸ । ॰ ರಿಗಮ ॥ ಪಾ । ॰ ಧಪಸ ॥ ನಿಧ । ಪಮಗರಿ ॥ ಗಮಪಮ । ॰ಪ ಗಾಮರೀಗ ॥ ಸಾರಿಗ । ॰ಮ ಪಧಪಸಾನಿ ॥ ಗರಿಸಧ । ॰ ರಿಸಧಾ ಸಧಾ ॥ ಗರೀನಿ । ಧಮಾ ಗರಿಸಧಾ ॥

ರಾಗ: ಮಧ್ಯಮಾವತಿ (ಯುದ್ಧಕಾಂಡ) ಕಲಿತವರ ಸೇತುಬಂಧಂ ಖಲ ನಿಸ್ಸೀಮ ಪಿಶಿತಾಸನ ದಲನಮುರು ದಶಕಂಠ ವಿದಾರಮತಿ ಧೀರಂ ಜ್ವಲನಪೂತ ಜನಕಸುತಾ ಸಹಿತಯಾತ ಸಾಕೇತಂ ವಿಲಸಿತ ಪಟ್ಟಾಭಿಷೇಕಂ ವಿಶ್ವಪಾಲಂ ಪದ್ಮನಾಭಂ॥ (ಭಾವಯಾಮಿ)॥7॥

7. ॥ ರೀ । ಮರಿಮಪ ॥ ನೀ । ಪಮಪನಿ ॥ ಸಾ । ॰ ರಿಸನಿ ॥ ಪಪ ಮಮರಿಸ ॥ ರೀ ಪಮ । ರಿಸ ನಿಸರಿಮಪಾ ॥ ಪೂರ್ವಿಕಲ್ಯಾಣಿ ॥ ಧಪಸಾ । ನಿಧಪಮ ಗಮಗರಿ ॥ ಮುಖಾರಿ ॥ ಸಾನಿಧ । ಸರಿಮಾ ಗರಿಸರಿ ॥ ಮೋಹನ ॥ ಗಾಧಪ । ಗರಿಸರಿ ಗಪಧಸ ॥ ಧನ್ಯಾಸಿ ॥ ರೀಸಧ । ॰ಪ ಧಪಗಾರಿಸ ॥ ನಾಟಕುರಂಜಿ ॥ ನಿಸಮಗ । ಮನಿಧನಿ ಪಧನಿಸ ॥ ಸಾವೇರಿ ॥ ಗರಿಸಧ । ॰ ರಿಸಧಾ ಸಧಾ ॥ ಗರೀನಿ । ಧಮಾ ಗರಿಸಧಾ ॥ (ಭಾವಯಾಮಿ) ॥

ಕ್ಷೀರಸಾಗರದಲ್ಲಿ ಶೇಷಶಯನನಾಗಿ ರಾಗ: ಆರಭಿ

ಕ್ಷೀರಸಾಗರದಲ್ಲಿ ಶೇಷಶಯನನಾಗಿ ನಾರಾಯಣ ನೀನಿರೆ। ಕ್ರೂರ ದಶಸ್ಯನ ಬಾಧೆಯತಾಳದೆ। ವಾರಿಜೋದ್ಭವ ಸುರರೂ ದೂರ ಪೇಳಲು ಕರುಣದಿಂದಲಿ। ನಾರಿಕೌಸಲ್ಯೆ ಜಠರದೊಳು ನೀ ಸೇರಿ ಉದಿಸುತೆ। ರಾಮನಾಮದಿ ಘೋರ ತಾಟಕಿ ಕೊಲ್ಲಲು ಪೋದೆಯ॥ ರಾಮ ಎಲ್ಲಿಗೆ ಹೋದೆ ರಾಮ ಇಲ್ಲಿಗೆ ಬಾರೈ ರಾಮ ಶ್ರೀರಾಮ ರಾಮ॥ಪ॥ ಶಿಲೆಯ ನಾರಿಯಗೈದು ಶಿವನ ಬಿಲ್ಲನೆ ಮುರಿದು ವರಿಸುತೆ ವೈದೇಹಿಯ। ಛಲದಿಂದ ಕೊಡಲಿಯ ಮುನಿಯು ಪಿಡಿದು ತಾರೇ। ಬಲವನೆಲ್ಲವ ಸೆಳೆದು। ಒಲುಮೆಯಿಂದಲಿ ಜನಕನಾಜ್ಞೆಯ ಸಲಿಸಬೇಕೆಂದೆನುತ। ಅನುಜ ಲಕ್ಷ್ಮಣ ಸೀತೆಯೊಡನೆ ಭರದಿ ವಿಪಿನಕೆ ಪೋದೆಯೇನೈ॥1॥ ಮಡದಿಯ ನುಡಿಕೇಳಿ ಕನಕ ಮೃಗವತಾರೆ। ಒಡೆನೆ ನೀ ಪೋಗಲು। ಕಡು ಮೂರ್ಖ ರಾವಣ ಮಡದಿ ಜಾನಕಿಯನ್ನೇ। ಲಂಕೆಗೆ ಪಿಡಿದೊಯ್ಯಲು। ಕಡೆಗೆ ಮೃಗವನೆ ಕೊಂದು ಬಂದ। ಕಡಲಶಯನನೆ ಸತಿಯ ಕಾಣದೆ ಅರಸಿ ಅತಿ ದುಃಖದಲಿ ಮೆಲ್ಲಡಿ ಇಡುತ। ಅಡವಿಗೆ ಪೋದೆ ಏನೈ॥2॥ ಮುಂದೆ

ಜಟಾಯುವಿನಿಂದ ಸೀತೆಯ ವಾರ್ತೆ/। ಸುಂದರಾಂಗನೆ ತಿಳಿದು। ಅಂದು ಶಬರಿ ಇತ್ತ ಎಂಜಲ ಫಲವನೆ। ಪ್ರೀತಿಯಿಂದಲೆ ಸವಿದು। ಇಂದ್ರತನಯನ ಕೊಂದು ರವಿಜಗೆ ರಾಜ್ಯಭಾರವನ್ವಹಿಸಿ। ಶೀಘ್ರದಿ ಗಂಧರ್ವಾಸುತನಿಂದ ಸೀತೆಯಾ। ಕುಶಲ ತಿಳಿಯಲು ಬಯಸುತಿರುವೆಯಾ॥3॥ ಮಡದಿ ಶಿರೋರತ್ನ ಕಾಮಿತ ಹರುಷದಿ। ವರಕಪಿಗಳಂ ಕೂಡುತ। ಶರಧಿಗೆ ಸೇತುವೆ ಕಟ್ಟಿಸಿ। ಲಂಕಾಪುರದೊಳು ದಶಕಂಠನಾ। ತರಿದು ಶರಣಾಗತಗೆ ಪಟ್ಟವ ಕಟ್ಟಿ ಜಾನಕಿ ಸಹಿತಯೋಧ್ಯೆಗೆ। ತೆರಳಿ ರಾಜ್ಯವನ್ವಹಿಸಿ। ಭದ್ರಾಚಲದಿ ನಿಂದೆ ಶ್ರೀರಾಮಭದ್ರಾ॥4॥

ಶ್ರೀರಾಮಾಯಣ ಕಾವ್ಯ ಸುಧೇ ರಾಗ: ಜುಂಜೋಟಿ-ರೂಪಕತಾಳ

ಶ್ರೀರಾಮಾಯಣ ಕಾವ್ಯ ಸುಧೇ ಶಿವನ್ಹೇಳಿದ ತಾರಕ ಮಂತ್ರವಿದೇ॥ಪ॥ ಧರ್ಮವಿಶಾರದ ದಶರಥ ರಾಜ ಮಕ್ಕಳಿಲ್ಲದಾ ಮಹರಾಜ। ಮಕ್ಕಳಿಗಾಗಿ ಮಾಡಿದ ಯಾಗವ ಪಡೆದ ಪ್ರಸಾದವ ಪಾಯಸವಾ॥1॥ ಕೌಸಲ್ಯ ಕೈಕೇಯಿ ಸುಮಿತ್ರ ಪಾಯಸ ಫಲದೀ ಪಡೆದರು ತನಯರ। ರಾಮ ಭರತ ಲಕ್ಷ್ಮಣ ಶತೃಘ್ನರು ಜನಪ್ರಿಯರಾದರು ಲೋಕದೆ॥2॥ ಯಜ್ಞವ ರಕ್ಷಿಸೆ ರಾಮಸಾಹಾಯವ ಬಯಸಿದ ಮಹಋಷಿ ವಿಶ್ವಾಮಿತ್ರಾ। ತಂದೆಗೆ ವಂದಿಸಿ ತಮ್ಮನ ಜೊತೆಗೂಡಿ ರಾಮನು ಋಷಿಯಾ ಹಿನ್ನಡೆದಾ॥3॥ ತಾಟಕಿಯನು ಕೊಂದು ತಾ ಮುನ್ನೆಡೆದಾ ಧೀರವೀರ ಪುರುಷೋತ್ತಮ। ಮಾರೀಚ ಸುಬಾಹುವ ಸದೆ ಬಡೆದ ನೆಂದು ಪೊಗಳಿದರು ಪುರುಜನರು॥4॥ ಕಲ್ಲಾಗಿಯು ತಾ ರಾಮನ ನೆನೆದಾ ಅಹಲ್ಯೆಗೆ ರೂಪವ ಕರುಣಿಸಿದಾ। ಮಿಥಿಲೆಯ ಸೇರಿ ಶಿವಧನುವನೆ ಮುರಿದು ಸೀತೆಯ ವರಿಸಿದ ಶ್ರೀವರನೆನಿಸಿದ॥5॥ ಸೀತಾಪತಿ ಧರಣಿಪತಿ ಆಗುವ ಮಧುರ ವಸಂತದ ಶುಭಕಾಲಾ। ಭರತಗೆ ಪದವಿಯು ರಾಮನಿ ಗಡವಿಯು ವರವ ಬೇಡಿದಳು ಕೈಕೇಯಿ॥6॥ ಸೀತಾಲಕ್ಷ್ಮಣ ಸಮೇತ ರಾಮನು ತ್ಯಜಿಸಿದನಾಗಲೆ ಅರಮನೆಯಾ। ಪುತ್ರ ಶೋಕದಿ ದಶರಥ ಭೂಪತಿ ಆಕ್ಷಣವೆ ಸೇರಿದ ಅಮರಿಪುರಿ॥7॥ ರಾಮ ದೇವರನೆ ನಂಬಿ ಪೂಜಿಸಿದ। ಗುಹನು ಗಂಗೆಯ ದಾಟಿಸಿದ। ಚಿತ್ರಕೂಟದ ಪರ್ಣಶಾಲೆಯ ಸೀತಾರಾಮರ ಸುಖದ ನೆಲೆ॥8॥ ಭರತನ ವಾತ್ಸಲ್ಯ ರಾಮನ ಕಾಡಿಕರೆಯಿತು ಅಯೋಧ್ಯೆಯ ಅರಮನೆಗೆ॥7॥ ಆಡಿ ತಪ್ಪುವುದು ಅಪಕೃತಿಯೆಂದು ರಾಮ ಪಾದುಕೆಯ ಒಲಿದಿತ್ತು॥9॥ ರಘುರಾಮನ ಬಳಿ ಶೂರ್ಪನಖೀ ಕಡು ಮೋಹದ ಮೋಡಿಯ ಹೊಡೆ। ಖಡ್ಗತೀಡಿ ಲಕ್ಷ್ಮಣ ರಕ್ಕಸಿಯಾ ಮೂಗು ಕಿವಿಗಳಾ ಕೊಯ್ದು॥10॥ ಭೂರಿ ರಾಕ್ಷಸ ಲಂಕಾಪತಿ ಅಂಕೆಗೆ ಜಿಂಕೆಯಾದನು ಮಾರೀಚ। ಜಾನಕಿ ಬೇಡಿಕೆ ಸಲ್ಲಿಸಲು ಆ ಜಿಂಕೆಯ ಹಿಂದೋಡಿದ ರಾಮ॥11॥ ಲಕ್ಷ್ಮಣನು ಹಾ ಲಕ್ಷ್ಮಣ ಎಂಬ ಅಣ್ಣನ ಧ್ವನಿ ಕೇಳಿ ನೆರವಿಗೆ ತೆರಳಿದ। ಆಗಲೆ ಭಿಕ್ಷೆ ಬೇಡೋ ಬೈರಾಗಿಯ ವೇಷದಿ ಒಯ್ದನು ಸೀತೆಯ ರಾವಣನು॥12॥ ಅಡ್ಡಲಾದ ಆ ಪಕ್ಷಿ ಜಟಾಯುವು ರೆಕ್ಕೆಯಾಡಿಸಿ ಭೂಗತನಾದ। ಲಂಕಾಪುರದಿ ಅಶೋಕ ವನದಿ ಬಂಧಿತ ಸೀತೆಯ ಕಂಬನಿ ಕಡಲಾಯ್ತು॥13॥ ಸೀತೆಯನರಸಲು ನಾನೆರವಾಗುವೆ ವಾಲಿಯ ಕೊಲ್ಲೆಂದ ರವಿಸುತನು। ಕಿಷ್ಕಿಂಧೆಗೆ ಇನ್ನು ರಾಜನು ನೀನೆಂದು ಭಾಷೆಯ ಮಾಡಿದ ರಘುಸುತನು॥14॥ ಸಮಬಲರಾಗಿ ಸುಗ್ರೀವನು ವಾಲಿಯು ಸಮರಗೈದರು ಖಡಾಖಡಿ। ಮರದ ಮರೆಯಲಿ ನಿಂತು ಶ್ರೀರಾಮನು ವಾಲಿಯ ವಧಿಸಿದ ಭರದಿಂದ॥15॥ ವಾನರ ರಾಜ್ಯದೆ ಸುಗ್ರೀವನಾಜ್ಞೆಗೆ ಸರ್ವರ ಸಮ್ಮತ ಒಮ್ಮತವು। ಸೀತೆಯ ನೆಲೆಯನು ಕಂಡೇ ಬರಲು ವಾತಾತ್ಮಜ ಶ್ರೀ ಹನಮನೆ ಹೊರಟ॥16॥ ಸಂಭ್ರಮದಿಂದ ಅಂಬರವೇರಿ ಅಂಬುದಿ ದಾಟಿದ ಹನುಮಂತ। ರಾಮನಾಮವ ಮೆರೆಯದೆ ಜಪಿಸುವ ಸೀತೆಯ ಕಂಡನು ಮಾರುತಿಯು॥17॥ ಮುದ್ರಿಕೆಯುಂಗರ ಮಾತೆಗೆ ಅರ್ಪಿಸಿ ಚೂಡಾಮಣಿಯನು ತಾ ಪಡೆದ। ಮಾರುತಿ ಇಂದ್ರಜಿತುವಿನ ಬ್ರಹ್ಮಾಸ್ತ್ರ ಶಕ್ತಿಗೆ ಶರಣು ಶರಣೆಂದಾ॥18॥ ರಾವಣನ ಸಮ್ಮುಖಕೆ ಕರೆತಂದಾ ನೀತಿ ಬಾಹಿರ ದೂತನ ಬಾಲಕೆ ಬೆಂಕಿ ಇಡಿರೆಂದಾ॥ ಆ ಬೆಂಕಿ ಲಂಕೆಯನು ಥಾಂಕಿ ಹೌಹಾರಿ ಹನುಮಂತ ಶ್ರೀರಾಮ ಪದವೆಂದ॥19॥ ಕಪಿಗಳ ಕೂಟದೊಡನೆ ಕೂಡಿ ತೆರಳಿ ಬಂದ ದಾಶರಥಿ॥ ಕಡಲೆ ಒಡನೆ ನಡುಗುವಂತೆ ಕಟ್ಟಿಸಿದ ವಾರಿಧಿಬಂಧ॥20॥ ಅಣ್ಣ ಬಿಡು ಸೀತೆಯನು ಎಂದನಾ ವಿಭೀಷಣನು। ಕಣ್ಣು ಕಿಡಿಯ ಕಾರುತವನ ತಲೆಗೆ ಒದ್ದ ರಾವಣನು॥21॥ ರಾಮನಾಮ ನಂಬಿ ನೆನೆದ ಶರಣು ಬಂದ ವಿಭೀಷಣನು। ಪ್ರೇಮದಿಂದ ಹರಸಿ ಕರೆದು ಆಲಂಗಿಸಿ ರಘುವರನು॥22॥ ರಾಮರಾವಣರ ಸಮರದೊಳಾಗ ರಾವಣನುಳಿಸೆ ಸಂಶಯವಾಯ್ತು॥ ಜನ್ಮ ರಹಸ್ಯದ ಜಾಡನು ತಿಳಿದು ರೋಷದಿ ಬಿಟ್ಟ ರಾಮಬಾಣ॥23॥ ಹೃದಯದ ಸುಧಾ ಕಲಶವೆ ಒಡೆದು ಆಯಿತು ರಾವಣನ ಸಂಹಾರ। ಅತಿಪುನೀತೆ

ಅವನಿಜಾತೆ ಎಂದು ಘೋಷಿಸಿತು ಅಗ್ನಿಸಾಕ್ಷಿ॥24॥ ಆ ಜನರನು ಪರಿಪಾಲಿಸಲು ಅಯೋಧ್ಯೆಗೆ ಬಂದ ಸತ್ಯಸಾಕ್ಷಿ॥ ಸೀತಾರಾಮನು ಸೋದರರೊಡನೆ ಸಾಮ್ರಾಜ್ಯವಾಳಿದ ಆತ್ಮ ಸಾಕ್ಷಿ॥25॥

ಶ್ರೀವನರಾಶಿ ನಿಕೇತನ ರಾಮ

ಶ್ರೀವನರಾಶಿ ನಿಕೇತನ ರಾಮ। ಸೇವಿತ ಪದ್ಮ ನಿಕೇತನ ರಾಮ॥ ಕೌಸಲ್ಯಾ ಪ್ರಿಯ ಬಾಲಕ ರಾಮ। ಕೌಶಿಕ ಮುಖ ಪರಿಪಾಲಕ ರಾಮ॥ ಧರಣಿ ಸುತಾ ಹೃದ್ರಂಜನ ರಾಮ್। ಪರಶುರಾಮ ಮದ ಭಂಜನ ರಾಮ। ಜನಕ ದಶರಥ ಮುದಾಕರ ರಾಮ। ಜನ ಹೃದ್ವನದಿ ಸುಧಾಕರ ರಾಮ॥ ಸೀತಾ ಲಕ್ಷ್ಮ್ರಣ ಸಂಯುತ ರಾಮ। ಪೂತ ಮುನೀಶ್ವರ ಸನ್ನುತ ರಾಮ। ಘನವನವಾಸ ಪ್ರಸ್ಥಿತ ರಾಮ। ಅನಿಶ ವಿಚಿಂತಿತ ದಶರಥ ರಾಮ। ಅನುಜಾರ್ಚಿತ ನಿಜ ಪಾದುಕ ರಾಮ। ಮುನಿಸಂಕುಲ ಸಮ್ಮೋದಕ ರಾಮ॥ ವರಪಂಚವಟೀ ಮಂದಿರರಾಮ। ಖರಶೂರ್ಪಣಖ ಮದಹರರಾಮ॥ ಮಾರೀಚ ಮಹಾಸುರ ಹರ ರಾಮ। ಧೀರ ಜಟಾಯುಗತಿಪ್ರದರಾಮ॥ ಸೀತಾನ್ವೇಷಣ ಕೌತುಕ ರಾಮ। ದೈತ್ಯ ಕಬಂಧ ಚ್ಛೇದಕ ರಾಮ॥ ಜ್ಞಾನಿ ಮರುತ್ಸುತ ಸಮ್ಮತ ರಾಮ। ಮಾನಿತ ಸುಗ್ರೀವೇಷ್ವರರಾಮ॥ ನಿರುಪಮ ಕಪಿಬಲ ಸೇವಿತ ರಾಮ। ವರ ಚೂಡಾಮಣಿ ಹರ್ಷಿತ ರಾಮ॥ ಸಾಗರ ಕೇತು ನಿಬಂಧನ ರಾಮ। ರಾಘವ ರಾವಣ ಭಂಜನ ರಾಮ। ಸೀತಾಲಾಭ ಶುಭಾನ್ವಿತ ರಾಮ। ತಾತ ದಶರಥ ನಿರೀಕ್ಷಿತ ರಾಮ॥ ಭವಕಾನಂದಕ ಭವಹರ ರಾಮ। ವರರತ್ನಾಸನ ಸುರಚಿರರಾಮ। ಘನ ಪಟ್ಟಾಲಂಕೃತ ರಘುರಾಮ। ಜನನಾಥ ಕುಲಸ್ತು ಜಯರಾಮ॥ ಸತ್ಯಾನಂದ ಸುಖಾಕೃತಿ ರಾಮ। ನಿತ್ಯ ನಿರಂಜನ ಸದ್ಗತಿ ಧಾಮ॥ ಅಮರಾವಳಿ ವರ್ಷಿತ ಸುಮರಾಮ। ಸುಮ ನೋಗಣನುತ ಸುಂದರ ರಾಮ॥ ಪ್ರಕಟಿತ ದಾನವ ಶಿಕ್ಷಕ ರಾಮ। ಸಕಲ ಚರಾಚರ ರಕ್ಷಕ ರಾಮ॥ ಜಗದೇಕ ಮನೋಹರ ರಘುರಾಮ। ನಿಗಮಸ್ತುತ ಗುಣ ಭಾಸುರ ರಾಮ॥ ಮಂಗಳ ಮುಲ ಚಿದಾತ್ಮ ಕ ರಾಮ। ಮಂಗಳಮತುಳ ಶುಭಾನ್ವಿತ ರಾಮ॥ ಮಂಗಳಮನುಪಮ ಮಹಿಮಾ ರಾಮ। ಮಂಗಳಮಾಶ್ರಿತ ಸುರಕುಜ ರಾಮ॥ ಮಂಗಳಮುಜ್ವಲ ತೇಜೋಧಾಮ। ಮಂಗಳಮಾನಂದಾರ್ಣವ ರಾಮ। ಜಯ ನರಹರಿ ನುತ ಮಂಗಳ ನಾಮ। ಜಯ ನರಹರಿ ದಿವ್ಯಾಕೃತಿ ರಾಮ॥

ದಶರಥನ ಸುತನಾಗಿ

ದಶರಥನ ಸುತನಾಗಿ ಧಾರುಣಿಗೆ ಬಂದು ಕೌಶಿಕ ನಂದನನ ಯಜ್ಞವನು ಕಾಯ್ದು। ಎಸೆವ ಧನುವನು ಮುರಿದು ಶಶಿಮುಖಿಯ ತಂದು ಹರುಷದಿಂದ ಅಯೋಧ್ಯಾಪುರಕೆ ಬಂದು ರಘು ರಾಮ॥ ನಾರಿ ಜಾನಕಿ ಸಹಿತ ಬರುವ ಮಾರ್ಗದಲಿ ಭಾರ್ಗವೇಶ್ವರನ ಕಂಡು ಬಹಳ ಸಂಭ್ರಮ ದೀ। ಬಾಹುಭುಜಯುಗಳಿಂದ ಯುದ್ಧಗಳ ಮಾಡಿ ಮೂಲರೂಪವ ತೋರ್ದ ಮುದ್ದು ರಘು ರಾಮಾ॥ ಶಿಷ್ಟ ಪಾಲಕನಾದ ಹರಿಗೆ ದಶರಥನು ಪಟ್ಟವನು ಕಟ್ಟಬೇಕೆಂದು ಸಂಭ್ರಮದೊಳಿರಲು ಕೊಟ್ಟ ವರಗಳ ಬೇಡಲು ಕೈಕೇಯಿ ಬರಲು ಅಭೀಷ್ಟವನು ಸಲಿಸಿದ ದಿಟ್ಟ ರಘುರಾಮಾ॥ ಜಗಜಗಿಪ ವಸ್ತ್ರಗಳನು ತೆಗೆದಿಟ್ಟು ನಾರುವಸ್ತ್ರವನುಟ್ಟು ನಡೆದ ಸತಿಸಹಿತಾ ದೇವಿ ಗಂಗೇಯದಾಟಿ ಆ ಗುಹನ ಸಲಹಿ ಗಂಭೀರದಿಂ ಚಿತ್ರಕೂಟಕೆ ಬಂದ ರಾಮಾ॥ ಕರೆದು ಭರತನ ಕೈಗೆ ಪಾದುಕೆಯ ನ್ನಿತ್ತು ಹರುಷದಿಂ ಬಂದ ಜನಗಳನು ಬೀಳ್ಕೊಟ್ಟು। ವರ ಪಂಚವಟಿ ಎಂಬ ವನದಿ ನಿಂದು ಶರಭಂಗ ಸುತೀಕ್ಷ್ಣಣರಾ ಕಂಡ ರಘುರಾಮ॥ ದುರುಳೆ ಶೂರ್ಪನಖಿಯ ಕಿವಿ ಮೂಗ ಕೊಯ್ದು ಬರುವ ರಾಕ್ಷಸರ ಭುಜಗಳನೆ ಮುರಿದು। ಪರಮ ಸತ್ಕೀರ್ತಿಯಿಂದಲಿ ಮೆರೆದು ಖರದೂಷಣರ ಕೊಂದ ಕಲ್ಯಾಣ ರಾಮ॥ ಅಸುರ ಹೊನ್ನ ಮೃಗವಾಗಿ ಮುಂದೆ ಸುಳಿದಾಡೆ ಶಶಿಮುಖಿ ಸೀತಾಂ ಗನೆಯು ತಾ ಬೇಡೆ। ಎಸೆವ ಧನುವನೆ ಹಿಡಿದು ಅಸುರಾರಿ ನಡೆಯೆ ದಶಕಂಠ ಬಂದು ಜಾನಕಿಯ ಕದ್ದೊಯ್ದ॥ ಕೊಂದ ಮೃಗಚರ್ಮವನು ತಂದು ಶ್ರೀರಾಮಚಂದ್ರ ಇಂದುವದನೆಯನು ಕಾಣದಲೆ ಚಿಂತಿಸುತ ಅಂದು ಜಟಾಯು ಅಸುರ ಕದ್ದೊಯ್ದನೆನಲು ಶಬರಿಗಭಯವನಿತ್ತು ಕಬಂಧನನು ಕೊಂದ॥ ಅತಿ ಶೀಘ್ರದಿಂ ಋಷ್ಯಮೂಕಗಿರಿಗೆ ಬಂದು ಹನುಮ ಸುಗ್ರೀವರನು ಕಂಡು। ಒಂದು ನಿಮಿಷಕ್ಕೆ ಕಿಷ್ಕಿಂದೆಗೆ ಬಂದು ಇಂದ್ರಸುತ ವಾಲಿಯನು ಕೊಂದು ಬೇಗ ಕಂದ ಬಾರೆಂದು ಅಂಗದನ ಕೃಪೆಮಾಡೆ ಸಿಂಧುವಿನ ತಡಿಗೆ ನಡೆದು ಬಂದರಾಗ॥ ಅಬ್ಬರದಿ ಹರಿವ ಸಮುದ್ರವನೆ ಕಂಡು ಅಬ್ಜಲೋಚನ ತಾನು ಅದಕೆ ಚಿಂತಿಸುತಾ। ದರ್ಭೆ ಶಯನನು ಆಗಿ ಸ್ವಾಮಿ ಪವಡಿಸಲು ಉಕ್ಕಿ ಸಾಗರ ಬಂತು ಸಂಭ್ರಮದೀ॥ ಸೃಷ್ಟಿಯೊಳಗುಳ್ಳ ಕಪಿಗಳೆಲ್ಲರೂ ಕೂಡಿ ಕಟ್ಟಿದರು ಸೇತುವೆ ಯ ಬಹಳ ಬಿಗಿಮಾಡಿ

ದುಷ್ಟರಾವಣನ ಶಿರಗಳನೇ ಚೆಂಡಾಡಿ ಪಟ್ಟದರಸಿಯ ತಂದ ಪಟ್ಟಾಭಿ ರಾಮ।। ಎಡಬಲದಿ ಹನುಮ ಸುಗ್ರೀವ ಹಿಡಿದು ಚಾಮರ ಬೀಸೆ। ನಡುವೆ ಅಂಗದ ಕೊಡೆ ಹಿಡಿದು ನಿಂದಿರಲು ಮಡದಿ ಸಹಿತ ಪುಷ್ಪಕವೇರಿ ಸ್ವಾಮಿ ತಾ ಬಂದು ಭರತನಾ ಪ್ರಾಣವನು ಭರದಿಂದ ಕಾಯ್ದ।। ದಿಕ್ಕು ದಿಕ್ಕಿನ ರಾಯ ರಾಯರನೆ ಕರೆಸಿ ವಸಿಷ್ಠಾದಿ ಮಹಾ ಮುನಿಗಳೆಲ್ಲರನು ಕರೆಸಿ। ಅಷ್ಟ ಗಂಗಾತೀರ್ಥ ಉದುಕವನೆ ತರಿಸಿ ಇಕ್ಷ್ವಾಕು ಕುಲತಿಲಕಗೆ ಪಟ್ಟಾಭಿಷೇಕ ಗೈದರು।।

ಕೌಸಲ್ಯೆಯುದರದೀ ಶಿಶುವಾಗಿ ರಾಗ: ಶಂಕರಾಭರಣ

ಕೌಸಲ್ಯೆಯುದರದೀ। ಶಿಶುವಾಗಿ ಜನಿಸಿದೇ। ಅಸುರೆ ತಾಟಕಿಯ ಕೊಂದೇ। ರಾಮಚಂದ್ರಾ। ಋಷಿಕೌಶಿಕನ ಯಾಗವನು। ರಕ್ಷಣೆ ಗೈದು। ಮುನಿ ತರುಣಿ ಶಾಪವನು ಕಳೆದೆ। ರಾಮಚಂದ್ರಾ। ಮಿಥಿಲಾಪುರಕೆ ಪೋಗಿ। ಭಾರ್ಗವನ ಭಲ್ಲೆಯನು ಸೆಳೆದೆ। ರಾಮಚಂದ್ರ। ಸತಿಯಿಂದ ಒಡಗೂಡಿ। ಬರುತಿರಲು ಮಾರ್ಗದಲಿ। ಮೈಥಿಲಿಯ ಕರವನು ಪಿಡಿದೆ। ರಾಮಚಂದ್ರ। ಬಾರೋ ಶಾಂತರಾಮ। ಶಂಕರ ಪ್ರೇಮರಾಮಾ। ಬಾರೋ ರಘುರಾಮ। ಲಾವಣ್ಯರಾಮಾ। ಬಾರೋ ದಶರಥ ರಾಮಾ। ಜಾನಕಿರಮಣ ರಾಮಾ। ಬಾರೋ ಪಂಚಾಮೃತದ ಶುದ್ಧೋದಕವ। ಸಮರ್ಪಿಸುವೆ ನಿಮಗೆ। ಶ್ರೀರಾಮಚಂದ್ರಾ।।1।। ಜನಕನಾ ನುಡಿಕೇಳಿ ಮುನಿಯ ವೇಶವ ತಾಳಿ। ವನಕೆ ನೀ ತೆರಳಿದೆ। ರಾಮಚಂದ್ರಾ। ವನದೊಳಗೆ ಸಹಜಾತ। ಲಕ್ಷ್ಮಣ ನೊಡಗೂಡಿ।ಸೀತೆ ಸಹವಾಸಿಸಿದೆ। ರಾಮಚಂದ್ರ। ಅನುಜ ಭರತನು ಬಂದು। ಅನುನಯದಿ ಬೇಡಲೂ। ಘನಪಾದುಕೆಯನಿತ್ತೆ। ರಾಮಚಂದ್ರಾ। ಅವನಿಯೊಳು ಕಾಕಾಸುರನೆಂಬ। ಅಸುರನಾ ಅವಗುಣವನೂ। ಕ್ಷಮಿಸಿ ಪೊರೆಯಲು ಬಂದೇ। ರಾಮಚಂದ್ರಾ। ಬಾರೋ ರಘುರಾಮ। ಲಾವಣ್ಯ ರಾಮ। ಬಾರೋ ಕೌಸಲ್ಯರಾಮ। ಕೌಶಿಕ ಪ್ರೇಮ ರಾಮಾ। ಬಾರೋ ವಸ್ತ್ರಾಭರಣವನು ಸಮರ್ಪಿಸುವೆ ನಿನಗೆ। ಶ್ರೀರಾಮಚಂದ್ರಾ ।।2।। ದಶಶಿರನನುಜೆ ಶೂರ್ಪನಖಿಯ ಕಿವಿಯ ಮೂಗನು ನೀನು। ಅನುಜನಿಂದವಗೆಡಿಸಿದೇ। ರಾಮಚಂದ್ರಾ। ತ್ರಿಶಿರಾದಿ ರಕ್ಕಸರ। ಪಡೆಗಳನೆ ತರಿದು ನೀ। ಸೀತೆ ಸಹವಾಸಿಸಿದೆ। ರಾಮಚಂದ್ರಾ। ಶಶಿಮುಖೀ ಸೀತೆಯು ಬೇಡಲೂ ಮೃಗವ ತರಪೋಗೇ। ಮೃಗವ ಸಂಹರಿಸಿದೇ। ರಾಮಚಂದ್ರಾ।। ದಶಶಿರನು। ಕಪಟ ವೇಶದೊಳು। ಬಂದು। ಧರಣಿಜೆಯನಪಹರಿಸೆ। ಬಲು ನೊಂದೆಯೋ। ಶ್ರೀರಾಮಚಂದ್ರಾ।।3।। ಒಲಿದು ಜಟಾಯುವಿಗೆ। ದುರುಳ ಕಬಂಧನಾ। ಕರಗಳನು ಕಡಿದು ಬಂದೇ।। ರಾಮಚಂದ್ರಾ। ಲಲನೆ ಶಬರಿಯು। ಭಕ್ತಿಯಿಂದಿತ್ತ ಎಂಜಲನು। ಫಲವ ಸವಿಯಲಿ ಬಂದೆ। ರಾಮಚಂದ್ರಾ। ಜಲಜ ಪಂಪಾ। ಸರೋವರದ। ನೀ। ವಾಯುಪುತ್ರನ ಕಂಡೆ ರಾಮಚಂದ್ರಾ। ಎಲ್ಲರಾವಡಗೂಡಿ। ಸುಗ್ರೀವ ಸ್ನೇಹವಮಾಡಿ। ವಾಲಿಯನೆ ಸಂಹರಿಸಿದೇ। ರಾಮಚಂದ್ರಾ।।4।। ಕಿಷ್ಕಿಂಧ ರಾಜ್ಯವನು। ಸುಗ್ರೀವನಿಗೆ ವಲಿದಿತ್ತು। ಚಂದದೊಳು ಕಾಪಾಡಿದೇ। ರಾಮಚಂದ್ರಾ। ನಿಷ್ಕರುಣೆಯಾಗಿ ನೀ। ನಂಗನೆಗುಂಗುರವನೂ। ಹನುಮಂತನಿಂದ ಕಳುಹಿದೇ। ರಾಮಚಂದ್ರಾ। ಪುಷ್ಕರದ ಹರುಷದಲಿ ದೃಷ್ಟಿಕಾಪುರ ದಹಿಸಿ। ಚೂಡಾಮಣಿಯ ತರಿಸಿದೇ। ರಾಮಚಂದ್ರಾ। ಪುಷ್ಕಳಾ ಹರುಷದಿಂ ವಾನರಾ ಜತೆಗೂಡಿ। ಲಂಕೆಗೇ ತೆರಳಿದೇ ರಾಮಚಂದ್ರಾ।।5।। ಧೂಪ ದೀಪವನು। ಸಮರ್ಪಿಸುವೆ ನಿಮಗೇ। ಶ್ರೀರಾಮಚಂದ್ರಾ। ಗಂಧಪುಷ್ಪವನು ಸಮರ್ಪಿಸುವೆ ನಿಮಗೇ। "ಶರಧೀ ಸೇತುವೆ ಕಟ್ಟಿ। ದುರುಳ ರಾವಣನ ಶಿರವನೂ ಕಡಿದು ಬಂದೆ। ರಾಮಚಂದ್ರಾ।। ಧರಣಿಜೆಯು ಪಾವನೆ ಎಂದು। ದಶರಥಾ ಪಾಲಕರು ಪೇಳೆ। ಹರುಷದಿಂದ ಕರಪಿಡಿದೇ ರಾಮಚಂದ್ರಾ।।6।। ಶರಣನಾದ ವಿಭೀಷಣಗೇ। ಲಂಕಾರಾಜ್ಯವನಿತ್ತು। ಪಟ್ಟವನು ಕಟ್ಟಿದೇ ರಾಮಚಂದ್ರಾ। ಕಿರಿಯತಾಯಿಗೇ ಪಿತನು ಇತ್ತ ವರವ ಸಲಿಸುತಲಿ ಮೆರೆಯುತಾ ಅಯೋಧ್ಯೆಗೆ ಬಂದೆ। ರಾಮಚಂದ್ರಾ।। ಬಾರೋ ಶಾಂತರಾಮ। ಶಂಕರ ಪ್ರೇಮರಾಮಾ ಬಾರೋ ರಘುರಾಮ ಲಾವಣ್ಯ ರಾಮಾ। ಬಾರೋ ನೈವೇದ್ಯ ತಾಂಬೂಲವನು। ಸಮರ್ಪಿಸುವೆ ನಿಮಗೆ ಶ್ರೀರಾಮಚಂದ್ರಾ।।7।। ಕಿರಿಯ ಲಕ್ಷ್ಮಣ ಸೀತೆ। ಸಹವಾಗಿ ಮಾತೆಯರ। ಚರಣಕಭಿನಮಿಸಿದೇ ರಾಮಚಂದ್ರಾ।। ಪರಿಪರಿಯಲಿ ನಡೆದ ವೃತ್ತಾಂತಗಳನೆಲ್ಲ ಪುರಜನಕೆ ಪೇಳಿದೇ ರಾಮಚಂದ್ರಾ। ಬಾರೋ ರಘುರಾಮಾ ಲಾವಣ್ಯ ರಾಮಾ। ಬಾರೋ ಆರತಿಯನೆತ್ತಿ। ಸಾಷ್ಟಾಂಗ ಬೇಡುವೆನು ಸೃಷ್ಟಿಪಾಲ ರಾಮ ನಿಸ್ಸೀಮಾ।।8।

## ಅಮ್ಮಾ ರಾಮನ ಚರಿತೆಯ

ಅಮ್ಮಾ ರಾಮನ ಚರಿತೆಯ ಕೇಳಮ್ಮಾ ಕೇಳಮ್ಮ ತಾಯೆ ರಾಮನ ಚರಿತೇನ ಕೇಳುವ ಜನರಿಗೆ ಕಾಮಿತ ಫಲಗಳ ಕೊಡುವಂಥಾ ಕಥೆಯಾ॥ಪ॥ ಮೂಷಕವಾಹನನಂಘ್ರಿಗೆ ಎರಗಿ ಪರಮೇಶನ ಸೋದರಿ ಶಾರದೆಗ್ವಂದಿಸೀ। ಶೇಷಭೂಷಣ ಉಮಾಶಂಕರಗೊಂದಿಸೀ ವಾಸುಕಿಶಯನನ ಪೊಗಳುವೇ॥1॥ ಸೊಕ್ಕಿನಿಂದಲೇ ರಾವಣತಾನು ಸೊಕ್ಕಿ ಮೆರೆದು ಜಗವನು ಕಾಡೆ ತಕ್ಕ ಶಿಕ್ಷೆಯಾ ಮಾಡಲು ಅವನಿಗೆ ಲಕ್ಷ್ಮೀ ಸಹಿತ ಒಪ್ಪಿಸಿದಾತಾ॥2॥ ರಾಘವೋತ್ತಮನಾಗಿ ಜನಿಸೀ ಪೋಗಿ ಮುನಿಪನ ಯಾಗವ ಸಾಧಿಸಿ ನೀಗಿದನು ಅಹಲ್ಯೆಯ ಶಾಪವ ಯೋಗಮಾಯೆಯ ವರಿಸೀದಂಥಾ॥3॥ತಂದೆ ಕೊಟ್ಟ ಭಾಷೆಯ ಸಲಿಸೀ ಬಂದ ರಾಜ್ಯವ ತಾನು ತೊರೆದು, ಹಿಂದೆ ತಮ್ಮಾ ಸೀತೇ ಸಹಿತ ಮುಂದೆ ಕಾಡಿಗೆ ನಡೆದೂ ಪೋದಾ॥4॥ ಬಂದ ಭರತಗೆ ಪಾದುಕೆ ಕೊಟ್ಟು ಚಂದದಿ ಗುಹನನು ಪ್ರೀತಿಸಿ ತಾನು, ಆನಂದದಿಂ ಪಂಚವಟಿಯನು ಸೇರಿ, ಮುಂದೆ ಕಾಡಿಗೆ ನಡೆದೂ ಪೋದಾ॥5॥ ಶೂರ್ಪನಖಿಯ ರೂಪವ ಕೆಡಿಸೀ ತೂರಿ ಬಂದಾಜಿಂಕೆಯ ಕೊಂದು, ಕ್ರೂರರಾವಣ ಸೀತೆಯನೊಯ್ಯಲು ದೂ.....ರ ಹುಡುಕುತ ತಾನೂ ಬಂದಾ॥6॥ ಖರದೂಷಣ ತ್ರಿಶಿರಾದಿಗಳನೆ ಕೊಂದು ಭರದಿ ಜಟಾಯುಗೆ ಮುಕ್ತಿಯನಿತ್ತು ಶಬರೀ ಭಕ್ತಿ ಮೆಚ್ಚೀ ತಾನೂ ಭರದಿಂ ಪಂಪಾತಟಕೇ ಬಂದಾ॥7॥ ವಾನರೇಂದ್ರನ ಸ್ನೇಹವ ಬೆಳೆಸಿ ತಾನು ವಾಲಿಯನಾಗಲೆ ಕೊಂದು ನೀರೆ ಜಾನಕಿ ಹುಡುಕಲು ಅನುವಾದ ವಾನರುಗಳನೇ ಕಳಿಸೀದಂಥಾ॥8॥ ವೀರಹನುಮನು ಸಾಗರದಾಟಿ ವಾರಿಜಾಕ್ಷಿಗೆ ಮುದ್ರಿಕೆಯಿತ್ತು ಊರಸುಟ್ಟು ತಿರುಗಿ ಬಂದು ವೀರರಾಮಗೆ ಅರುಹೀದಂಥಾ॥9॥ ಕಟ್ಟಿ ಸೇತುವೆ ಸಾಗರದಾಟಿ ಕುಟಿಲ ರಣದಲೀ ದಿಟ್ಟದಿಂದಾ, ಕೆಟ್ಟ ರಾವಣ ಕುಂಭಕರ್ಣರ ಕೊಂದೂ ನೆಟ್ಟನಯೋಧ್ಯೆಗೆ ತಾನೂ ಬಂದಾ॥10॥ ಮಡದಿ ಜಾನಕಿ ಸಹಿತ ತಾನು ಪುರಕೆ ಹೊರಟು ಬಂದನು ರಾಮ ಸುರರು ಪೂಮಳೆಗರೆದರು ಆಗ ಪುರಜನ ಹರುಷವ ತಾಳಿದರಾಗ॥11॥ ಬಂದರಾಮಗೆ ಭರತನು ಆಗ ತಂದೆ ಪೀಠದಿ ಪಟ್ಟವ ಕಟ್ಟಲು ಮುಂದೆ ರಾಮನು ರಾಜ್ಯವನಾಳಿದ ಚಂದದಿಂದಲಿ ಧರ್ಮಬಿಡದೇ॥12॥ ಘನಪುರೇಶನ ಚರಿತೆಯ ಪಾಡಲು ಪರಮ ಸೌಖ್ಯವ ಪಡೆದರು ನರರು, ಕರುಣಾಕರ ಶ್ರೀಶಂಕರ ತಾನು ಕರವನು ಬಿಡದೇ ಕಾಯುವನಮ್ಮ॥13॥ ಮಂಗಳಂ ದಶರಥ ರಾಮಗೇ ಮಂಗಳಂ। ಜಾನಕಿ ರಮಣಗೆ ಜಯ ಜಯ ಮಂಗಳಂ। ಕೋದಂಡಪಾಣಿಗೆ ಜಯ ಜಯ ಮಂಗಳಂ। ಸಾಕೇತಪುರವಾಸನಿಗೇ ಜಯ ಜಯ ಮಂಗಳಂ॥14॥

## ಕಂದನೆಂದೆನಿಸಿದ ಕೌಸಲ್ಯದೇವಿಗೆ

ಕಂದನೆಂದೆನಿಸಿದ ಕೌಲಸ್ಯದೇವಿಗೆ ರಾಮ ಎನಬಾರದೆ। ಇಂದಿರಾಪತಿ ರಾಮಚಂದ್ರಗೆ ಶ್ರೀರಘುರಾಮ ಎನಬಾರದೆ॥1॥ ಶಿಶುವಾಗಿ ಅವತಾರ ಮಾಡಿದ ದಶರಥನಲಿ ರಾಮ ಎನಬಾರದೆ। ಋಷಿಯಜ್ಞ ಸಲಹಿ ರಕ್ಕಸನೆ ಕೊಂದ ಶ್ರೀರಾಮ ಎನಬಾರದೆ॥2॥ ನೀಟಾಗಿ ನೆನೆ ಭಾನುಕೋಟಿತೇಜ ಶ್ರೀರಾಮ ಎನಬಾರದೆ। ಸಾತ್ವಿಕ ದೈವವೆ ತಾಟಕಾಂತಕ ಶ್ರೀರಾಮ ಎನಬಾರದೆ॥3॥ ಪಾದನಖವು ಸೋಕಿ ಪಾಪನಾಶನವಾಗೆ ರಾಮ ಎನಬಾರದೆ। ಶ್ರೀಪತಿ ಕರುಣದಿ ಶಿಲೆಯು ಸ್ತ್ರೀಯಾಗಲು ರಾಮ ಎನಬಾರದೆ॥4॥ ಸಕಲ ಸದ್ಗುಣ ಪೋಗಿ ಮಿಥಿಲಾ ಪಟ್ಟಣದಿ ರಾಮ ಎನಬಾರದೆ। ತ್ರಿಪುರ ಸಂಹಾರ ತ್ರಿನೇತ್ರನ ಧನುವೆತ್ತಿ ರಾಮ ಎನಬಾರದೆ ॥5॥ ಚೆಲ್ವೆ ಜಾನಕಿ ಮಲ್ಲಿಗೆಯ ವನಮಾಲೆಯ ರಾಮ ಎನಬಾರದೆ। ವಲ್ಲಭಗ್ಹಾಕಲು ಫುಲ್ಲಲೋಚನೆ ಸೀತಾರಾಮ ಎನಬಾರದೆ॥6॥ ಮಂಗಳ ಮಹಿಮೆ ಸಿತಾಂಗನೆ ಕೊರಳಿಗೆ ರಾಮ ಎನಬಾರದೆ। ಮಾಂಗಲ್ಯ ಬಂಧನ ಮಾಡಿದ ಮಹಾತ್ಮನು ರಾಮ ಎನಬಾರದೆ॥7॥ ಜಗದೇಕ ಸಂದರಿ ಜಾನಕಿಯನೆ ಗೆದ್ದ ರಾಮ ಎನಬಾರದೆ। ಜಗದೀಶ ಜನಕಗೆ ಜಾಮಾತನೆನಿಸಿದ ರಾಮ ಎನಬಾರದೆ॥8॥ ಮುದ್ದು ಜಾನಕಿ ಕೂಡಿ ಅಯೋಧ್ಯಕೆ ಬರುತಿರೆ ರಾಮ ಎನಬಾರದೆ। ಮಧ್ಯಮಾರ್ಗದಿ ಬಂದಿದ್ದನು ಭಾರ್ಗವ ರಾಮಎನಬಾರದೆ॥9॥ ತನ್ನ ತಾನೇ ಗೆದ್ದು ಧನ್ಯನೆಂದೆನಿಸಿದ ರಾಮ ಎನಬಾರದೆ। ಬ್ರಹ್ಮ ಶಂಕರರಿಂದಿನ್ನು ಉತ್ತಮರಾದ ರಾಮ ಎನಬಾರದೆ॥10॥ ಪಟ್ಟಗಟ್ಟಲು ಪರಮೋತ್ಸವ ಕಾಲಕ್ಕೆ ರಾಮ ಎನಬಾರದೆ। ದುಷ್ಟ ಕೈಕೆಯ ನಿಷ್ಠೂರ್ವಚನವ ಕೇಳಿದ ರಾಮ ಎನಬಾರದೆ॥11॥ ಆ ಲುಕ್ಷುಮಿಯ ಮಾತಲಕ್ಷ್ಯವ ಮಾಡದೆ ರಾಮ ಎನಬಾರದೆ। ಲಕ್ಷ್ಮಣ ಲಕ್ಷ್ಮೀ ಕೂಡ್ವನವಾಸ ತಿರುಗಿದ ರಾಮ ಎನಬಾರದೆ॥12॥ ಸೋಸಿಲಿಂದಲಿ ಸತಿ

ಅದೇನೆಂದಸುರೆಯ ರಾಮ ಎನಬಾರದೆ। ನಾಶರಹಿತ ಕಿವಿ ನಾಸಿಕನಳಿಸಿದ ಶ್ರೀರಾಮ ಎನಬಾರದೆ॥13॥ ದಂಡಕಾರಣ್ಯದಿ ಕಂಡು ಮಾರೀಚನ್ನ ರಾಮ ಎನಬಾರದೆ॥ ಹಿಂದ್ಯೋಗೆ ರಾಘವ ಬಂದ ರಾವಣನಲ್ಲೆ ರಾಮ ಎನಬಾರದೆ॥14॥ ಘಾತಕ ರಾವಣ ಜಗನ್ಮಾತೆನೊಯ್ಯಲು ರಾಮ ಎನಬಾರದೆ। ಸೋತು ಜಟಾಯು ಯುದ್ಧವ ಮಾಡಿ ತಾ ಬೀಳಲು ರಾಮ ಎನಬಾರದೆ॥15॥ ಒಲಿದು ಸುಗ್ರೀವಗೆ ವಾಲಿ ವಧೆಯ ಮಾಡಿ ರಾಮ ಎನಬಾರದೆ। ವಾನರಗಳ ಕೂಡಿ ವಾರಿಧಿಕಟ್ಟಿದ ಶ್ರೀರಾಮ ಎನಬಾರದೆ॥16॥ ಲೋಕಮಾತೆಯ ಲಂಕಾನಾಥ ತಾ ಒಯ್ದಾಗ ರಾಮ ಎನಬಾರದೆ। ಸೀತಾಕೃತಿಯನಿಟ್ಟಶೋಕ ವನದೊಳು ರಾಮ ಎನಬಾರದೆ॥17॥ ಮಂಡೋದರಿಯ ಗಂಡನ್ನ ದಶಶಿರಗಳ ರಾಮ ಎನಬಾರದೆ। ಚೆಂಡನಾಡಿದ ಕೋದಂಡಪಾಣಿಯ ಶ್ರೀರಾಮ ಎನಬಾರದೆ॥18॥ ಪ್ರೀತಿಂದ್ವಿಭೀಷಣಗೆ ಪಟ್ಟವಗಟ್ಟಿ ರಾಮ ಎನಬಾರದೆ। ಸೀತಾ ಸಮೇತನಾಗಿ ಸಿಂಧು ದಾಟಿದ ರಾಮ ಎನಬಾರದೆ॥19॥ ಆದಿ ಲಕ್ಷ್ಮಿ ಕೂಡಿ ಪಟ್ಟವಗಟ್ಟಿ ರಾಮ ಎನಬಾರದೆ। ಶ್ರೀದೇವಿ ಸಹಿತ ಪಟ್ಟಣ ಹೊಕ್ಕ ಪಟ್ಟಾಭಿರಾಮ ಎನಬಾರದೆ॥20॥ ಭರತ ಸುಮಿತ್ರ ಗೌಸಲ್ಯಗೆ ಸುಖವಿಟ್ಟ ರಾಮ ಎನಬಾರದೆ। ಮುಕ್ತಿದಾಯಕ ಮುಂದೆ ಬೆಂಬಿಡದೆ ಕಾಪಾಡುವ ರಾಮ ಎನಬಾರದೆ॥21॥ ಪತ್ನಿ ವಾರ್ತೆಯ ತಂದ ಪವನಸುತಗೆ ಒಲಿದ ರಾಮ ಎನಬಾರದೆ। ಸತ್ಯ ಲೋಕದ ಆಧಿಪತ್ಯವ ಕೊಟ್ಟ ಶ್ರೀರಾಮ ಎನಬಾರದೆ॥22॥ ರಾಮ ರಾಮನು ಎಂದು ಕರೆಯೆ ಭಕ್ತಿಯ ನೋಡಿ ರಾಮ ಎನಬಾರದೆ॥23॥ ಅರಸಾಗಯೋಧ್ಯವನಾಳಿ ಯದುಕುಲದಲಿ ರಾಮ ಎನಬಾರದೆ। ಹರುಷದಿ ಭೀಮೇಶ ಕೃಷ್ಣನಾಗ್ಯುದಿಸಿದ ರಾಮ ಎನಬಾರದೆ॥24॥

ಕಶ್ಯಪಃ ಜಾತಃ ಶ್ರೀ (ಸಪ್ತರ್ಷಿ ಕೃತ ಶ್ರೀರಾಮಾಯಣ ಸ್ತೋತ್ರಂ□)

ಕಶ್ಯಪ: ಜಾತಃ ಶ್ರೀ ರಘುನಾಯಕೋ ದಶರಥಾನ್ ಮುನ್ನಾಶ್ರಯಾತ್ ತಾಟಕಾಂಹತ್ವಾ - ರಕ್ಷಿತ ಕೌಶಿಕ ಕ್ರತುವರಃ ಕೃತ್ವಾಪಹಲ್ಯಾಂ ಶುಭಾಂ ಭಂಕ್ತ್ವಾರುದ್ರಶರಸನಂ ಜನಕಜಾಂ ಪಾಣಿಂ ಗೃಹಿತ್ವಾ ಜಿತ್ವಾರ್ಧಾಧ್ವನಿ ಭಾರ್ಗವಂ ಪುನರಗಾತ್ ಸೀತಾ ಸಮೇತಃ ಪುರೀಂ॥1॥

ಅತ್ರಿಃ: ದಾಸ್ಯ ಮಂಥರಯಾ ದಯಾರಹಿತಯಾ। ದುರ್ಭೋದಿತಾ ಕೈಕಯೀ। ಶ್ರೀರಾಮ ಪ್ರಥಮಾಭಿಷೇಕ ಸಮಯೇ ಮಾತಾಪ್ಯಯಾ ಚದ್ವರೌ ಭರ್ತಾರಂ ಭರತಃ ಪ್ರಶಾಸ್ತು ಧರಣೀಂ ರಾಮೋವನಂ ಗಚ್ಛತಾದಿತ್ಯಾಕರ್ಣ್ಯ ಸಚೋತ್ತರಂ ನಹಿದದೌ ದುಃಖೇನ ಮೂರ್ಛಾಂಗತಾಃ॥2॥

ಭಾರದ್ವಜ: ಶ್ರೀರಾಮಃ ಪಿತೃಶಾಸನಾತ್ ವನಗಮಾತ್ ಸೌಮಿತ್ರಿ ಸೀತಾನ್ವಿತೋ। ಗಂಗಾಂ ಪ್ರಾಪ್ಯಜಟಾಂ ನಿಬಧ್ಯ ಸಗುಹಃ ಸಚಿತ್ರಕೂಟೇ ವಸನ್ ಕೃತ್ವಾ ತತ್ರ ಪಿತೃಕಿಯಾಂ ಸಭರತೋ ದತ್ವಾಭಯಂ ದಂಡಕೇ ಪ್ರಾಪ್ಯಗಸ್ತ್ಯಮುನೀಶ್ವರಂ। ತದುದಿತಂ ದತ್ವಾ ಧನುಶ್ಚಾಕ್ಷಯಂ॥3॥

ವಿಶ್ವಾಮಿತ್ರಃ: ಗತ್ವಾ ಪಂಚವಟೀಮಗಸ್ತ್ಯವಚನಾದ್ದತ್ವಾ ಭಯಂ ಮೌನಿನಾಂ ಛಿತ್ವಾ। ಶೂರ್ಪಣಖಾಸ್ಯ ಕರ್ಣಯುಗಲಂ ತ್ರಾತುಂ ಸಮಸ್ತಾನ್ಮುನೀನ್। ಹತ್ವಾತಂ ಚ ಖರಂ ಸುವರ್ಣ ಹರಿಣಂ। ಭಿತ್ವಾ ತಥಾವಾಲಿನಂ - ತಾರರತ್ನ ಮಯಂಚ ರಾಜ್ಯಂ ಕರೋತ್ ಸರ್ವಂಚ ಸುಗ್ರೀವಸಾತ್॥4॥

ಗೌತಮಃ: ದೂತೋ ದಾಶರಥೇ ಸಲೀಲ ಮುದದಿಂ ತೀರ್ಥ್ವಾ ಹನುಮಾನ್ ಮಹಾನ್। ದೃಷ್ಟ್ವಾ ಶೋಕವನೇ ಸ್ಥಿತಾಂಜನಕಜಾಂರತ್ನಾಂಗುಲೇ ರ್ಮುದ್ರಿಕಾಂ। ಅಕ್ಷಾದೀನಾ ಸುರಾನ್ನಿಹತ್ಯ ಮಹತೀಂ ಲಂಕಾಚ ದಗ್ಧಾವ ಪುನಃ ಶ್ರೀರಾಮಂಚ ಸಮೇತ್ಯದೇವ ಜನನೀಂ ದೃಷ್ಟ್ವಾ ಮಮೇತ್ಯ ಬ್ರವೀತ್॥5॥

ಜಮದಗ್ನಿ: ರಾಮೋ ಬದ್ಧ ಪಯೋನಿಧಿಃ। ಕಪಿವರೈಃ ವೀರೈಃ ನಲಾದ್ಯೈ ವೃತಃ। ಲಂಕಾಪ್ರಾಪ್ಯ- ಸಕುಂಭಕರ್ಣತನುಜಂ। ಹತ್ವಾರಣೇ ರಾವಣಂ। ತಸ್ಯಾನ್ಯಸ್ಯ ವಿಭೀಷಣೌ। ಪುನರಸೌಸೀತಾಪತಿಃ ಪುಷ್ಪಕಾರೂಢಸನ್ ಪರಮಾಗತೋ ಸ ಭರತಃ ಸಿಂಹಾಸನಸ್ಥೋ ಬಭೌ॥6॥

ವಸಿಷ್ಠ: ಶ್ರೀರಾಮೋ ಹಯಮೇಧಮುಖ್ಯ ಮಖಕೃತ್। ಸಮ್ಯಕ್ಪ್ರಜಾ ಪಾಲಯನ್ ಕೃತ್ವಾ ರಾಜ್ಯ ಮರ್ಥಾನು ಜೈಶ್ಚ ಸುಚಿರಂ। ಭೂರಿಸ್ವಧರ್ಮಾನ್ವಿತ್ ಪುತ್ರೌ ಭ್ರಾತೃ ಸುತಾನ್ವಿತೌ। ಕುಶಲವೌ ಸಂಸ್ಥಾಪ್ಯ ಭೂಮಂಡಲೇ ಸೋಯೋಧ್ಯಾ ಪುರವಾಸಿಬಿಶ್ಚ

ಸರಯೂಸ್ನಾತಃ ಪ್ರಪೇದೇ ದಿವಂ॥7॥
ಶ್ರೀರಾಮಸ್ಯ ಕಥಾ ಸುಧಾತಿ ಮಧುರಾನ್। ಶ್ಲೋಕನಿಮಾನ್ - ಸಾದರಂ - ಯೇಶೃಣ್ವಂತಿ ಪಠಂತಿ ಚ ಪ್ರತಿದಿನಂ ತೇ ಘೌಘ ಮಿಧ್ವಂಸಿನಃ ಶ್ರೀಮಂತೋ ಬ್ರಹ್ಮಪುತ್ರ ಪೌತ್ರ ಸಹಿತಾ ಭುಂಕ್ತ್ವೇಹ ಭೋಗಾಚಿರಂಭೋಗಾಂ ತೇತಃ ಸುರಾರ್ಚಿತಂ ಸುರಗಣ್ಯೈಃ ವಿಷೋರ್ಲಭಂ ತೇಪದಂ ಇತಿ ಶ್ರೀ ಸಪ್ತರ್ಷಿ ಕೃತ ಶ್ರೀರಾಮಾಯಣ ಸ್ತೋತ್ರಂ ಸಂಪೂರ್ಣಂ॥

ಲಕ್ಷ್ಮೀನಾರಾಯಣರ ಚರಣವ ರಾಗ: ಶಂಕರಾಭರಣ

ಲಕ್ಷ್ಮೀನಾರಾಯಣರ ಚರಣವ ಸ್ಮರಿಸಲು ಲಕ್ಷುಮಿ ರಮಣನು ತಾನೊಲಿವ॥ಪ॥ ಲಕ್ಷುಮಿ ರಮಣನು ಒಲಿಯುತ ಬಂದು ಮೋಕ್ಷದ ಭಾಗ್ಯವ ಕೊಡುವನು॥ಅ.ಪ॥ ಕ್ಷೀರಸಾಗರವನ್ನು ಮಥನವ ಮಾಡಲು ಶರಧಿಸುತೆ ತಾನು ಉದಿಸಿದಳು। ಶರಧಿಸುತೆ ತಾನು ಉದಿಸುತ ಬಂದು ಸುರರಿಂದ ವಂದನೆ ಪಡೆದಿಹಳು॥1॥ ಹಾರವ ಕರದಲ್ಲಿ ಪಿಡಿಯುತ್ತ ಸಿರಿದೇವಿ ಸುರರೆಲ್ಲರನು ನೋಡುತ್ತಲಿ। ಸುರರೆಲ್ಲರನು ನೋಡುತ್ತ ನಡೆದು ಸಿರಿರಮಣನ ಕೊರಳಿಗೆ ಹಾಕಿದಳು ॥2॥ದಿನಕರನ ವಂಶದಿ ಹರಿಯವತರಿಸೆ ಜಾನಕಿಯಾಗಿ ಬಂದಿಹಳು। ಜಾನಕಿಯಾಗಿ ಧರೆಯಲಿ ಬಂದು ದಿನಕರ ಕುಲಪತಿ ಸೇರಿದಳು॥3॥ ಜನಕನಾಜ್ಞೆಯ ಶಿರದಲಿ ಧರಿಸಿ ಕಾನನ ಪೋಕ್ಕನು ಶ್ರೀರಾಮ। ಕಾನನ ಪೊಕ್ಕ ರಾಮನ ಕೂಡ ಜಾನಕಿ ಬಂದಳು ವನದಲ್ಲಿ॥4॥ ಜಾನಕಿ ಮನದ ಮೃಗವನು ತಾರಲು ಇನಕುಲ ತಿಲಕ ತೆರಳಿದನು। ಇನಕುಲ ತಿಲಕ ತೆರಳಿದ ಸಮಯದಿ ದಾನವ ಬಂದು ಅಪಹರಿಸೆ॥5॥ ಅವನಿಸುತೆಯನು ಅಶೋಕವನದಲಿ ರಾವಣನಿರಿಸಿದ ಕೆಲಕಾಲ। ರಾವಣನಿರಿಸಿದ ಕಾಲದಿ ಬಂದನು ಪವನನು ಸೀತೆಯ ಕಾಣುತಲಿ॥6॥ ಭುವನಕೆ ಒಡೆಯ ರಾಮಚಂದ್ರನ ಸೇವಕ ನಾನೆಂದರುಹಿದನು। ಸೇವಕ ನಾನೆಂದು ಅರುಹಿದ ಪವನಜ ಪಾವನ ಉಂಗುರ ನೀಡಿದನು॥7॥ ಉಂಗುರವನು ಕಂಗಳಿಗೊತ್ತುತ ರಂಗನ ನೆನೆದಳು ಮನದಲ್ಲಿ। ರಂಗನ ನೆನೆಯುತ ಅಂಗನೆ ಸೀತೆಯು ಮಂಗಳವನ್ನು ಹರಸಿದಳು॥8॥ ಶಿರದಾಭರಣವ ಸಿರಿದೇವಿ ಕರುಣಿಸೆ ಕರದಲಿ ಪಿಡಿದು ಏರಿದನು। ಏರುತ ಮರಗಳ ತರಿಯುತ ವನವ ದ್ವಾರದಿ ಬಂದು ನಿಂತಿಹನು॥9॥ ದಶಮುಖ ಕಂಡನು ಕಪಿದಾಳಿಯನು ವ್ಯಸನವ ಪಟ್ಟನು ಕ್ಷಣಕಾಲ।ವ್ಯಸನವ ತಾಳುತ ಸುತನನು ಕಳುಹಲು ಹೊಸಕಿ ಹಾಕಿದನು ಹನುಮಂತ॥10॥ ಅಸುರಗೆ ಮತಿಯನು ಪೇಳಿ ಹನುಮನು ವಸುಧೆಯ ರಮಣನ ಸ್ಮರಿಸಿದನು। ವಸುಧೆಯ ರಮಣನ ಸ್ಮರಿಸುತ ಅಸುರನ ಅಸುವನು ಹುತವಹಗರ್ಪಿಸಿದ॥11॥ ಹಾರಿದ ಶರಧಿಯ ಸೇರಿ ತಾ ಹರಿಯನು ಸಾರಿದ ಸೀತೆಯ ವಾರ್ತೆಯನು। ಸಾರಿದ ವಾರ್ತೆಯ ಹನುಮನ ಹರಸುತ ಶರಧಿಯ ಬಳಿಗೆ ಹರಿ ಬಂದನು॥12॥ ಹರಿಗಳ ಕೂಡುತ ಹರಿ ತಾ ಬಂದು ಶರಧಿಗೆ ಸೇತುವೆ ಕಟ್ಟಿದರು। ಶರಧಿಗೆ ಸೇತುವೆ ಕಟ್ಟುತ ಹರಿಯು ಅರಿಯಾ ಪುರವನು ಸೇರಿದನು॥13॥ ಅರಿಯಾ ಪುರವನು ಸೇರಿದ ಶ್ರೀಹರಿ ಶಿರಗಳನ್ನೆಲ್ಲಾ ಚೆಂಡಾಡಿದನು। ಶಿರಗಳನ್ನೆಲ್ಲಾ ಚೆಂಡಾಡುತಲಿ ಅರಿಯಾ ದೊರೆಯನು ತರಿದಿಹನು॥14॥ ಹರಿಯಾಜ್ಞೆಯ ತಾ ಶಿರದಲಿ ಧರಿಸುತ ಹರಿಯನು ಪೊಕ್ಕಳು ಸಿರಿದೇವಿಯು। ಅರಿಯಿಂದ ಹೊರಬಂದ ಸಿರಿಯನು ಸೇರಿ ಪುರವನು ಪೊಕ್ಕನು ಶ್ರೀಹರಿ॥15॥ ಸಿರಿರಮಣನು ತಾ ಧರೆಯಾ ಕೂಡತ ಧರೆಗೆ ಬಂದನು ದ್ವಾಪರದೀ। ಪರಿಪರಿ ಲೀಲೆಯ ಬಾಲ್ಯದಿ ತೋರಿ ಸಿರಿ ರುಕ್ಮಿಣಿ ಪತಿ ಎನಿಸಿದನು॥16॥ ಅಷ್ಟಮಿ ದಿನದಲಿ ಪುಟ್ಟಿದಾ ಹರಿಯು ಬೆಟ್ಟಲಿ ಬೆಟ್ಟವನೆತ್ತಿದನು। ಬೆಟ್ಟಲಿ ಬೆಟ್ಟವನೆತ್ತಿದ ಶ್ರೀಕೃಷ್ಣ ಅಷ್ಟ ಮಹಿಷಿಯರ ಕೂಡಿದನು॥17॥ ನರಕಾಸುರನಾ ಶಿರವನು ತರಿಯುತ ಸೆರೆ ಕನ್ಯೆಯರಾ ಕರ ಪಿಡಿದಾ। ಸೆರೆ ಕನ್ಯೆಯರಾ ಕರವನು ಪಿಡಿಯುತ ವರವನು ಹರಿಸಿದ ಕರುಣೆಯಲೀ॥18॥ ವರಾಹ ಹರಿ ವಿಠಲನ ಯಾಚಿಸಿ ಧರೆಯನು ಪಡೆದನು ಗಿರಿಯಲ್ಲೀ। ಧರೆಯನು ಪಡೆದು ಗಿರಿಯಲ್ಲಿ ನಿಂತ ಸಿರಿರಮಣನ ಕಥೆ ಪಾಡುತಲೀ॥19॥

ಶುದ್ಧಬ್ರಹ್ಮ ಪರಾತ್ಪರ ರಾಮ (ಕಾಂಡಗಳ ಪ್ರಕಾರ ರಾಮಾಯಣಂ) ರಾಗ: ಯಮನ್

ಬಾಲಕಾಂಡಮ್:- ಶುದ್ಧಬ್ರಹ್ಮ ಪರಾತ್ಪರ ರಾಮ। ಕಾಲಾತ್ಮಕ ಪರಮೇಶ್ವರ ರಾಮ। ಶೇಷತಲ್ಪ ಸುಖನಿದ್ರಿತ ರಾಮ। ಬ್ರಹ್ಮಾದ್ಯಮರಪ್ರಾರ್ಥಿತ ರಾಮ। ಚಂಡಕಿರಣಕುಲ ಮಂಡನ ರಾಮ ಶ್ರೀಮದ್ದಶರಥನಂದನ ರಾಮ।

ಕೌಸಲ್ಯಾಸುಖವರ್ಧನ ರಾಮ। ವಿಶ್ವಾಮಿತ್ರಪ್ರಿಯಧನ ರಾಮ। ಘೋರತಾಟಕಾಘಾತಕ ರಾಮ। ಮಾರೀಚಾದಿನಿಪಾತಕ ರಾಮ। ಕೌಶಿಕಮುಖಸಂರಕ್ಷಕ ರಾಮ। ಶ್ರೀಮದಹಲ್ಯೋದ್ಧಾರಕ ರಾಮ। ಗೌತಮಮುನಿಸಂಪೂಜಿತ ರಾಮ। ಸುರಮುನಿವರಗಣ ಸಂಸ್ತುತ ರಾಮ। ನಾವಿಕಧಾವಿತಮೃದುಪದ ರಾಮ। ಮಿಥಿಲಾಪುರಜನಮೋಹಕ ರಾಮ ವಿದೇಹಮಾನಸ ರಂಜಕ ರಾಮ। ತ್ರ್ಯಂಬಕಕಾರ್ಮುಕಭಂಜಕ ರಾಮ। ಸೀತಾರ್ಪಿತವರಮಾಲಿಕ ರಾಮ। ಕೃತವೈವಾಹಿಕ ಕೌತುಕ ರಾಮ। ಭಾರ್ಗವದರ್ಪವಿನಾಶಕ ರಾಮ । ಶ್ರೀಮದಯೋಧ್ಯಾ ಪಾಲಕ ರಾಮ । ರಾಮರಾಮ ಜಯ ರಾಜಾರಾಮ ರಾಮರಾಮ ಜಯ ಸೀತಾರಾಮ॥

ಅಯೋಧ್ಯಾ ಕಾಂಡಮ್:- ಅಗಣಿತಗುಣಗಣಭೂಷಿತ ರಾಮ। ಅವನೀತನಯಾಕಾಮಿತ ರಾಮ। ರಾಕಾಚಂದ್ರ ಸಮಾನನ ರಾಮ। ಪಿತೃವಾಕ್ಯಾಶ್ರಿತಕಾನನ ರಾಮ ಪ್ರಿಯಗುಹ ವಿನಿವೇದಿತಪದ ರಾಮ। ತತ್ಕ್ಷಾಲಿತನಿಜಮೃದುಪದ ರಾಮ। ಭರದ್ವಾಜಭೃಗನಂದನ ರಾಮ। ಚಿತ್ರಕೂಟಾದ್ರಿನಿಕೇತನ ರಾಮ। ದಶರಥಸಂತತಚಿಂತಿತ ರಾಮ। ಕೈಕೇಯಿಸುತಪ್ರಾರ್ಥಿತ ರಾಮ। ವಿರಚಿತನಿಜಪಿತೃಕರ್ಮಕ ರಾಮ। ಭರತಾರ್ಪಿತನಿಜಪಾದುಕ ರಾಮ। ರಾಮ ರಾಮಜಯ ರಾಜಾರಾಮ ರಾಮರಾಮ ಜಯ ಸೀತಾರಾಮ।

ಅರಣ್ಯಕಾಂಡಮ್:- ದಂಡಕಾನನಜನಪಾವನ ರಾಮ। ದುಷ್ಟವಿರಾಧವಿನಾಶನ ರಾಮ। ಶರಭಂಗಸುತೀಕ್ಷ್ಣಾರ್ಚಿತ ರಾಮ। ಅಗಸ್ತ್ಯಾನುಗ್ರಹವರ್ಧಿತ ರಾಮ। ಗೃಧ್ರಾಧಿಪಸಂಸೇವಿತ ರಾಮ। ಪಂಚವಟೀತಟಸುಸ್ಥಿತ ರಾಮ। ಶೂರ್ಪಣಖಾರ್ತಿ ವಿಧಾಯಕ ರಾಮ। ಖರದೂಷಣಮುಖಸೂದಕ ರಾಮ । ಸೀತಾಪ್ರಿಯಹರಿಣಾನುಗ ರಾಮ। ಮಾರೀಚಾರ್ತಿಕೃದಾಶುಗ ರಾಮ। ವಿನಷ್ಟಸೀತಾನ್ವೇಷಕ ರಾಮ। ಗೃಧ್ರಾಧಿಪಗತಿದಾಯಕ ರಾಮ। ಶಬರೀದತ್ತಫಲಾಶನ ರಾಮ । ಕಬಂಧಬಾಹುಚ್ಛೇದನ ರಾಮ । ರಾಮರಾಮ ಜಯ ರಾಜಾರಾಮ ರಾಮರಾಮಜಯ ಸೀತಾರಾಮ॥

ಕಿಷ್ಕಿಂಧಾಕಾಂಡಮ್:- ಹನುಮತ್ಸೇವಿತನಿಜಪದ ರಾಮ ನತಸುಗ್ರೀವಾಭೀಷ್ಟದ ರಾಮ। ಗರ್ವಿತವಾಲಿಸಂಹಾರಕ ರಾಮ । ವಾನರದೂತಪ್ರೇಷಕ ರಾಮ। ಹಿತಕರಲಕ್ಷ್ಮಣ ಸಂಯುತ ರಾಮ ರಾಮರಾಮ ಜಯ ರಾಜಾರಾಮ ರಾಮ ರಾಮ ಜಯ ಸೀತಾರಾಮ॥

ಸುಂದರಕಾಂಡ:- ಕಪಿವರಸಂತತಸಂಸ್ಮೃತ ರಾಮ । ತದ್ಗತಿವಿಘ್ನಧ್ವಂಸಕ ರಾಮ। ಸೀತಾಪ್ರಾಣಾಧಾರಕ ರಾಮ। ದುಷ್ಟದಶಾನನದೂಷಿತ ರಾಮ। ಶಿಷ್ಟಹನೂಮದ್ಭೂಷಿತ ರಾಮ। ಸೀತಾವೇದಿತಕಾಕಾವನ ರಾಮ। ಕೃತಚೂಡಾಮಣಿ ದರ್ಶನ ರಾಮ। ಕಪಿವರ ವಚನಾಶ್ವಾಸಿತ ರಾಮ ರಾಮರಾಮಜಯ ರಾಜಾ ರಾಮ ರಾಮ ರಾಮ ಜಯ ಸೀತಾರಾಮ॥

ಯುದ್ಧಕಾಂಡಮ್:-ರಾವಣನಿಧನಪ್ರಸ್ಥಿತ ರಾಮ। ವಾನರಸೈನ್ಯಸಮಾವೃತ ರಾಮ। ಶೋಷಿತಶರಧೀಶಾರ್ಥಿತ ರಾಮ। ವಿಭೀಷಣಾಭಯದಾಯಕ ರಾಮ। ಪರ್ವತಸೇತುನಿಬಂಧಕ ರಾಮ। ಕುಂಭಕರ್ಣಶಿರಚ್ಛೇದಕ ರಾಮ। ರಾಕ್ಷಸಸಂಘವಿಮರ್ದಕ ರಾಮ। ಅಹಿಮಹಿರಾವಣ ಮಾರಣ ರಾಮ। ಸಂಹೃತದಶಮುಖರಾವಣ ರಾಮ। ವಿಧಿಭವಮುಖಸುರಸಂಸ್ತುತ ರಾಮ। ಖಸ್ಥಿತದಶರಥವೀಕ್ಷಿತ ರಾಮ। ಸೀತಾದರ್ಶನಮೋದಿತ ರಾಮ। ಅಭಿಷಿಕ್ತ ವಿಭೀಷಣನುತ ರಾಮ। ಪುಷ್ಪಕಯಾನಾರೋಹಣ ರಾಮ। ಭರದ್ವಾಜಾದಿನಿಷೇವಣ ರಾಮ। ಭರತಪ್ರಾಣಪ್ರಿಯಕರ ರಾಮ। ಸಾಕೇತಪುರೀಭೂಷಣ ರಾಮ। ಸಕಲಸ್ವೀಯಸಮಾವೃತ ರಾಮ। ರತ್ನಲಸತ್ಪೀಠಸ್ಥಿತ ರಾಮ। ಪಟ್ಟಾಭಿಷೇಕಾಲಂಕೃತ ರಾಮ। ಪಾರ್ಥಿವಕುಲಸಮ್ಮಾನಿತ ರಾಮ। ವಿಭೀಷಣಾರ್ಪಿತರಂಗಕ ರಾಮ। ಕೀಶಕುಲಾನುಗ್ರಾಹಕರ ರಾಮ। ಸಕಲಜೀವಸಂರಕ್ಷಕ ರಾಮ । ಸಮಸ್ತಲೋಕೋದ್ಧಾರಕ ರಾಮ। ರಾಮರಾಮ ಜಯ ರಾಜಾರಾಮ ರಾಮ ರಾಮ ಜಯ ಸೀತಾ ರಾಮ॥

ಉತ್ತರಕಾಂಡ:- ಆಗತ ಮುನಿಗಣ ಸಂಸ್ತುತ ರಾಮ ವಿಶ್ರುತದಶಕಂಠೋದ್ಭವ ರಾಮ। ಸೀತಾಲಿಂಗನ ನಿರ್ವೃತರಾಮ। ನೀತಿಸುರಕ್ಷಿತ ಜನಪದ ರಾಮ। ವಿಪಿನ ತ್ಯಾಜಿತ ಜನಕಜರಾಮ। ಕಾರಿತಲವಣಾಸುರವಧ ರಾಮ। ಸ್ವರ್ಗತ ಶಂಬೂಕ

ಸಂಸ್ತುತರಾಮ। ಸ್ವತನಯ ಕುಶಲವ ನಂದಿತ ರಾಮ। ಅಶ್ವಮೇಧ ಕ್ರತುದೀಕ್ಷಿತ ರಾಮ। ಕಾಲಾವೇದಿತ ಸುರಪದರಾಮ। ಅಯೋಧ್ಯಕ ಜನ ಮುಕ್ತಿದ ರಾಮ। ವಿಧಿಮುಖ ವಿಭುಧಾನಂದಕ ರಾಮ। ತೋಜೋಮಯನಿಜರೂಪಕ ರಾಮ। ಸಂಸ್ಕೃತಿ ಬಂಧವಿಮೋಚಕ ರಾಮ। ಧರ್ಮಸ್ಥಾಪನ ತತ್ಪರ ರಾಮ। ಭಕ್ತಿಪರಾಯಣ ಮುಕ್ತಿದ ರಾಮ। ಸರ್ವಚರಾಚರ ಪಾಲಕರಾಮ। ಸರ್ವಭವಾಮಯ ವಾರಕ ರಾಮ। ವೈಕುಂಠಾಲಯ ಸಂಸ್ಥಿತ ರಾಮ। ನಿತ್ಯಾನಂದ ಪದಸ್ಥಿತ ರಾಮ।ರಾಮರಾಮ ಜಯ ರಾಜಾರಾಮ। ರಾಮರಾಮಯಜ ಸೀತಾರಾಮ।। ಭಯಹರ ಮಂಗಲ ದಶರಥ ರಾಮ। ಜಯಜಯ ಮಂಗಲ ಸೀತಾರಾಮ। ಮಂಗಲಕರ ಜಯ ಮಂಗಲ ರಾಮ। ಸಂಗತಶುಭವಿಭವೋದಯ ರಾಮ। ಆನಂದಾಮೃತವರ್ಷಕ ರಾಮ। ಆಶ್ರಿತವತ್ಸಲ ಜಯ ಜಯ ರಾಮ। ರಘುಪತಿ ರಾಘವ ರಾಜಾ ರಾಮ। ಪತಿತಪಾವನ ಸೀತಾರಾಮ ರಾಮರಾಮ ಜಯ ರಾಜಾರಾಮ ರಾಮ ರಾಮ ಜಯ ಸೀತಾರಾಮ।।

ಶ್ರೀರಾಮಂ ಹರಿಸೀತೆ (ಕಾಂಡಗಳ ಪ್ರಕಾರ ರಾಮಾಯಣ)

ಬಾಲಕಾಂಡ: ಶ್ರೀರಾಮಂ ಹರಿಸೀತೆ ಲಕ್ಷ್ಮಿಯನುಜರ್ ಶಂಬೋರಗಾ ಚಕ್ರಮು। ಶ್ರೀರಾಮಂ ಸುತಕೌಸಲಾ ದಶರಥಂ ಕೈಕಾಸುಮಿತ್ರಾ ಪ್ರಿಯಂ। ಶ್ರೀರಾಮಂ ಭರತಾರ್ಯ ಲಕ್ಷ್ಮಣನಿಗುಂ ಶತೃಘ್ನನಿಂಗಗ್ರಜಂ। ಶ್ರೀರಾಮಂ ಸತಿಮಾಂಡವೀಯುರುಮಿಳಾಶೃತಕೀರ್ತಿಗುಂಭಾವನು।। ಅಯೋಧ್ಯಾಕಾಂಡ: ಶ್ರೀರಾಮಂ ನಿಜವತ್ಸಲಂ ಜನಕಗಂ ರೂಢಾಂಕಿತ ಯುಗ್ಮಕಂ। ಶ್ರೀರಾಮಂ ಮುನಿಗಾಧಿಪುತ್ರನೊಲವಿಂ ಕೋದಂಡವಿದ್ಯಾಂಕನ। ಶ್ರೀರಾಮಂ ಧನುವಂ ವಿಖಂಡಿಸಲು ತಾಂ ಸೀತಾಪತೀಯಾದನುಂ। ಶ್ರೀರಾಮಂ ಭೃಗುರಾಮನಾ ವಿಜಯದಿಂದ ರಾಜ್ಯಾಭಿಷಿಕ್ತಾರ್ಹತಾಂ।। ಅರಣ್ಯಕಾಂಡ: ಶ್ರೀರಾಮಂ ಇರಿಯ ಬೈಯಾವರಗಳಿಂ ವಾಗ್ದಾನ ಬದ್ಧಾದ್ಧರಂ। ಶ್ರೀರಾಮಂ ಸತಿಸೀತೆ ಲಕ್ಷ್ಮಣ ಸಹಂ ಕಾಂತಾರದೋಳ್ನಿಂತನುಂ। ಶ್ರೀರಾಮಂ ಭರತಂಗೆ ಪಾದುಕೆಗಳನ್ನೀಯುತ್ತ ಸಂತೈಸಿದಂ। ಶ್ರೀರಾಮಂ ದನುಜಾಂತಕಂ ಮುನಿಗಳಿಂ ವಂದ್ಯಾರ್ಹ ಮುಕ್ತಿ ಪ್ರದಂ।। ಕಿಷ್ಕಿಂಧಾಕಾಂಡ: ಶ್ರೀರಾಮಂ ಮೃಗಕಾಶೆಯಾಂತ ಸತಿಯಿಂದೇಕಾಂಗಿಯಮ್ಮಾಗುತಂ। ಶ್ರೀರಾಮಂ ಸತಿವಾರ್ತೆಯಂ ತಿಳಿದನುಂ ಪಕ್ಷೀಜಟಾಯೋಕ್ತಿಯಂ। ಶ್ರೀರಾಮಂ ಕಪಿರಾಜ ವಾಲಿಯನುಜಂ ಸುಗ್ರೀವಸಖ್ಯಾನ್ವಿತಂ। ಶ್ರೀರಾಮಂ ನಿಜದುಃಖಮಂ ತಿಳಿಸುತಂ ವಾಗ್ದಾನವಾಂತಾನ್ನೃಷ್ಂ।। ಸುಂದರಕಾಂಡ: ಶ್ರೀರಾಮಂ ಕೊಡಲಾಜ್ಞೆ ಹನುಮಾನ್ ದಾಂಟುತ್ತಲಂಬೋಧಿಯಂ। ಶ್ರೀರಾಮಂ ಸುಖಮೆಂದುತ್ತೆತ್ತು ಸತಿಗುಂ ಮುದ್ರಾಂಗುಳೀ ರತ್ನಮಂ। ಶ್ರೀರಾಮಂ ಸತಿಶೀರ್ಷದಾಭರಣಮಂ ತಂದಿತ್ತವನ್ನಪ್ಪುತಂ। ಶ್ರೀರಾಮಂ ಕಡಲಿಂಗೆಸೇತು ರಚಿಸುತ್ತಾಲಂಕೆಯಂಪೊಕ್ಕನುಂ।। ಯುದ್ಧಕಾಂಡ: ಶ್ರೀರಾಮಂ ಘನಕುಂಭಕರ್ಣಸಹಿತಂ ತದ್ವಂಶ ವಿಧ್ವಂಸಕಂ। ಶ್ರೀರಾಮಂ ನಿಜಬಾಣದಿಂ ತೊಡೆದನುಂ ಮಂಡೋದರೀಗಂಡನಂ। ಶ್ರೀರಾಮಂ ಸುವಿಭೀಷಣಂಗೆ ವಹಿಸೀಲಂಕಾಪುರೀ ರಾಜ್ಯಮಂ। ಶ್ರೀರಾಮಂ ಸ್ವಾಭಿಷಿಕ್ತನಾಗುತೆಸೆದಂ ಶ್ರೀ ಕೋಸಲಾ ರಾಜ್ಯಕಂ।। ರಾಜ್ಯಾಭಿಷೇಕ: ಶ್ರೀರಾಮಂಕದೆ ಭೂಮಿದೇವಿ ಸುತೆಯಂ ಸೌಮಿತ್ರಿವಾಮೇತರಂ। ಶ್ರೀರಾಮಾನುಜ ಶತ್ರುಹಂ ಭರತನುಂ ತತ್ಪಾರ್ಶ್ವದೊಳ್ ಶೋಭಿಸಲ್। ಶ್ರೀರಾಮಶ್ರಿತನಾಂಜನೇಯ ಭಕುತಂ ಪಾದಾಬ್ಜದೊಳ್ನಿಂತಿರಲ್। ಶ್ರೀರಾಮಂಗಭಿಷೇಕಮಾಯ್ತು ಮುನಿಯಿಂಲಾಜಾಕ್ಷತಾಸೇಕದಿಂ।। ಉತ್ತರಕಾಂಡ: ಶ್ರೀರಾಮ ರಜಕೋರ್ವನೆಂದ ನುಡಿಯಿಂ ಲೋಕಾಪವಾದಭಯಂ। ಶ್ರೀರಾಮಂ ಸತಿ ಸೀತೆ ಗರ್ಭವತಿಯಂ ಕಾಡಿಂಗೆ ದೂಡುತ್ತಲಂ। ಶ್ರೀರಾಮಂ ನಿಜದಶ್ವಮೇಧನೆವದಿಂ ಪುತ್ರದ್ವಯಂ ಕಂಡನು। ಶ್ರೀರಾಮಂ ಸತಿಪುತ್ರರಿಂ ಮರಳಿದಂ ವಾಲ್ಮೀಕಿಯೌದಾರ್ಯದಿಂ।। ಸಂಪೂರ್ಣ ರಾಮಾಯಣ: ಶ್ರೀರಾಮಂ ವಿಷ್ಣು ದಶಾವತಾರಿ ಪುರುಷಂ ಕೋದಂಡ ವಿದ್ಯಾರ್ಕಜಂ। ಭೂಮಿಯಾತ್ಮಜೆ ವಲ್ಲಭೆ ಜನಕನಾವಾಗ್ದಾನದಾ ಪಾಲಕಂ।। ಕಾಮಾರೀ ಪ್ರಿಯರಾವಣಾಂತಕನರಂ ಸೇವ್ಯಾಂಜನೇಯಾಧಿಪಂ ಸೌಮಿತ್ರೀ ಭರತಾರ್ಯ ಶತ್ರು ಎಸಹುಂ ಪಟ್ಟಾಭಿರಾಮಂ ಭಜೇ।।

ಸನಕಾದಿಗಳನ್ನು ತಡೆಯಲು ರಾಮ ರಾಗ: ಶಂಕರಾಭರಣ

ಸನಕಾದಿಗಳನ್ನು ತಡೆಯಲು ರಾಮ। ಜಯವಿಜಯರಿಗೆ ಶಾಪವುರಾಮ। ಶಾಪವಿಮೋಚನೆ ಬೇಡಲು ರಾಮ। ರಾಕ್ಷಸ

ಜನ್ಮವ ತಳೆದರು ರಾಮ। ಸುರಮುನಿ ತಪಸನು ಮಾಡಲು ರಾಮ। ಅಸುರರು ತಡೆಯುತಲಿದ್ದರು ರಾಮ। ಅಮರರು ಮುನಿಗಳ ಬೇಡಲು ರಾಮ। ವಿಷ್ಣುವೆ ರಾಮನು ಎನಿಸಿದ ರಾಮ। ಶೇಷನೆ ಲಕ್ಷ್ಮಣನಾಗಲು ರಾಮ। ಶಂಖವೆ ಭರತನು ಆದನು ರಾಮ। ಚಕ್ರವೆ ಆ ಶತ್ರುಘ್ನನು ರಾಮ। ಲಕ್ಷ್ಮೀಯು ಸೀತೆಯು ಆದಳು ರಾಮ। ಕೋಸಲದರಸನು ದಶರಥ ರಾಮ। ಸುತರಿಗೆ ತಪಿಸುತಲಿದ್ದನು ರಾಮ। ವಶಿಷ್ಠರಲ್ಲಿಗೆ ಬಂದರು ರಾಮ। ಪುತ್ರಕಾಮೇಷ್ಠಿಗೆ ಬೆಸಸಿದರಾಮ। ಕೃಪೆ ಇಡೆ ಋಷ್ಯಶೃಂಗರು ರಾಮ। ದಶರಥಯಾಗವ ಮಾಡಿದ ರಾಮ। ಅಗ್ನಿಯು ಪಾಯಸವೀಯಲು ರಾಮ। ನೃಪನದ ಸತಿಯರಿಗಿತ್ತನು ರಾಮ। ತಾಳುತ ಗರ್ಭವ ಕಾಲದೆ ರಾಮ। ಕೌಸಲ್ಯೆ ನಿನ್ನನು ಪಡೆದಳು ರಾಮ। ಕೈಕೆಗೆ ಭರತನು ಜನಿಸಲು ರಾಮ। ಸುಮಿತ್ರೆಗವಳಿಯ ಮಕ್ಕಳು ರಾಮ। ಅವರೇ ಲಕ್ಷ್ಮಣ ಶತ್ರುಘ್ನರು ರಾಮ। ಯುಗಾದಿ ನವಮಿಯು ಶುಭದಿನ ರಾಮ। ಪುತ್ರರು ಸುಖದಲಿ ಬೆಳೆಯಲು ರಾಮ। ವಿಶ್ವಾಮಿತ್ರರು ಕರೆದರು ರಾಮ। ದಶರಥನೊಲ್ಲದೆ ಚಿಂತಿಸೆರಾಮ। ಗುರುಗಳ ಸಲಹೆಯಿಂ ಕಳುಹಲು ರಾಮ। ತಾಟಕಿಯನು ನೀ ಸಂಹರಿಸುತೆ ರಾಮ। ಶಿಲೆಯೊಳು ಪೆಣ್ಣನು ಗೈದೆಯೆ ರಾಮ। ಕ್ಷತ್ರಿಯ ವಿದ್ಯೆಯ ಕಲಿಯುತೆ ರಾಮ। ಯಾಗ ರಕ್ಷಣೆ ಮಾಡಿದೆ ರಾಮ। ಸಂತತಿ ಇಲ್ಲದ ಜನಕನು ರಾಮ। ಯಾಗಕೆ ಭೂಮಿಯೊಳರಸಿದ ರಾಮ। ನೇಗಿಲ ಕೊನೆಯಲಿ ಬಾಲೆಯು ರಾಮ। ಸೀತೆಯು ಎನಿಸುತ ಬೆಳೆದಳು ರಾಮ। ಮದುವೆಯ ಸುದ್ದಿಯು ಬಂದುದೆ ರಾಮ। ಕೌಶಿಕ ನಿಮ್ಮನು ಒಯ್ದನು ರಾಮ। ಶಿವಕೋದಂಡವ ಮುರಿಯುತೆ ರಾಮ। ಸೀತೆಯಮಾಲೆಯ ಧರಿಸಿದೆ ರಾಮ। ದಶರಥ ಮಿಥಿಲೆಗೆ ಬಂದುದೆ ರಾಮ। ಕುವರರ ಲಗ್ನಗಳಾದವು ರಾಮ। ಮಾಂಡವಿ ಭರತನ ಪತ್ನಿಯು ರಾಮ। ಊರ್ಮಿಳೆ ವಲ್ಲಭ ಲಕ್ಷ್ಮಣ ರಾಮ। ಶೃತಕೀರ್ತಿಗೆ ಶತ್ರುಘ್ನನು ರಾಮ। ಸಕಲರಯೋಧ್ಯೆಗೆ ಬರುತಿರೆ ರಾಮ। ಭಾರ್ಗರ್ವ ಗರ್ವವ ಮುರಿದೆಯ ರಾಮ। ಸಕಲರು ಸುಖದಲಿ ಸೇರಲು ರಾಮ। ಸದ್ಗುಣ ರಾಮಗೆ ಪಟ್ಟವು ರಾಮ। ಸಕಲವ ಸಿದ್ಧತೆ ಮಾಡಲು ರಾಮ। ಮಂಥರೆ ಕೈಕೆಗೆ ಭೋದಿಸೆ ರಾಮ। ವರಗಳನಾಕೆಯು ಕೇಳ್ದಳು ರಾಮ। ರಾಮಗೆ ಕಾಡಿನ ವಾಸವು ರಾಮ। ಭರತನೆ ನಾಡಿಗೆ ಈಶನು ರಾಮ। ಕೇಳ್ದುದೆ ನೃಪನಿಗೆ ಮೂರ್ಛೆಯು ರಾಮ। ತಂದೆಯ ನುಡಿಯನು ನಡೆಸಲು ರಾಮ। ಸಂತೈಸುತ ನೀ ಹೊರಟುದೆ ರಾಮ। ಪತಿವ್ರತೆ ಸೀತೆಯು ಸೇರ್ದಳು ರಾಮ। ಅಣ್ಣನ ಸಂಗಡ ಲಕ್ಷ್ಮಣ ರಾಮ। ಗಂಗಾ ತೀರವ ಸೇರಲು ರಾಮ। ಗುಹನಿಗೆ ಪ್ರೇಮವ ತೋರ್ದೆಯರಾಮ। ಭರಧ್ವಾಜನ ಸತ್ಕರಿಸಲು ರಾಮ। ಚಿತ್ರಕೂಟಾದ್ರಿಯ ವಾಸವು ರಾಮ। ಅಗಲಿಕೆಗಳಿದನು ದಶರಥ ರಾಮ।  ತಾತನ ಕರ್ಮವ ನಡೆಸಿದ ರಾಮ। ಭರತನು ಪಾದುಕೆ ಪಡೆದನು ರಾಮ। ಬನದಲಿ ಮುನಿಗಳ ನೊಲಿಸಿದ ರಾಮ। ಪಂಚವಟಿಯ ನೀ ಸೇರ್ದುದೆ ರಾಮ। ಶೂರ್ಪನಖಿ ಮುಖ ಭಂಗವು ರಾಮ। ಖರದೂಷಣ ಸಂಹಾರವು ರಾಮ। ಮಾಯಾಮೃಗವನು ಮೋಹಿಸೆ ರಾಮ। ಮಾರೀ ಚಾಸುರ ಮಡಿದನು ರಾಮ। ರಾವಣ ಸೀತೆಯ ಕದ್ದನು ರಾಮ। ತಡೆದ ಜಟಾಯುಗೆ ಸದ್ಗತಿ ರಾಮ। ಕಬಂದ ಶಬರಿಗೆ ಮುಕ್ತಿಯು ರಾಮ। ಸುಗ್ರೀವ ಸಖ್ಯವು ಆಗಲು ರಾಮ। ವಾಲಿ ಮರ್ದನವಾಯಿತು ರಾಮ। ಹನುಮನ ಸೇವೆಯನೊಪ್ಪಲು ರಾಮ। ಕೂಡಲೆ ಲಂಕೆಯ ಸೇರ್ದುದೆ ರಾಮ। ಸೀತಾವಾರ್ತೆಯ ತಂದುದೆ ರಾಮ। ಶರಧಿಗೆ ಸೇತುವೆ ಕಟ್ಟಿದೆ ರಾಮ। ರಾವಣ ರಕ್ಕಸ ನಾಶವು ರಾಮ। ಘಟಕರ್ಣಾದಿಗಳಳಿದರು ರಾಮ। ಭಕ್ತ ವಿಭೀಷಣಗೆ ರಾಜ್ಯವು ರಾಮ। ಸೀತೆಯ ನೋಡಲು ಮೋದವು ರಾಮ। ಸಕಲರಯೋಧ್ಯೆಯಸೇರುತೆ ರಾಮ। ರಾಜ್ಯವನೀ ಸ್ವೀಕರಿಸಲು ರಾಮ। ಅಮರರು ಪೂ ಮಳೆಗರೆದರು ರಾಮ। ಧರೆಯೊಳು ಧರ್ಮವು ಸತ್ಯವೆ ರಾಮ। ಕಾಲಕೆ ಮಳೆ ಬೆಳೆ ನಡೆಸಿತು ರಾಮ। ಮಹಿಸಾಮ್ರಾಟನು ಎನಿಸುತೆ ರಾಮ। ದೇವರು ಎನ್ನುತ ಭಜಿಪರು ರಾಮ। ಪ್ರಜೆಯಲಿ ನೀನಿಡೆ ಪ್ರೇಮವ ರಾಮ। ಲೋಕವೆ ಭಕ್ತಿಯ ತೋರಿತು ರಾಮ। ಸೀತೆಯು ಗರ್ಭವ ತಾಳಲು ರಾಮ। ಅಗಸನ ನುಡಿಯೇ ಕಳುಹಿತು ರಾಮ। ಮುನಿವಾಲ್ಮೀಕಿಯು ಒಯ್ಯಲು ರಾಮ। ಕುಶಲವರುದಿಸಿದರಲ್ಲಿಯೆ ರಾಮ। ಯಾಗದ ಕುದುರೆಯ ಕಳುಹಲು ರಾಮ। ವೇಗದಿ ಪುತ್ರರು ತಡೆದರು ರಾಮ। ಪತ್ನೀ ಪುತ್ರರ ಪಡೆಯುತೆ ರಾಮ। ರಘುಕುಲ ರತ್ನವು ಎನಿಸಿದೆ ರಾಮ। ನರಸಾರ್ಯಕೃತ ನಾಮವು ರಾಮ। ಭರದಲಿ ಧರೆಯೊಳು ಹರಡಿಸು ರಾಮ। ಜಯಜಯವಾಗಲಿ ಜಾನಕಿ ರಾಮ। ಮಂಗಳವಾಗಲಿ ಮಹಿಯೊಳು ರಾಮ। ರಾಮರಾಮ ಜಯ ರಾಜಾರಾಮ। ರಾಮ ರಾಮ ಜಯ ಸೀತಾ ರಾಮ॥

ಅಂದು ಶ್ರೀರಾಮನು ಅಯೋಧ್ಯಾ ರಾಗ: ಮೋಹನ

ಅಂದು ಶ್ರೀರಾಮನು ಅಯೋಧ್ಯಾ ಪಟ್ಟಣವ ಚೆಂದದಿಂದಾಳುತ। ಅಂಗನೆ ಸೀತೆ ಅನುಜ ಲಕ್ಷ್ಮಣ ಸಹಿತ ಭರತ ಶತೃಘ್ನರೊಡನೆ॥ ಮುಂದೊಂದು ದಿನ ಕನಸು ಕಂಡು ಕಂಗೆಟ್ಟಿದ್ದನು ರಾಮ ಮೈಮುರಿದು। ಕಂದ ಲಕ್ಷ್ಮಣ ಕೇಳೊ ಇಂದೆನ್ನ ಸ್ವಪ್ನದಿ ಬಂದಿಹಳೊಬ್ಬ ತಾಟಕಿಯು॥ ಇಂದುವದನೆ ಮುಡಿ ಹಿಡಿದೆಳೆವುದ ಕಂಡೆ ತುಂಟರಾವಣ ಕುಣಿವುದ ಕಂಡೆ, ಸೀತೆಯ ನೀ ಕೊಂಡ್ಹೋಗಿ ಕಾನನ ವಂದ್ಯದೋಳಗಿರಿಸಿದ ಕಂಡೆ॥ ಭೋಜನ ಶಾಲೆಗೆ ಬಂದೊಡನೆ ರಾಮ ಕರೆಸಿದ ತನ್ನ ಸ್ನೇಹ ಬಾಂಧವರಾ। ಬಂದರು ಮಂತ್ರಿ ಮಾನ್ಯೇರು ಸ್ನೇಹಿತರು, ಹನುಮಾಂಗಧ ಸುಗ್ರೀವರೊ ದೇವ ಲಕ್ಷ್ಮಣ ಆಪೋಷಣವೆರೆಯಲು ದೇವ ಋಷಿಗಳು ಆಪೋಷನಗೊಳಲು ದುಸ್ವಪ್ನಕಂಡಿದ್ದ ಸೀತೆಗೂ ಊಟರುಚಿಸದಾಯ್ತು॥ ಉಂಡು ಕೈತೊಳೆದ ಸಕಲ ಜನರೂ ಕೊಂಡರು ಹರುಷದಿ ತಾಂಬೂಲವನು। ಪುಂಡರೀಕಾಕ್ಷ ಶ್ರೀರಾಮ ಶರಣೆಂದು ಬಂದರು ತಂತಮ್ಮ ಬಿಡಾರಕೆ। ಅಂದು ಆ ಸೀತೆಯನೊಡಗೊಂಡು ಶ್ರೀರಾಮ ಬಂದು ಸಿಂಹಾಸನವ ನೇರಿದ॥ ತಂದೆ ಕಾಲದ ಸಿಂಹಾಸನವು ತುಂಡಾದುವೆರೆಡು ಭಾಗದಲಿ। ಇಂದೇನು ಕಾರಣವೆನುತಲಿ ಕರೆದು। ಲಕ್ಷ್ಮಣನ ದೇವಿಯ ಕರೆದೊಯ್ದು ಕಾನನದಿ ಬಿಟ್ಟು ತಿರುಗಿ ಬಾರೆಂದಾ। ಅಂಗಜೆ ಹೊರಡಲು ಮಂಗಳಾರತಿಯ ಕಂಡು ತುಂಬಿದ ಕೊಡವೆರಡ ಕಂಡ ಅಂಗನೆಯ ರೆಲ್ಲರೂ ಶುಭವಾಯಿತೆನುತಲೆ ಬಂದರು। ಪುರದಬಾಗಿಲಿಗೆ। ರಾಮನರಸಿ ಸೀತೆ ಓಡಿ ಹೋದಳೆಂದು ನಾಡಿನೊಳಗೆ ಅಪಕೀರ್ತಿ ಬರದಿರಲಿ। ಕೆಂಡಕ್ಕೆ ಇರುವೆ ಮುತ್ತುವುದುಂಟೆ ಎಲೆತಾಯೆ ಚಂದ್ರಮಗೆ ರವಿಬಿಸಿಲುಂಟೆ? ಮುಂದೇಳು ಲೋಕವ ಹೊರುವೋ ಜಗನ್ಮಾತೆಗೆ ನಿಂದ್ಯಾಪಕೀರ್ತಿಗಳುಂಟೆ? ಅಂದು ಆದೇವಿಯ ಒಡಗೂಂಡು ವಾಲ್ಮೀಕಿ ಬಂದನು ತಮ್ಮಾಶ್ರಮಕೆ ಆಗ ವಾಲ್ಮೀಕನು ಸತಿಯ ಕರೆದ್ಹೇಳಿದಾ ಬಾಲೆಯನುಪಚರಿಸೆಂದು॥ ನವಮಾಸ ತುಂಬಿ ಮೈಭಾರ ಇಳಿದು ಸೀತೆ ಪುತ್ರರ ಪಡೆದಳಂದು। ಕಂದರು ಜನಿಸಿದ ದಿನ ವಾರ ನಕ್ಷತ್ರ ಚೆಂದಿಹುದೆಂದ ಮುನಿಯು॥ ಲೋಕಮಾತೆ ಪೆತ್ತ ಪುತ್ರರೀರ್ವರು ಲವಕುಶರೆಂಬ ಹೆಸರಂ ಪಡೆದು। ನಾಲ್ಕು ವೇದವ ಸಾರುವ ತೊಟ್ಟಿಲಲಿ ಮಲಗಿ ಆಡುತ್ತಾ ಬೆಳೆದರಲ್ಲಿ॥ ಪಿಡಿದು ಕಾಡುವ ಬಾಲಕರ ಬಿಗಿದಪ್ಪಿದಳು ಕಡೆಗಣ್ಣಲಿ ಉದಕ ಕಾರಿದಳು। ದಶರಥರಾಯರ ಸುತ ರಾಮಚಂದ್ರರು ಅಸುರಸಂಹಾರಿ ನಿಮ್ಮಯ್ಯನೆಂದಳು॥ ಕ್ಷತ್ರಿಯ ಕುಲದಲ್ಲಿ ಪುಟ್ಟಿದೋರು ಪುರವನು ಬಿಟ್ಟು ಇಲ್ಲಿಗೇತಕೆ ಬಂದಿರಿ ಎನಲು॥ ತಾಟಗಿತ್ತಿ ಬಂದು ಪಾತಕದ ಪಟ ಬರೆದು ನೂಕಿಬಿಟ್ಟಳು ಎನ್ನಮೇಲೆ। ಕಂಡು ಶ್ರೀರಾಮರು ಕೊಂದು ಬಾರೆಂದಾದೇಶವಿಡಲು ತಂದುಳುಹಿದ ಲಕ್ಷ್ಮಣನೂ॥ ಕಂಡು ವಾಲ್ಮೀಕ ಮುನಿ ಕರೆದು ಸಂತೈಸಿದ ಮುಂದೆ ನಿಮ್ಮ ಪುಣ್ಯ ಪ್ರಭಾವಾ। ತಂದೆಯ ಕಣ್ಣ ಮುಂದಾಡುವ ಮಕ್ಕಳಲ್ಲಿ ಆಟಪಾಠ ಕಲಿಯುತ್ತಿರುವಿರೆಂದಳು॥ ರಾಮ ಯಜ್ಞವ ಮಾಡಿ ಮುದ್ದು ತೇಜಿಯ ಬಿಟ್ಟರು ಭೂಪ್ರದಕ್ಷಿಣೆಗೆ। ಅದು ವಾಲ್ಮೀಕಾಶ್ರಮಕೆ ಬರಲು ಬಾಲರಿಬ್ಬರು ಕಂಡು ಹಿಡಿದು ಕಟ್ಟಿದರು॥ ನಾನಾ ಪರಿಯಲಿ ಪೇಳಿದ ಬುದ್ಧಿಗೆ ಬಾಲರಾ ಮನ ಸೋಲಲಿಲ್ಲಾಗ। ಶತೃಘ್ನನು ಬಿಲ್ಲಬಾಣಗಳ್ಹಾಕೆ ದಾಟಿಹೋದುವು ಅವು ಲವಕುಶರ॥ ಬಳಿಕ ಬಂದ ಭರತನು ಬಾಲಕರು ನಾನಾವಿಧದಿ ನಿಂದಿಸಿದರೂ ಮೊಗನೋಡದೆ ಕಂದರು ಬಲ್ಲಿದರೆಂದೂ ಕೊಲ್ಲಲಾರದೆ ನಾನು ಉಳುಹಿದೆನಾದರೆ ರಾಮ ಕೋಪಿಸುವ ಬಲ್ಲಿದ ಭರತನು ಹೊನ್ನಂಬು ಜೋಡಿಸಿ ಅಲ್ಲಿ ಲವನ ಕೆಡವಿದನು॥ ಬಾಣತಾ ಕೀಲವ ಬಳಲಿ ಮೂರ್ಛೆಗೊಳ್ಳೆ ನೋಡಿದ ನಿಂತು ಕುಶಲನು॥ ಆಶ್ರಮಕ್ಕೆ ಬಂದು ಪಾದಕೆ ಬಿದ್ದು ಕೈ ಮುಗಿದು ಕಂಗಳೋಳ್ ಜಲ ಸುರಿಸುತಲಿ। ಅಮ್ಮಯ್ಯ ಕೇಳೆ ನಮ್ಮಣ್ಣನ ಕರೆದೊಯ್ದರು ಬಾಣ ತಾಕಿ ಲವ ಬಳಲಿದನು॥ ಕಂದಯ್ಯ ನಿಮ್ಮ ನಾನು ಕಾಳಗಕೆ ಪಡೆದನೇ ಇಂತೆಂದು ದುಃಖಿಸಿದಳು. ಜಾನಕಿಯು। ತಾಯೆ ನೀನಳದಿರು ನಿನ್ನುಂಗರವ ಕೊಡು ಅಣ್ಣನ ಕರೆತರುವೆನೆಂದನು॥ ಗಂಗೆಯ ನೀರಿಗೆ ಬಂದಳೋರ್ವ ನಾರಿ ಈ ಹರವಿಯ ನೀರು ಮಾರಿಗೆ ಬಲಿಕೊಡುವ ಬಾಲಕರೆ ಎರೆವೋರೆನಲು। ತುಂಬಿದ ಕೊಡದಲ್ಲಿ ಉಂಗುರವಿಳುಹಲು। ಎರೆದಾಗ ಬಾಲಕಗೆ ಉಂಗುರ ಮೈಸೋಕಿ ತುಂಬಿತು ಪ್ರಾಣ॥ ಶ್ರೀರಾಮ ಚಿಂತೆಗೊಂಡು ದಂಡೆತ್ತಿ ಬಂದ ಚಂದದ ಭೇರಿ ವಾದ್ಯಗಳ ರಭಸದೊಡನೆ। ವಾಲ್ಮೀಕರ ವರಪುತ್ರ ಕುಶಲನ ಬಲ್ಲಿದ ಬಾಣಕ್ಕೆ ರಾಮ ಲಕ್ಷ್ಮಣರು ಮೂರ್ಛೆಗೊಳಲು ಬಾಲರಿಬ್ಬರೂ ಬಂದು ತಾಯಿ ಎದುರಲಿ ನಿಂದು ಜೈಸಿದೆವು ರಾಮರ ಎನಲು। ಓಹೋ ಬಾಲರೆ ಕೆಡಿಸಿದಿರಿ ನೀವೆಂದು ಮೂರ್ಛೆಗೊಳಲು ಸಂತೈಸಿದರು ಸೀತೆಯ॥ ತಂದ ಕಮಂಡಲದುದಕವ ತಳೆಯಲು ವಾಲ್ಮೀಕಿ ನಿಂದರು ರಾಮ ಲಕ್ಷ್ಮಣರು। ರಾಮ ಲಕ್ಷ್ಮಣರು ವಾಲ್ಮಿಕರ

ಪಾದಕ್ಕೆ ಪ್ರೇಮದಿಂದ ಎರಗಿದರು ಭರತ ಶತ್ರುಘ್ನರೊಡಗೂಡಿ।। ಯಾವ ದೇಶದ ಬಾಲರಿವರೆಂದು ರಾಮನೆನಲು ದಶರಥ ರಾಮನ ಪುತ್ರರೆಂದಮುನಿ। ಲೋಕಮಾತೆ ಹೆತ್ತ ಅವಳಿ ಮಕ್ಕಳು ಲವಕುಶರು ನಾಲ್ಕು ವೇದವ ಸಾರುತಿಹರೆಂದ। ಅಂದು ವಾಲ್ಮೀಕಿಯು ಸೀತೆಯ ಸಂತೈಸಿ ಚಂದ್ರಗಾವಿಯನುಡಗೊಟ್ಟು ಶಶಿಮುಖಿ ಜಾನಕಿಗೆ ನಸುನಗುತ ಸಂತಸದಿ ಹೊಸ ಮುತ್ತ ಉಡಿಯ ತುಂಬಿದಳು ಋಷಿಪತ್ನಿ।। ಬಾಲರು ಜಾನಕಿ ವಾಲ್ಮೀಕಿಯಪಾದಕ್ಕೆ ಪ್ರೇಮದಿಂದೆರಗಿ ಅಪ್ಪಣೆಗೊಳ್ಳಲು ಬಾಲರತೆಗೆದಪ್ಪಿ ವಾಲ್ಮೀಕಿ ಬಾಲರಿಗೂ ಸೀತೇಗೂ ಹರಸಿ ಹೋಗಿ ಬಾರೆಂದ।। ತನಯರ ಸೀತೆಯುತೆಗೆದಪ್ಪಿ ಶ್ರೀರಾಮ ತನೆಯರೆ ರಾಜ್ಯವಾಳಿರೆಂದು ಹರಸಿದಳು। ರಥವಿಳಿದು ಶ್ರೀರಾಮ ಅರಮನೆಗೆ ಸತಿಸುತ ಅನುಜರೊಡಗೂಡಿ ಬಂದು ಮಾತೆಯರಿಂದ ಆಶೀರ್ವಾದ ಪಡೆದು ಸುಖದಿ ಮೆರೆದ।।

ರಾಮ ಹರೇ ರಘುರಾಮ ಹರೇ

ರಾಮ ಹರೇ ರಘುರಾಮ ಹರೇ ಜಯರಾಮ ಹರೇ ಪ್ರಭುರಾಮ ಹರೇ। ರಾಮ ರಾಮ ಶ್ರೀ ರಾಮ ನತ ಕಾಮಿತಾರ್ಥ ಸುರಧೇನು ಹರೇ।। ದಶರಥನಿಗೆ ಕೌಸಲ್ಯೆ ಸುಮಿತ್ರೆಯು ಶಶಿಮುಖಿ ಕೈಕೇಯಿಸತಿಯರೊಲು। ಪಸುಳರಿಲ್ಲದಲೆ ಋಷ್ಯಶೃಂಗರ ಆಶ್ರಯ ಮಾಡಿದ ಯಜ್ಞದೊಳು।। ಮಿಸುಪ ಪಾತ್ರೆ ಯಜ್ಞೇಶ್ವರ ಧರಿಸುತ ವಸುಧೀಶಂಗಿತ್ತಿದನು ನಿನ್ನ। ವ್ಯಸನ ಹರಿಸೆ ಸತಿಯರಿಗೀಯೆನೆ ಸಂತಸದಿಂ ಕುಡೆ ರಾಜನು ಮುನ್ನ।। ಕೌಸಲ್ಯೆ ರಾಮನ ಕೈಕೆಯಿ ಭರತನ ಆ ಸುಮಿತ್ರೆ ಪಡೆದಳು ಹಿತರ ಕೋಷದಿ ಲಕ್ಷ್ಮಣ ಶತ್ರುಘ್ನರ ವಾಸುದೇವನಂಶದಸುತರ।। ರಾಮ ಲಕ್ಷ್ಮಣರು ಬಾಲ್ಯದೊಳಿದ್ದಾಗಾಮುನಿ ಕೌಶಿಕನೈತಂದು। ತಾ ಮಾಡುವ ಯಾಗವ ರಕ್ಷಿಸಿ ಭೂಮಿಪಗೊಪ್ಪಿಸಿ ನಡೆತಂದು।। ಗುರು ವಿಶ್ವಾಮಿತ್ರರು ಪೇಳಿದ ತೆರ ಹರಿಸಿ ತಾಟಕಿಯ ಮೇಣವಳ। ತರಳರು ಸುಬಾಹು ಮಾರೀಚರ ಸಂಹರಿಸುತಲೆಜ್ಞವ ಕಾಯ್ದಭಲಾ।। ಅಲ್ಲಿಂ ಮಿಥಿಲೆಗೆ ಬರುತ ಮಾರ್ಗದೆ ಅಹಲ್ಯೆಯನುದ್ಧರಿಸಿದ ರಾಮ। ಚಿಲ್ವರುದ್ರಧನು ಮುರಿದು ಕೀರ್ತಿ ಶ್ರೀ ವಲ್ಲಭೆಯನು ವರಿಸಿದ ರಾಮ।। ರಾಮನು ಸೀತೆಯ ಲಕ್ಷ್ಮಣನೂರ್ಮಿಳೆ ಆ ಮಾಂಡವಿ ಶ್ರುತಕೀರ್ತಿಯರ। ನೇಮದಿ ಭರತ ಶತ್ರುಘ್ನರು ವರಿಸಿದರಾ ಮಹೋತ್ಸವದೆ ಕೇಳ್ ವಿವರ।। ಲಗ್ನಮಹೋತ್ಸವ ಮುಗಿಸುತ ಯೋಧ್ಯೆಗೆ ಹಿಗ್ಗಿನೊಳೈತಹ ಮಾರ್ಗದಲಿ। ಝಗ್ಗನೆ ರಾಮನು ಪರಶುರಾಮನನು ಬಗ್ಗಿಸಿ ವೈಷ್ಣವ ಧನುವಿನಲಿ।। ತಂದೆತಾಯಿ ಸೋದರ ಪರಿವಾರದ ಮುಂದೆ ವಿಜಯ ಸಂತೋಷದಲಿ। ಬಂದಯೋಧ್ಯೆಯಲಿ ಸೀತೆಯೊಡನೆ ಆನಂದದೊಳಿರ್ದನು ಲೀಲೆಯಲಿ।। ಭರತ ಶತ್ರುಘ್ನರು ಮಾತುಳ ಕೇಕಯನರಮನೆಗೈದಾ ಸಮಯದಲಿ। ಜನಪ ದಶರಥನು ರಾಮಗೆ ಪಟ್ಟವ ವಿರಚಿಸಲಿರೆ ಸನ್ನಾಹದಲಿ।। ಹಿಂದೆ ಸುರಾಸುರಧುರದೆ ಕೈಕೆ ತನಗಂದೆಸಗಿರುವ ಸಹಾಯದಲಿ। ಚಂದದೊಳಿತ್ತಾ ವರ ಯಾಚಿಸ ದವಳಿಂದು ಬೇಡಿದಳು ಕಪಟದಲಿ।। ದಾಸಿ ಮಂಥರೆಯ ದುರ್ಬೋಧನೆಯಿಂದಾ ಸಮಯದೆ ದಶರಥನನ್ನು। ಘಾಸಿಗೊಳಿಸಿದಳು ಶ್ರೀರಾಮಗೆ ವನವಾಸ ಭರತನಿಗೆ ರಾಜ್ಯವನು।। ವನದೊಳು ರಾಮನು ಹದಿನಾಲ್ಕು ವರುಷವು ತನುಪೋಷಿಸಬೇಕೆನಲಾಗ। ಜನಕನ ನುಡಿಯಿಂ ನಡೆದನು ರಾಮನು ಜನಕಜೆ ಲಕ್ಷ್ಮಣ ಸಹಿತಾಗ।। ದಂಡಕವನಕೈದಿರೆ ಮುನಿವೇಷದಿ ಕಂಡು ಶೂರ್ಪಣಖಿ ರಾಮನನು। ಖಂಡಿತ ವರಿಸೆನೆ ಕಿವಿನಾಸಿಕಗಳ ಖಂಡಿಸಿ ಕಳಿಸಲು ಲಕ್ಷ್ಮಣನು।। ಓಡಿದ ರಕ್ಕಸಿ ಖರದೂಷಣ ಮೊದಲಾದ ಬಾಂಧವರ ಕರೆತರಲು। ಕಾದಿರಾಮ ಹದಿನಾಲ್ಕು ಸಹಸ್ರದ ಆದೈತ್ಯರ ವಧಿಸುತ ಬರಲು।। ತಂಗಿಯು ಸೀತೆಯ ವಾರ್ತೆ ಪೇಳೆ ತಾ ಭಂಗವನಾಂತುದ ಯೋಚಿಸುತ। ಅಂಗನೆ ವಶ ಗೈಯ್ಯಲು ಮಾರೀಚನ ಸಂಗಡ ಬಂದನು ರಾವಣ ತಾ।। ಕಾಂಚನ ಮಾಯಾಮೃಗ ಮಾರೀಚನು ವಂಚಿಸಿ ರಾಮನ ಸೆಳೆದೊಯ್ದಾ। ಹೊಂಚಿಗೆ ದೊರಕದೆ ರಾಮನ ಬಾಣಕೆ ಸಂಚಕಾರವೆನೆ ತುತ್ತಾದ।। ಸಾಯುವಾಗ ಹಾ ಸೀತೆ ಲಕ್ಷ್ಮಣ ಬಾ ಎಂದರಚುತ್ತವ- ನೊದರೆ ಮಾಯೆ ಅರಿಯದೆಲೆ ಸೀತೆ ಲಕ್ಷ್ಮಣನ ನೋಯಿಸಿ ನುಡಿದೊಡನವ ಬೆದರೆ।। ರಾಮಾನ್ವೇಷಣೆಗಾಲಕ್ಷ್ಮಣ ಹೊರಟಾ ಮುನಿ ವೇಷದಿ ರಾವಣನು। ಭೂಮಿಜೆಯನು ಕದ್ದೊಯ್ದುಖಗನ ಸಂಗ್ರಾಮದಿ ಕೆಡಹುತ ವಂಚಕನು।। ಮರಳಿ ರಾಮ ಲಕ್ಷ್ಮಣರಾಶ್ರಮದೊಳು ಧರಣಿಜೆ ಕಾಣದೆ ಬರುವಾಗ ದೊರೆತ ಜಟಾಯುವು ಸೀತಾವಾರ್ತೆಯ ಅರುಹಿ ಬಿಟ್ಟ ಪ್ರಾಣವನಾಗ।। ಉತ್ತಮನಾದ ಜಟಾಯುವ ರಾಮನೆ ಉತ್ತರ ಕ್ರಿಯೆ ಪೂರೈಸುತ। ದುಷ್ಟಕ ಬಂಧನ ವಧಿಸಿ ಹನುಮನಿಂ ಸಖ್ಯ ಸುಗ್ರೀವನೊಳ್ ಬೆಳೆಸುತ್ತ।। ವಾಲಿಯ

ಕೊಂದಾ ವಾನರ ರಾಜ್ಯವ ಪಾಲಿಸೆ ಸುಗ್ರೀವನಿಗಿತ್ತ। ವಾಲಿಜ ಜಾಂಬವ ಹನುಮರ ಕಳುಹಿದ ಲೋಲಾಕ್ಷಿಯ ಹುಡುಕುವುದೆನುತ॥ ಧೀರ ಹನುಮ ಲಂಘಿಸಿ ಸಮುದ್ರವನು ಸೇರಿ ಲಂಕೆ ಸೀತೆಯ ಕಂಡು। ಶ್ರೀರಾಮಾಂಗುಲಿಯಿತ್ತು ಸೀತೆಯಿಂದೊಡನೆ ಚೂಡಾಮಣಿಕೊಂಡು॥ ವನಭಂಗವ ಲಂಕೆಯನರುಹುತ್ತ ಹನುಮ ರಾಮನ ಬಳಿ ಬಂದು। ಜನಕಜೆ ಸುಕ್ಷೇಮವ ತಿಳಿಸಲು ರಾಮನು ಸಾಗರದೆಡೆಗೈತಂದು॥ ಸೇರಿದ ಕಪಿಕೋಟಿಯ ಸಹಿತದಿ ತಾ ಮೂರು ದಿನವು ಸಾಗರವನ್ನು। ದಾರಿ ಬೇಡಿದರು ಕೊಡದಿರೆ ಕೋಪದಿ ಧೀರಶರವ ಹೂಡಿದನಿನ್ನು॥ ನಡುಗಿ ಸಮುದ್ರನು ರಾಮ ಸ್ಪಂದಿಸಿ ನುಡಿದ ಸೇತು ರಚಿಸುವುದೆಂದು। ಕೊಡಲಪ್ಪಣೆ ರಾಮನು ಕಪಿಸೇನೆಗೆ ಒಡನೆ ಸೇತು ರಚಿಸಿದರಂದು॥ ಸೇತುವನೇರುವ ಸಮಯ ರಾವಣನ ಭ್ರಾತೃವಿಭೀಷಣನೈತಂದು। ಸೀತಾಧವ ಶರಣೆನೆ ಹರಿಕೃಪೆಯಲಿ ಆತಗನುಗ್ರಹಿಸಿದನಂದು॥ ನೀಲಸುಗ್ರೀವಾಂಗದ ನಳ ಜಾಂಬವ ಮೇಲಸಂಖ್ಯಸೇನೆಯ ಸಹಿತ। ಆ ಲಂಕೆಯ ಬಳಿಗೈದಲು ರಾವಣ ಕೇಳಿಧುರಕೆ ತಾನನುವಾದ॥ ಕುಂಭನಿಕುಂಭ ಸುರಾಂತನರಾಂತಕ ಕುಂಭಕರ್ಣೇಂದ್ರ ಜಿತಮಿತ್ರ। ಜಂಭ ಪ್ರಹಸ್ತಾದ್ಯರು ಕೋಟ್ಯಾಂತರ ಸಂಭ್ರಮ ದೈತ್ಯರು ಸೇರುತ್ತ॥ ರಕ್ಕಸರಿಗು ಕಪಿವೀರರಿಗಾಯಿತು ಉತ್ಕಟಧುರದಲಿ ರಘುವರನು। ಸೊಕ್ಕಿದ ದೈತ್ಯರ ವಧಿಸಿದ ಮೂಲೋಕಕ್ಕದ್ಭುತವೆನೆ ಅಳಿದರವರು॥ ಸತ್ತನಿಂದ್ರಜಿತ ಕುಂಭಕರ್ಣ ಪ್ರಹಸ್ತ ನರಸುರಾಂತಕರೆಲ್ಲ। ಹತ್ತುಶಿರದವನ ಮಕ್ಕಳನೇಕರು ದೈತ್ಯಕೋಟಿ ನಶಿಸಿದುವೆಲ್ಲ॥ ರೋಷದಿ ರಾವಣ ಬಂದೊಡೆ ಯುದ್ಧವು ಭೀಷಣಾಗೆ ರಘುವರಗಾಗ। ಆ ಸುರೇಂದ್ರ ರಥ ಧನುಶರಗಳನಾ ವಾಸುದೇವ ಗೊದಗಿಸೆ ಬೇಗ॥ ದಶ ಶಿರನಿಗೆ ಶ್ರೀಹರಿ ಬ್ರಹ್ಮಾಸ್ತ್ರವನೆಸೆದು ಕತ್ತರಿಸೆ ಶಿರಗಳನು। ಅಸುನೀಗಲು ಪರಿವಾರ ಚಿಂತಿಸಲು ದಶರಥಸುತ ಸಂತೈಸಿದನು॥ ದನುಜನುತ್ತರ ಕ್ರಿಯಾದಿಗಳನಾ ಅನುಜನಿಂದ ನೆರವೇರಿಸುತ। ಘನವಿಭೀಷಣಗೆ ಪಟ್ಟಗಟ್ಟಿ ಸತಿಯನು ಶಿಖಿಯಿಂದಲಿ ಶುದ್ಧಿಸುತ॥ ಏರುತ ಪುಷ್ಪಕ ಸೀತಾರಾಮರು ಭೂರಿಪರಿವಾರವೆಲ್ಲವರು। ಹರಿವಾಯುವೇಗದಿ ಕಿಷ್ಕಿಂದೆಲಿ ಸೇರಲಲ್ಲಿ ಮತ್ತುಳಿದವರು॥ ಎಲ್ಲರ ಸಹಿತ ಭರದ್ವಾಜಾಶ್ರಮದಲ್ಲಿ ಪಡೆಯುತಾತಿಥ್ಯವನು। ಫುಲ್ಲನಾಭ ತನ್ನನುಜ ಭರತನಿರುವಲ್ಲಿ ಹನುಮನನು ಕಳುಹಿಸಿದನು॥ ಈರೇಳ್ವರುಷವು ಕಾದೀ ದೇಹವ ಮಾರನೆ ದಿನ ಬರದಿರೆ ರಾಮ। ಸೇರುವೆನಗ್ನಿಯನೆಂದು ಪಾದುಕೆಯ ಧೀರಕೊಂಡಯ್ದನುದ್ದಾಮ॥ ಹದಿನಾಲ್ಕು ವರುಷವು ಇಂದಿಗೆ ಮುಗಿಯಿತು ಹೆದರುತ್ತಿದೆ ಮನವವಗಾಗಿ। ಸದಯ ಭಕ್ತನವತ್ಯಾಗಿಯುತ್ತ ಮನು ಪದವಿಡದಿಹಪುರದೊಳಗಾಗಿ॥ ಎಮ್ಮಂದದಿ ಫಲಮೂಲ ಭುಜಿಸುವ ತಮ್ಮ ಬ್ರಹ್ಮಚರ್ಯೆ ಯೊಳಿರುತ ರಮ್ಯ ಜಟಾವಲ್ಕಲ ಧರಿಸಿರುತಿಹ ಹೆಮ್ಮೆಯ ನಂದಿಗ್ರಾಮದೆ ತಾ॥ ರಾತ್ರಿ ಭರದ್ವಾ- ಜಾಶ್ರಮದೊಳು ರಘುನಾಥ ರಕ್ಕಸರ ಸಂಗ್ರಾಮ। ವಾರ್ತೆಪೇಳಿ ಸಂತೋಷದಿ ಮುನಿಗಳ ಪ್ರೀತೆಯೊಳಾಳ್ದನು ರಣಭೀಮ॥ ಅರುಣೋದಯದಲಿ ತಾಪಸಿ ಭರತನು ಬರಲಿಲ್ಲವು ರಾಮನು ಎಂದು ತ್ವರಿತದಲಗ್ನಿಯ ಸುತ್ತುತ್ತಿರೆ ಬಂದೊರೆದ ಹನುಮ ಹರಿ ಬಹನೆಂದು॥ ರಾಮನ ಸಂಭ್ರಮದಿಂದೆದುರಾಗುತ ನೇಮದಿ ಕರೆತಹ ಸನ್ನಾಹ। ಭೂಮಿಯೊಳತಿಶಯ ವೆನಲಯೋಧ್ಯೆಜನ ಪ್ರೇಮ ಮೀರಿಕಾದಿಹರಹಹ॥ ನಂದಿಗ್ರಾಮಕೆ ಬಂದ ವಿಮಾನದೆ ಸಂಧಿಸಿ ಭರತನು ರಾಮನಿಗೆ। ವಂದಿಸಿ ಪಾದುಕೆ ಸೇರಿಸಿ ತಾ ಕರೆತಂದ ರಥದೊಳರಮನೆಗೆ॥ ತಾಯಿಗುರುಹಿರಿಯರೆಲ್ಲರ ರಾಮನು ಜೊತೆಗೂಡಿ ನಮಿಸಿದ ಬಳಿಕ। ಆಯಿತಯೋಧ್ಯಾ ಪಟ್ಟಾಭಿಷೇಕವು ರಾಯರಾಮ ಸಂತಸ ಜನಕ॥ ರಕ್ಕಸ ಕಪಿ ಪರಿವಾರಕೆ ರಾಮನು ತಕ್ಕರೀತಿ ಬಹುಮಾನಿಸುತ। ಮಕ್ಕಳಂತೆ ಸಂತೋಷದಿ ಕಳುಹಿದನಕ್ಕರೆಯಿಂದಾ ರಘುನಾಥ॥ ಭರತನಾದ ಯುವರಾಜ ಶತ್ರುಘ್ನ ವರಸೇನಾಪತಿಯೆಂದೆನಿಸಿ। ಧರೆಗೆ ಲಕ್ಷ್ಮಣನೆ ಮಂತ್ರಿ ತ್ರೇತೆಯಾದರು ಕೃತ ವೆನಿಸಿತು ಹರಿದಯದಿ॥ ಬಳಿಕಪವಾದದೆ ಗರ್ಭಿಣಿ-ಸೀತೆಯ ಕಳುಹಿದ ರಾಮನು ವನಕಾಗಿ। ಸತಿ ವಾಲ್ಮೀಕಾಶ್ರಮದಲಿ ಹೆತ್ತಳವಳಿ ಕುಶಲವರಿನಿತಾಗಿ॥ ಹರಿಮೇಧಕೆ ಶ್ರೀರಾಮನು ಬಿಟ್ಟಾಹರಿ ವಾಲ್ಮೀಕಾಶ್ರಮದಲ್ಲಿ। ತರಳ ಲವನು ಕಟ್ಟುತ ಸಂಗ್ರಾಮವ ವಿರಚಿಸೆ ಬಾಲಕರೀರ್ವರಲಿ॥ ಶತ್ರುಘ್ನನು ಭರತನು ಲಕ್ಷ್ಮಣರೇ ಮತ್ತೆ ರಾಮನೇ ಮೈಮರೆದ। ಸತ್ಯರಾಮನಾಮಕೆ ಜಯವಾಯಿತು ಉತ್ತಮ ವಾಲ್ಮೀಕರು ಬರುತ॥ ತಂದೆ ಮಕ್ಕಳು ಸೇರಿಸೆ ಭೂಮೀನಂದನೆ ಬೆರೆಯಲು ರಾಘವನು। ಅಂದಪವಾದದ ಭಯತೋರಲು ತಾ ಚಂದದಿ ಪ್ರಾರ್ಥಿಸೆ ಮಾತೆಯನು॥ ಭೂಮಿದೇವಿ ಬಾಯ್ದೆರೆದಾ ಸೀತೆಯ ಪ್ರೇಮದಿ ನುಂಗಿದಳಾ ಬಳಿಕ ರಾಮನಿ ಗತಿಶಯ ಬೇಸರವಾದುದು ಭೂಮಿತನಯರಿಗೆ ಕೊಡುವನಕ॥ ಹನ್ನೊಂದು ಸಾವಿರ

ವರ್ಷವಾಳಿದ ಚಿನ್ಮಯ ಮೂರುತಿ ಧರೆಯನ್ನು। ಇನ್ನು ತೊರೆದು ನಿಜಧಾಮವ ಸೇರಿದನುನ್ನತ ಕೀರ್ತಿಯ ರಘುವರನು॥ ರಾಮನ ಕಥೆಯಿದು ಹೇಳಿ ಕೇಳಿದರೆ ಕಾಮಿತವೆಲ್ಲವು ಫಲಿಸುವುದು। ರಾಮನಾಮವೇ ಲೋಕದ ಪಾವನ ಧಾಮವೆಂದು ತಾನೆನಿಸುವುದು॥ ಸುಂದರ ರಾಮನ ಗುಣ ಪಾಡುವ ನೆವದಿಂದದ ವಿಮಲಾ ನಂದಸುತಾ। ಮಂದಮತಿಗೆ ಹೊಳೆದಂದದಿರಚಿಸಿ ರಘುನಂದನ ಗರ್ಪಿಸಿದೆನು ನಿರತಾ॥

ಶ್ರೀರಮಣಿ ಹೃತ್ಕಮಲ (ಗುಹನಭಕ್ತಿ-ಶ್ರೀ ತುಲಸೀರಾಮಾಯಣ)

ನಾಂದಿಪದ್ಯಗಳು:- ಶ್ರೀರಮಣಿ ಹೃತ್ಕಮಲ ಸೂರ್ಯನು। ದಾರಗುಣಗಣ ಕಿರಣ ನಘತಮ ಹಾರಿ ಸುಜ್ಞಾನ ಘನ ತೇಜೋರಾಶಿಯ ವಿನಾಶಿ॥ ನಾರದಾದಿ ಸಮಸ್ತ ಮುನಿಜನ ಸೂರಿಗಳ ಸುಜ್ಞಾನ ಜೋತಿಯಪಾರಮಹಿಮಾರಾಮ ಸೀತಾರಾಮ ರಕ್ಷಿಪುದು॥1॥ ನಾಗಭೂಷಣ ಸನಕ ನಾರದ ಯೋಗಿಜನ ಹೃತ್ಕುಮುದ ಚಂದ್ರವಿ। ರಾಗಿ ಕರುಣಾವಾರಿನಿಧಿ ಗಂಗಾಧರನೆ ಹರನೆ॥ ರಾಘವೇಂದ್ರವಿಲಾಸ ಸಂತಸ ರಾಗ ರಂಜನದೇವ ಶಿವ ಸುತ್ಯಾಗಿ ಗಿರಿಜಾರಮಣ ಪಾಲಿಸು ಸಕಲ ಲೋಕಗಳ॥2॥ ನಗುವ ಚಂದ್ರನ ಗರ್ವ ಮುರಿಯುತ। ಲೊಗುಮಿಗೆಯ ಪ್ರೇಮದಲಿ ಲೋಕವ ನಿಗಮನುತ ಕಾಯ್ದಾಗ್ಯೆ ಪರಿಹರಿಸುತಲಿ ವಿಘ್ನಗಳ॥ ಸಗುಣ ನಿಗುಣ ರೂಪ ಗಜಮುಖ ನಗೆಗೆಡೆಯ ಮಾಡದಿರು ಕರುಣದಿ ಸೊಗದೊಳೀವರ ಕಾವ್ಯ ನುಡಿಯಲು ನೀಡು ಸನ್ಮತಿಯ॥3॥

ಉಯ್ಯಾಲ ಲೂಗವಯ್ಯಾ ರಾಗ: ನೀಲಾಂಬರಿ-ಝಂಪೆತಾಳ

ಉಯ್ಯಾಲ ಲೂಗವಯ್ಯಾ॥ಪ॥ ಸಯ್ಯಾಟ ಪಾಟಲನು ಸತ್ಸಾರ್ವಭೌಮ॥ಅ.ಪ॥ ಕಮಲಜಾದ್ಯಖಿಲ ಸುರುಲು ನಿನು ಗೊಲ್ವ ವಿಮಲುಲೈನ ಮುನೀಂದ್ರುಲು ಧ್ಯಾನಿಂಪ ಕಮನೀಯ ಭಾಗವತುಲು ಗುಣಕೀರ್ತನಮುಲು ನಾಲಾಪಂಬುಲು ಸೇಯಗ॥1॥ ನಾರಾದಾದುಲು ಮೆರಯುಚು ನುತಿಯಿಂಪ। ಸಾರಮುಲು ಬಾಗವಿನುಚು ನಿನು ನಮ್ಮು ವಾರಲ ಸದಾ ಬ್ರೋಚುಚು ವೇದಸಾರಸಭಲನು ಜೂಚುಚು ಶ್ರೀರಾಮ॥2॥ ನವಮೋಹನಾಂಗುಲೈನ ಸುರಸತುಲು ವಿವರಮುಗ ಬಾಡಗ ನಾ ಭಾಗ್ಯಮಾ ನವರತ್ನ ಮಂಟಪಮುನ ತ್ಯಾಗರಾಜವಿನುತಾಕೃತಿ ಬೂನಿನ ಶ್ರೀರಾಮ॥3॥

ಮಂಗಲಂ ಕೋಸಲೇಂದ್ರಾಯ (ರಾಮಾಯಣ-ಮಂಗಳ)

ಮಂಗಲಂ ಕೌಸಲೇಂದ್ರಾಯ ಮಹನೀಯ ಗುಣಾಬ್ಧಯೇ। ಚಕ್ರವರ್ತಿ ತನುಜಾಯ ಸಾರ್ವಭೌಮಾಯ ಮಂಗಲಂ॥1॥ ವೇದವೇದಾಂತ ವೇದ್ಯಾಯ ಮೇಘಶ್ಯಾಮಲ ಮೂರ್ತಯೇ। ಪುಂಸಾಂ ಮೋಹನ ರೂಪಾಯ ಪುಣ್ಯ ಶ್ಲೋಕಾಯ ಮಂಗಲಂ॥2॥ ವಿಶ್ವಾಮಿತ್ರಾಂತ ರಂಗಾಯ ಮಿಥಿಲಾನಗರೀಪತೇ। ಭಾಗ್ಯಾನಾಂ ಪರಿಪಾಕಾಯ ಭವ್ಯ ರೂಪಾಯ ಮಂಗಲಂ॥3॥ ಪಿತೃಭಕ್ತಾಯ ಸತತಂ ಭ್ರಾತೃಭಿಃ ಸಹ ಸೀತಯಾ। ನಂದಿತಾಖಿಲಲೋಕಾಯ ರಾಮಭದ್ರಾಯ ಮಂಗಲಂ॥4॥ ತ್ಯಕ್ತ ಸಾಕೇತ ವಾಸಾಯ ಚಿತ್ರಕೂಟ ವಿಹಾರಿಣೇ। ಸೇವ್ಯಾಯ ಸರ್ವಯಮಿನಾಂ ಧಿರೋದಾರಾಯ ಮಂಗಲಂ॥5॥ ಸೌಮಿತ್ರಿಣಾ ಚ ಜಾನಕ್ಯಾ ಚಾಪಬಾಣಾಸಿಧಾರಿಣೇ। ಸಂಸೇವ್ಯಾಯ ಸದಾ ಭಕ್ತ್ಯಾ ಸ್ವಾಮಿನೇ ಮಮ ಮಂಗಲಂ॥6॥ ದಂಡಕಾರಣ್ಯ ವಾಸಾಯ ಖಂಡಿತಾಮರ ಶತ್ರವೇ। ಗೃಧ್ರರಾಜಾಯ ಭಕ್ತಾಯ ಮುಕ್ತಿದಾಯಾಸ್ತು ಮಂಗಲಂ॥7॥ ಸಾದರಂ ಶಬರೀ ದತ್ತ ಫಲಮೂಲಾಭಿಲಾಷಿಣೇ। ಸೌಲಭ್ಯ ಪರಿಪೂರ್ಣಾಯ ಸತ್ತ್ವೋದ್ರಿಕ್ತಾಯ ಮಂಗಲಂ॥8॥ ಹನುಮತ್ಸಮವೇತಾಯ ಹರೀಶಾಭೀಷ್ಟದಾಯಿನೇ। ವಾಲಿಪ್ರಮಥನಾಯಾಸ್ತು ಮಹಾಧೀರಾಯ ಮಂಗಲಂ॥9॥ ಶ್ರೀಮತೇ ರಘುವೀರಾಯ ಸೇತೂಲ್ಲಂಘಿತ ಸಿಂಧವೇ। ಜಿತರಾಕ್ಷಸರಾಜಾಯ ರಣಧೀರಾಯ ಮಂಗಲಂ॥10॥ ಅಸಾಧ್ಯ ನಗರೀಂ ದಿವ್ಯಾಮಭಿಷಿ ಕ್ತಾಯ ಸೀತಯಾ। ರಾಜಾಧಿರಾಜ ರಾಜಾಯ ರಾಮಭದ್ರಾಯ ಮಂಗಲಂ॥11॥ ಮಂಗಲಾ ಶಾಸನ ಪರೈರ್ಮದಾಚಾರ್ಯಾರ್ಯ ಪುರೋಗಮೈಃ। ಸರ್ವೈಶ್ಚ ಪೂರ್ವೈರಾಚಾರ್ಯೈಃ ಸತ್ಕೃತಾಯಾಸ್ತು ಮಂಗಲಂ॥

# 6. ಪ್ರತಿ ಶನಿವಾರದ ಶ್ರೀ ರಾಮಪೂಜೆ

ರಾಮ ಪೂಜೆಯ ಗೈದು

ರಾಮ ಪೂಜೆಯ ಗೈದು। ಸುಖಿಯಾಗೋ ಮನುಜಾ। ಕಾಮಿತಾರ್ಥವನಿತ್ತು। ಪೊರೆವನಿದು ಸಹಜಾ॥ಪ॥ ಅಂಗಜಾರಿಯ ಸಖನಿಗಾನಂದದಿಂದಲಿ। ಮಂಗಳವಪಾಡುತಲಿ। ಮಜ್ಜನಂಗೈದು। ಸಂಗದೂತನ ಸಖನ। ಲೋಕೈಕ ವಂದಿತನ। ಶೃಂಗಾರ ಪೀಠದಲಿ। ಕುಳ್ಳಿರಿಸಿ ಸ್ತುತಿಸಿ॥1॥ ನೀಲಕಂಧರ ಮಿತ್ರ ನಿಗಮಗೋಚರನಿಗೆ ಮೇಲಾದ ಪೀತಾಂಬರವನರ್ಪಿಸುತಲಿ ನೀಲಮೇಘಶ್ಯಾಮ ನಿತ್ಯಾನಂದನಿರುತನಿಗೆ। ಲೀಲೆಯಿಂದಲಿ ಗಂಧ ಕುಸುಮಗಳನಿತ್ತು ॥2॥ ಮೋಕ್ಷದಾಯಕ ಸಕಲ ರಾಕ್ಷಸಾಂತಕನಿಗೆ। ಅಕ್ಷತೆಯನ್ನರ್ಪಿಸುತಲಿ। ಯಕ್ಷಗಂಧರ್ವ ಸುರನರವಂದ್ಯ ರಾಮನಿಗೆ। ಲಕ್ಷ್ಮಣಾಗ್ರಜನಿಗಾಭರಣವಿತ್ತೋ॥3॥ ಸರ್ವರೂಪಕಲ್ಪಪಾವನ। ಚರಿತ ರಾಮನಿಗೆ। ತತ್ವಸ್ವರೂಪನಿಗೆ। ಧೂಪದೀಪಗಳಿಂ। ನಿತ್ಯ ತೃಪ್ತನಿಗೆ। ಪಾಯಸಪಂಚಭಕ್ಷಗಳಾ। ನಿತ್ತು ದಧಿಘೃತಸೂಪ ಪಕ್ವಾನ್ನಗಳನೂ॥4॥ ಚಿದ್ರೂಪನಾಗಿರುವ ಸಧರ್ಮನಿರುತನಿಗೆ। ಶುದ್ಧಾಚಮನಮಾ। ತಾಂಬೂಲಗಳನೂ। ನಿರ್ಧರಾಧಿಪನವನೀ। ರಾಜನವನೆನುತ। ಉದ್ಧಾರಮಾಡೆಂದುಪಾಡುತಲಿ ಮುದದೀ॥5॥ ಆದ್ಯಾಂತರಹಿತನಿಗೆ। ಸೀತಾಮನೋಹರಗೇ। ವೇದಾಂತವೇದ್ಯನಿಗೆ ಪುಷ್ಪಾಂಜಲಿಯನೂ ಸಾಧುಜನ ಪೋಷಕಗೆ। ಸರ್ವಕಾರಣನೀಗೆ। ಮೋದದಿಂದಲಿ ವಂದನೆಯನಿತ್ತು ಮುದದೀ॥6॥ ಮಂಗಳಾಂಗನಿಗೆ। ಅಂಗನಾಪ್ರೀತನಿಗೆ। ಮಂಗಳಾಷ್ಟಕರವ ಪಾಡುತಲಾರತಿಯ ನೆತ್ತಿ। ಸಂಗೀತಲೋಲಾ। ಮೃತಕಟಾಕ್ಷ ವಾಸನಿಗೆ। ಮಂಗಳವನಿತ್ತೆಂದು ಪೊರೆಯೆಂದು ಪಾಡೀ॥7॥

ರಾಮಾ ನಿನ್ನ ಪೂಜಿಪನು (ರಾಮಪೂಜಾ ಕಥೆ)

ರಾಮಾ ನಿನ್ನ ಪೂಜಿಪನು ಧನ್ಯನಹನೂ। ಕಾಮ ಕ್ರೋಧವೆಲ್ಲ ನೀಗಿ ಸುಖಿಸುವನೂ॥ಪ॥ ಹಿಂದೆ ಕೇಶವಭಟ್ಟನೊಬ್ಬ ಸತಿಯ ಸಹಿತದಿ ಇಂದಿರೇಶನ ನಂಬಿಕೊಂಡು ಸುಖದಿಂದಲಿರಲೂ। ತಂದ ಸೊಸೆಯ ಮಗನ ಸಹಿತ ಕಷ್ಟದಿಂದಲಿ ಅಂದು ಬಿಕ್ಷಕೆ ತಿರುಗುತಲಿದ್ದನು ಬಹಳ ಬಡತನದಿ॥1॥ ಹರಿಯು ವಿಪ್ರನ ವೇಷದಿಂದ ಇವನ ಕೇಳಲೂ ಅರುಹೆ ತನ್ನ ರೀತಿಯನ್ನು ಕೇಳಿ ನುಡಿದನು। ಕರುಣಾಮೂರ್ತಿ ರಾಮನನ್ನು ಪೂಜೆ ಮಾಡಲು ದುರಿತರಾಶಿ ಕಳೆದು ಸುಖಿಪೆ ಎಂದು ನುಡಿದನು॥2॥ ರಾಮ ಪೂಜೆಯ ಕ್ರಮವನ್ನು ತಿಳಿದು ಮನದಿ ಪ್ರೇಮದಿಂದ ಚಿಂತಿಸುತ್ತ ಭಿಕ್ಷೆಯ ಬೇಡುತಿರೆ। ಸ್ವಾಮಿ ದಯದಿ ಸಕಲ ವಸ್ತು ದೊರೆಯಲಾಗಲೇ ನೇಮದಿಂದ ಪೂಜೆ ಮಾಡಿ ಧನ್ಯನಾದನು॥3॥ ಪರಮ ಸೌಖ್ಯದಿಂದ ಇರುವ ಕೇಶವ ಭಟ್ಟನು ಹರನ ಪುರಕೆ ತೆರಳಲು ಸತಿಯ ಸುತನ ಕರೆದನು। ತರುಣಿ ಬರಲು ಸಾಧ್ಯವಿಲ್ಲ ಎಂದು ನುಡಿಯಲು ತರಳಗೆ ರಾಮ ಪೂಜೆಯ ಮಾಡೆ ಹೇಳಿ ಹೊರಟನು॥4॥ ಸುತನು ಪೂಜಿಸಿ ಕಥೆಯ ಹೇಳಿ ಮಾತೆಯ ಕರೆದನು ಕಥೆಯ ನಾಳೆ ಕೇಳಿದರಾಯಿತು ಎಂದು ಮಲಗಿದರು। ಪತಿತ ಪಾವನನ ಕರುಣ ಇವರಿಗೆ ತಪ್ಪಿಹೋಗಲು ಪತಿತರಂತೆ ಆಗಿ ಇವರು ಕಷ್ಟವ ಪಡುತಿರಲು॥5॥ ತಂದೆ ಬಂದು ಸ್ಥಿತಿಯ ನೋಡಿ ತರಳಗೆ ಪೇಳಿದನು ಇಂದೇ ನೀನು ತೆರಳಿ ರಾಮನ ಕಂಡು ಬರುವುದು। ಎಂದು ಮಗಳ ಸಹಿತದಿಂದ ಬರುತಾ ಮಾರ್ಗದಿ ಒಂದು ವಟುವಿಗೆ ಸುತೆಯನಿತ್ತು ಕಥೆಯ ಪೇಳಿದನು॥6॥ ಅಂಧ ರೈತ ಹೊಲದಿ ಕುಳಿತು ಕೂಗುತ್ತಿರಲು ಬಂದು ವಿಪ್ರ ರಾಮಕಥೆಯ ಪೇಳಿ ಪೋದನು। ಅಂದು ತನ್ನ ಸತಿಗೆ ಪೇಳಿ ಪೂಜೆಯ ಮಾಡಲು ತಂದೆಯ ದಯದಿ ಕಂಗಳು ಬರಲು ಹರುಷಪಟ್ಟನು॥7॥ ಮುಂದೆ ಬರುತ ಬಾಲೆಯೊಬ್ಬಳ ವಿವರವ ಕೇಳಿದ ತಂದೆ ರಾಮನ ಮಂದವಾರದಿ ಪೂಜಿಸೆನ್ನಲು। ಕಂದನ ಬರುವ ಕಾಣದೆ ಚಿಂತಿಪ ಮಾನಿನಿಗೆ ಪೇಳಿ ಅಂದು ದಾರಿಯ ಸರ್ಪರಾಜಗೆ ಕಥೆಯ ತಿಳಿಸಿದನು॥8॥ ಕೆರೆಯ ಕಟ್ಟೆಯು ಹರಿದು ಹೋಗಲು ಕಾರಣ ತಿಳಿಯೆನಲು ಹೊರಟು ಮುಂದೆ ಮರದ ಕೆಳಗೆ ಮೂರ್ಛೆಯ ಪೊಂದಿರಲು। ಹರಿಯು ವಿಪ್ರನ ವೇಷದಿಂದ ಬಂದು ಉಪಚರಿಸಿ ತೆರಳುವ ಮಾರ್ಗದಿ ವಿವರವನೆಲ್ಲ ಪೇಳಿ ಕಳುಹಿಸಿದ॥9॥ ಹರಿಯು ಪೇಳಿದ ಪರಿಯನ್ನು ರಾಜಗೆ ಪೇಳಿದನು ತರಳೆಯ ಅವಗೆ ಕೊಟ್ಟು ಲಗ್ನವ ಮಾಡಿ ಕಳುಹಿಸಿದ। ಉರಗವೆ ಹಣವ ದಾನವ ಮಾಡೆ। ಮುಕ್ತಿಯೆನ್ನಲು ತ್ವರಿತದಿ ವಿಪ್ರಗೆ ದಾನವ ಮಾಡೆ ಕೊಂಡು

ಹೊರಟನು||10|| ರಾಮರಾಜ ಕರೆದು ದಾನವ ಮಾಡೆ ಭೂಸುರನು ಪ್ರೇಮದಿಂದ ತೆಗೆದುಕೊಂಡು ಮುಂದೆ ನುಡಿದನು| ಕಾಮಿನಿ ಬಾಲೆಗೆ ವಿವರವ ಪೇಳೆ ಸಂತೋಷದಿಂದಲಿ ಕಾಮಿಸಿಹೆ ನಿಮ್ಮನೆನಲು ಕರವ ಪಿಡಿದನು||11|| ಕಂಗಳನ್ನು ಕರುಣಿಸಿದ ವಿಪ್ರನ ಕಂಡು ರಂಗಗೆ ಪ್ರೀತಿಮಾಡೆ ಭೂಮಿ ದಾನವ ಮಾಡಿದನು| ಮಂಗಳ ಮೂರ್ತಿ ರಾಮನ ಪೂಜೆಗೆ ಮಗಳು ಅಳಿಯನಾ ಸಂಗಡ ಕರೆದು ತಂದು ಸಕಲರ ಕೂಡಿ ಪೂಜಿಸಲು||12|| ಇಂದಿರೇಶನು ದರುಶನವೀಯೆ ಸಕಲ ಭಕ್ತರು ಅಂದು ಸ್ತುತಿಯ ಮಾಡಿ ಜನರು ಧನ್ಯರಾದರು| ತಂದೆ ನಿತ್ಯಾನಂದ ವಿಠಲನ ಸತತವು ಪೂಜಿಸಿ ಮಂದವಾರದ ರಾಮನ ಕಥೆಯ ಕೇಳಿ ಸುಖಿಸಿರಿ||12||

ಗಜಮುಖನಂಘ್ರಿಯನೆರಗುವೆನು (ಶ್ರೀರಾಮಕಥೆ)

ಗಜಮುಖನಂಘ್ರಿಯನೆರಗುವೆನು ಹರುಷದಿಂ| ದಜನರಸಿಯ ಸ್ತುತಿಸುವೆನು| ಭಜಗಶಯನ ರಾಮಚಂದ್ರನ ಚರಣವ| ಭಜಿಸಿಕೊಂಡಾಡುವೆನು ನಾನು|| ಗಜಚರ್ಮಾಂಬರ ಗೌರೀಕಾಂತನೆ| ರಜತಾದ್ರಿವಾಸ ಶಂಕರನೇ| ಸುಜನಾಭಿರಾಮ ನಂಗಜವೈರಿ ಕರುಣದಿ| ನಿಜಮತಿ ಇತ್ತೆನ್ನ ಪೊರೆಯೈ|| ದಶರಥ ನಂದನ ದಾನವ ಭಂಜನ| ಕುಶಿಕ ತನುಜ ಮುಖರಕ್ಷ| ಶಶಿಮುಖಿ ಸೀತಾಕಾಂತನ ಮಹಿಮೆಯ| ನೊಸೆದು ಪೇಳುವೆ ಕೇಳಿರೆಲ್ಲ|| ರಾಮರಾಕ್ಷಸ ನಿರ್ನಾಮ ಸಜ್ಜನ ಪ್ರೇಮ| ಭೂಮಿಜೆನಾಥ ಪಾಲಿಸಿದಾ| ಶ್ರೀಮದಯೋಧ್ಯಾ ರಾಜ್ಯದಲ್ಲಿದ್ದುದು| ಹೇಮಪುರೀ ಎಂಬ ಗ್ರಾಮ|| ಕೇಶವ ಭಟ್ಟನೆಂಬುವ ಭೂಸುರನೋರ್ವ| ವಾಸಿಸುತಿರ್ದನಾಪುರದಿ| ಆಶಾಪಾಶವಿಮುಕ್ತ ನಿರ್ಮಲಚಿತ್ತ| ಶ್ರೀಷನ ದಾಸನಾಗಿರ್ದ|| ಹುಲ್ಲಿನ ಮನೆಯಲ್ಲಿ ವಾಸಿಪನಾವಿಪ್ರ| ಬಲ್ಲಿದ ದಾರಿದ್ರ್ಯದಿಂದ| ಸುಲ್ಲಲಿತಾಂಗ ಶ್ರೀರಾಮನ ನಾಮವ| ನಲ್ಲಿ ಕೊಂಡಾಡಿ ಪಾಡುವನು|| ಗೌರಿಯು ಧೂರ್ತನಾಗಿಹಳಾತನರಸಿಯು| ಕ್ರೂರವಾಕ್ಯಗಳ ನಾಡುವಳು| ನಾರಾಯಣ ಭಟ್ಟನೆಂಬ ಪುತ್ರನ ಕೂಡಿ| ಶ್ರೀರಮಣನ ಪಾಡುತಿಹನು|| ಪ್ರತಿದಿನ ವರುಣೋದಯಕೆದ್ದು ವಿಪ್ರನು| ರತಿಪತಿ ಪಿತನನು ಸ್ಮರಿಸಿ ಅತಿಶಯದಿಂದಲಿ ಪುಷ್ಪಪತ್ರಗಳನ್ನು| ಮತಿವಂತ ತರುವನಾಲಯಕೆ|| ಭಾವಶುದ್ಧಿಗಳಿಂದ ದೇವರ ಮನೆಯನು| ಆ ವಿಪ್ರನುಡುಗಿ ಸಾರಿಸುವ| ಶ್ರೀವರ ನೀನೇ ಗತಿಯೆಂದು ಪಾಡುತ| ದೇವರ ಮನೆಯ ಸಿಂಗರಿಪ|| ಶೀಘ್ರದಿಂದಲಿ ಸ್ನಾನವ ಮಾಡಿ ಹರುಷದಿಂ| ದಾಗ ಜಪತಪಗಳನಡೆಸುತಾ ಗೋದಕವ ತಂದಿರಿಸಿ ಸಮಸ್ತ| ಸಾಮಗ್ರಿಗಳನಣಿಪಡಿಸಿ|| ಪರಮಾತ್ಮ ರಾಮನೆ ಪೊರೆಯೆಂದು ದ್ವಿಜವರ| ಉರಗಶಯನನ ಪೂಜೆಗೈದು| ಕರುಣಾಕರನೆ ಕಾಮಿತದಾತ ಸಲಹೆಂದು| ಕರಿರಾಜ ವರದನ ಭಜಿಪ|| ಅತಿಕ್ಲೇಶ ದಾರಿದ್ರ ಸಹಿತನಾದರು ಬಂ| ದತಿಥಿ ಅಭಾಗ್ಯತರ ಸೇವೆ| ಮತಿವಂತನ ಹಿತದಿಂದ ಗೈಯುತಲಿರೆ| ಸತಿಯುತಾ ಸಹಿಸಳಾವ್ರತವ|| ಕೆಲವು ಕಾಲವು ಈ ಪರಿಯಿಂದ ಕಳೆಯಲು| ಜಲಜನಾಭನು ಮನಒಲಿದು| ತೊಲಗಿದಾರಿದ್ರವು ಸಂಪದ ವಾಗಲೆಂದು| ಕಲುಷಹರಣ ವರವಿತ್ತು|| ವಿಪ್ರನ ಪರ್ಣಮಂದಿರ ವಿಂದ್ರ ಗೃಹದಂತೆ| ಚಪ್ಪರ ಚಂದ್ರಶಾಲೆಗಳಿಂ| ದೊಪ್ಪಿತು ಧನಧಾನ್ಯ ವಸ್ತುವಾಹನದಿಂದ| ಸುಪ್ರಸಿದ್ಧಿಯ ಪೊಂದಿಜಗದಿ|| ಪ್ರಕಟಿತ ಶನಿವಾರ ಶ್ರೀರಾಮ ವ್ರತಗೈದು| ನಿಖಿಲ ರಾಮರ ಕೃಪೆಯಿಂದ| ಸಕಲೈಶ್ವರ್ಯದಿ ಶ್ರೀರಾಮ ಭಕ್ತರು| ಸುಖಿಸುತ ಲಿರ್ದರು ಮುದದಿ|| ಕಳೆಯಲು ಹಲವು ಕಾಲಗಳೀಪರಿಯಿಂದ| ಕಲುಷಹರಣ ಗಂಗಾಸ್ನಾನ| ಜಲಜನಾಭನ ಸಖ ವಿಶ್ವೇಶ್ವರದರ್ಶನ| ಕೊಲಿದು ಮನವ ತಾ ಗೈದಾ|| ಧರೆಯೊಳಗುತ್ತಮ ಪುರವೆನಿಪಾಕಾಶಿ| ವರಯಾತ್ರೆ ಮಾಡಬೇಕೆಂದು| ಪೊರಟನು ಕೇಶವ ಭಟ್ಟನೆಂಬುವ ವಿಪ್ರ| ಕರೆದು ಪೇಳಿದನು ಪುತ್ರನಿಗೆ|| ಲಾಲಿಸು ತನಯನೆ ಶ್ರೀರಾಮ ಚಂದ್ರನ| ಲೀಲೆಯಿಂದರ್ಚಿ ಸುತಲಿರುನೀ| ಮೇಲೆನಿಪಾಶನಿವಾರದ ವ್ರತವನು| ಬಾಲನೆ ಬಿಡಬೇಡ ನಡೆಸೈ|| ದಶರಥನಂದನ ದಶಶಿರಭಂಜನ| ಋಷಿಸತಿ ಶಾಪಹಾರಕನ| ಪಶುಪತಿ ಮಿತ್ರ ಶ್ರೀರಾಮನ ಭಜಿಸಲು| ವಿಷದ ಮಪ್ಪುದು ಸುಖವೆಂದ|| ಪೊರಮಡುವೆನು ನಾನು ವರಕಾಶಿಯಾತ್ರೆಗೆ| ತರಳನೆ ಮರೆಯದೆ ನೀನು| ಪರಮ ಪುರುಷ ದುರಿತಾರಿ ಶ್ರೀರಾಮನ| ಸ್ಮರಿಸಿ ಪೂಜಿಪುದನವರತ|| ಭಕ್ತಾಗ್ರಣಿ ವಿಪ್ರನೀರೀತಿ ಪೇಳುತ್ತ| ಮತ್ತೆಯಾತ್ರೆಗೆ ಪೊರಮಡಲು| ಪುತ್ರನಾರಾಯಣಭಟ್ಟ ಸಮ್ಮೋದದಿ| ಪಿತ್ರಾಜ್ಞೆಪಾಲಿಸುತ್ತಿದ್ದ|| ಇರುತಿರೆ ಸುಖದಲ್ಲಿ ಮತ್ತೊಂದು ದಿನ ವಿಪ್ರ| ವರ ಶನಿವಾರದ ವ್ರತವನು| ಪರಮ ಭಕ್ತಿಯೊಳಾಚರಿಸುತನಾತನು| ಕರೆದನು ಮಾತೆಯ

ಮುದದಿ।। ಜನನಿಯೆ ಲಾಲಿಸೆನ್ನನುಪಮವಾಗಿಹು। ದಿನವಂಶ ತಿಲಕನ ಕಥೆಯು। ವಿನಯದಿಂದಲಿ ನಾ ಪೇಳುವೆ ಕೇಳೆಂದು। ತನಯನು ಪೇಳಿದನಾಗ।। ಕಂದ ಕೇಳೀಗ ನೀ ಮಂಗಳಾರತಿಗೈದು। ಮುಂದೆ ಭೋಜನವ ಮಾಡವುದು। ಬಂದಿದೆ ವ್ಯಾಧಿಯೆಂದನೃತವ ನಾಡುತ। ಮಂದಬುದ್ಧಿಯಲಿ ಪೇಳಿದಳು।। ಹರಿಯ ಚರಿತ್ರೆಯ ಜರಿದು ಪೇಳಲು ಮಾತ। ನರಿತು ವಿಪ್ರನು ಮನನೊಂದಾ। ತ್ವರಿತದಿಂದಲಿ ಮಂಗಳಾರತಿ ಗೈದುತಾ। ನೆರಗಿದ ಹರಿಯ ಚರಣಕ್ಕೆ।। ಮತ್ತೆ ಸಂಧ್ಯಾಕಾಲ ಒತ್ತಿಬಂದುದು ವಿಪ್ರ। ನಿತ್ಯಕರ್ಮಗಳನ್ನು ಗೈದು। ಮತ್ತೆ ಮಾತೆಗೆ ರಾಮ ಕಥೆಯ ಪೇಳುವೆನೀಗ। ಚಿತ್ತೈಸಬೇಕೆಂದು ನುಡಿದ।। ಮಗನೆ ಕಥೆಯ ಕೇಳೆ ಸಮಯವಿದಲ್ಲವಿ। ನ್ನೊಗುಮಿಗೆ ಯಾಗಿರ್ದೆಬದುಕು। ಸೊಗಸು ತೋರದು ಎನ್ನ ಮನಕೆ ರಾಮನ ಕಥೆ। ಮುಗಿಸುತೇಳಿನ್ನು ಭೋಜನಕೆ।। ಸಿಂಧು ಶಯನ ರಾಮಚಂದ್ರನ ನಿಂದಿಪ। ಮಂದಮತಿಯನರಿತು ವಿಪ್ರ। ನೊಂದನು ಮನದಿ ತಾನೊಂದು ಮಾತಾಡದೆ। ಬಂದನು ಭೋಜನಕಾಗಿ।। ಮರುದಿನದುದಯದಲೆದ್ದು ನೋಡಿದ ವಿಪ್ರ। ಹರಿಯಿತು ಸಂಪದವೆಲ್ಲಾ। ಮೆರೆವ ಮಂಗಳ ಗೃಹ ಮಾಯಾತಾನಾದುದು। ಸ್ಥಿರವಾದುದು ಪರ್ಣಗೃಹವು।। ರೂಢಿಸಿ ಬಂದಿಹ ದಾರಿದ್ರವೆಲ್ಲವ ನೋಡಿದನಾ ವಿಪ್ರತಾನು। ಮೂಢಮತಿಯಿಂದಲಿ ಶ್ರೀರಾಮ ನಿಂದೆಯ। ಮಾಡಿದ ಫಲವೆಂದು ತಿಳಿದಾ।। ಮನೆಯಿಂದ ಪೊರಮಡುತಿಹ ಕುವರನ ನೋಡಿ। ವನಿತೆಯು ತಾನು ಪೇಳಿದಳು। ಮನೆಯಲ್ಲವರಸಲು ಕಾಣೆನು ಕಾಳಕ್ಕಿ। ತನಯ ಮುಂದೇನು ಮಾಡುವುದು।। ಪೆತ್ತ ಮಾತೆಯ ಮಾತಿಗುತ್ತರ ಪೇಳದೆ। ಮತ್ತೆ ಶುಕ್ಲವೃತ್ತಿಗಾಗಿ। ಮೃತ್ತಿಕಾ ಪಾತ್ರೆಯ ಹಸ್ತದಿ ಹಿಡಿಯುತ। ಸತ್ಯಶೀಲನು ಪೊರೆವಂಟಾ।। ನಿತ್ಯವು ಶುಕ್ಲ ವೃತ್ತಿಯಗೈದು ತರುವನು। ಹೊತ್ತು ಹತ್ತಿಗೆ ಗ್ರಾಸವನು। ನಿತ್ಯ ನಿರಂಜನ ರಾಮದೂಷಣೆಯಿಂದ। ಲೊತ್ತಿ ಬಂದುದು ಕಷ್ಟಜಾಲ।। ಯಾತ್ರೆಯ ಮಾಡಿಕೊಂಡಾತ ಕೇಶವಭಟ್ಟ। ತೀರ್ಥಕಾವಡಿ ಸಹಿತ ಬಂದು। ನೂತನ ಪರ್ಣಶಾಲೆಯ ನೋಡಿ ಮನದಲ್ಲಿ। ಕಾತರನಾದನಾವಿಪ್ರ।। ಕೆದರಿದ ಮಂಡೆಯಿಂದೊದರಿದರು ದುರುವ। ಮುದುರಿದ ಸೀರೆಯ ಧರಿಸಿ। ಸುದತಿಯ ಕುಂಕುಮವಳಿಸಿದ ಫಲದಿಂ। ದೆದುರಲ್ಲಿ ಬಂದು ನಿಂತಿರಲು।। ಮಾನಿನಿ ನಿನ್ನಯ ಹೀನ ವೃತ್ತಿಗಳಿಂದ। ಲೇನು ಪ್ರಮಾದಗೈದಿಹೆ ನೀ। ಶ್ರೀನಾಥರಾಮತಾನಿತ್ತ ಸಂಪದಗಳ। ನೇನ ಮಾಡಿದೆ ನುಡಿಯೆಂದ।। ಮೃತ್ತಿಕಾ ಪಾತ್ರೆಯ ಪಿಡಿದೈತರುತಲಿರ್ದ। ಪುತ್ರನ ಕಂಡು ಕೇಳಿದನು। ಹಸ್ತದೊಳೇತರೆ ಶುಕ್ಲವೃತ್ತಿಯ ಭಾಂಡ। ಚಿತ್ತದೊಳೇನುನುತಾಪ।। ಬಂದಿಹ ಕಷ್ಟವ ತನಯ  ತಾ ಪೇಳಲು। ಕಂದ ನೀನು ಪೋಗಿ ರಾಮ। ಚಂದ್ರನ ಕಾಣುತ ಭಕ್ತಿಯಿಂ ಸೇವಿಸಿ। ಹಿಂದಿನೈಶ್ವರ್ಯವ ಪಡೆಯೈ।। ತಂದೆಯ ಪಾದಾರವಿಂದಕೆ ವಂದಿಸಿ। ನಿಂದಿಹ ಮಾತೆಗೆ ನಮಿಸಿ। ಬಂದನು ತನ್ನಯ ಪತ್ನಿಗೀ ವಾರ್ತೆಯ। ನೆಂದು ತಿಳಿಸಲು ವಿಪ್ರವರನು।। ಲಾಲಿಸು ಪ್ರಿಯೆ ನೀನೀ ಬಾಲೆ ಸುಶೀಲೆಯ। ಪಾಲನೆಯನು ಮಾಡುತಿಹುದು। ಶ್ರೀಲೋಲರಾಮನ ಕರುಣದಿಂ ವರಪೊಂದಿ। ಆಲಯಕೈದುವೆನೆಂದಾ।। ಹೊಟ್ಟೆಗಿಲ್ಲದೆ ನಾವು ಬಟ್ಟ ಬಯಲಿನಲಿ। ಕಷ್ಟದಲ್ಲಿರುತಿಹೆವೀಗ। ಇಷ್ಟದ ಮಗಳನು ನಾನೆಂತು ಸಲಹಲಿ। ಬಿಟ್ಟಿರುವೆನು ನಿಮ್ಮ ಜತೆಗೆ।। ನಗುತ ಪೇಳಿದ ವಿಪ್ರ ಸೊಗಸಾದುದು ಕೇಳು। ಸುಗುಣಾಭಿರಾಮ ಗುಣಧಾಮ। ಅಘಹರ ರಾಮನ ಕರುಣ ಒಂದಿರಲಾಗಿ। ಮಗಳ ಪೋಷಣೆಯ ಗೈಯ್ಯುವೆನು।। ಇಷ್ಟದ ಕುವರಿಯ ನೊಡಗೊಂಡು ವಿಪ್ರನು। ಬಿಟ್ಟನು ಗ್ರಾಮವಾಸವನು। ಕಟ್ಟಡವಿಗಳನ್ನು ದಾಟುತ್ತ ರಾಮನೊಳ್। ನೆಟ್ಟ ಮನಸಿನಲಿ ಮುಂಬಂದ।। ಬರುತದಾರಿಯಲೊಂದು ಪುರವಾಸಿಗಳ ನೋಡಿ। ವರಿಸಿರಿ ಬಾಲೆಯ ನೆನಲು। ಸರಸದೊಳವರಪಹಾಸ್ಯವ ಗೈಯುತ। ಪರಿಪರಿಯಾಗಿ ಪೇಳಿದರು।। ಸಿರಿವರ ರಾಮ ಕಟಾಕ್ಷವು ಫಲಿಸಲು। ದುರಿತಗಳಿನ್ನು ನಿಲ್ಲುವುದೆ। ತರಳೆಯ ನೊಬ್ಬರು ವರಿಸಲೊಲ್ಲರು ಎನ್ನ। ಪೊರೆಯೈಶ್ರೀರಾಮ ನೀನೆಂದಾ।। ಬರುತಿಹ ಮಾರ್ಗದಿ ಸರಸಿಯ ತೀರದಿ। ನೆರೆಯುತ ವರವಿಪ್ರರೆಲ್ಲಾ। ವರವೇದ ಘೋಷವ ಮಾಡುತಲಿರಲಾಗ। ತ್ವರಿತದಿ ಬಂದ ತಾನಲ್ಲಿ।। ನೆರೆದ ವಿಪ್ರರಿಗೆಲ್ಲ ಕರಗಳ ಮುಗಿಯುತ। ವರಸಿರಿ ಕುವರಿಯ ನೆನಲು। ತರುಣನೊಬ್ಬನು ತಾಂ ವರಿಸುವೆನೆನಲಾಗಿ। ಹರುಷ ತಾಳ್ದನು ವಿಪ್ರವರನು।। ಶ್ರೀಲೋಲರಾಮನ ಧ್ಯಾನಿಸಿ ವಿಪ್ರನು। ಲೀಲೆಯಿಂದಲಿ ಗೃಹ ಮೈತ್ರಿ। ಬಾಲೆಗುವರನಿಗು ತಾಳಿಕೆ ಮಾಡಲು। ಮೇಲೆನಿಸಿತು ಶುಭಯೋಗ।। ಜನಬಲವೆನಗಿಲ್ಲ ಧನಬಲ ಮೊದಲಿಲ್ಲ। ಇನಕುಲತಿಲಕ ಶ್ರೀರಾಮ। ಘನಮಹಿಮನೆ ಕರುಣಾಕರ ಶ್ರೀಕರ। ಮನಸಿನಭೀಷ್ಟವ ಸಲಿಸೈ।। ತರಳೆಯ ಲಗ್ನವನೆಂತು ನಾಗೈಯುವುದು। ಕರುಣಾಳು ನೀನುಪೇಕ್ಷಿಸಲು।

ದುರಿತಾರಿ ಪರಮಾತ್ಮ ಪೊರೆಯೆಂದು ಮೊರೆಯಿಡೆ। ವರವಿತ್ತನಾಗ ಶ್ರೀಹರಿಯು।। ಕ್ಷೀರಾಬ್ಧಿಯಿಂದಲಿ ನಡೆತಂದ ಳಿಂದಿರೆ। ಚಾರುಹಸೆಮಣೆಯ ಸಿಂಗರಿಸೆ। ಸೂರ್ಯಚಂದ್ರರು ಬಂದು ದೀಪಸ್ಥಂಭಗಳಾಗಿ। ರಾರಾಜಿಸುತಿರ್ದರಲ್ಲಿ।। ಶೃಂಗಾರವಾಗಿಹ ರಂಗವಲ್ಲಿಗಳಿಂದ। ರಂಗಮಂಟಪವೆಸೆದಿರಲು। ಅಂಗನೆ ಶಾರದೆ ಬಂದು ಸನ್ಮೋದದಿ ಮಂಗಳ ಗಾನಹಾಡಿದರು।। ಇಂದ್ರನರ ಮಣಿಯು ಚಂದ್ರನ ರಾಣಿಯು। ನಿಂದಾಗಲಾಶೀರ್ವದಿಸೆ। ಚಂದ್ರಶೇಖರನರ್ಧಾಂಗಿ ಪಾರ್ವತಿ ತಾನು। ಬಂದಾಗಲಾಶೀರ್ವದಿಸೆ।। ಇಂತು ವೈಭವದಿಂದ ದೇವಗಣಂಗಳು ಸಂತೋಷದಿಂದ ಲಗ್ನವನು। ನಿಂತು ಸನ್ಮೋದದಿ ವಿರಚಿಸುತಾಕ್ಷಣ। ಅಂತರ್ಧಾನವನೆ ಪೊಂದಿದರು।। ನಾರಾಯಣಭಟ್ಟ ಕರೆದು ಜಾಮಾತನ। ಶ್ರೀರಾಮ ಚಂದ್ರನ ವ್ರತವ। ಭೂರಿ ಸಂತೋಷ ದಿಂಗೈವುದು ನೀವೆಂದು। ಸಾರುತ ಮುಂದೆ ಪೊರವಂಟಾ।। ಕರುಣಾಳು ರಾಮನ ಸ್ಮರಿಸುತ ಬರುತಿರೆ। ತರುಣಿಯ ನೋರ್ವಳ ನೋಡಿ। ಭರದಿ ವಿಪ್ರೋತ್ತಮ ದುಗುಡವೇನೆನಲು ತಾ। ನೆರಗಿ ಪೇಳಿದಳು ಬಾಲಕಿಯು।। ಅನುರೂಪನಾಗಿಹ ವರನನು ಕಾಣದೆ। ಮನದಿ ಚಿಂತಿಸುವೆನೆಂದೆನಲು। ಶನಿವಾರ ರಾಮವ್ರತವನೇ ಗೈದರೆ। ನಿನಗಿಷ್ಟ ಸಿದ್ಧಿಪುದೆಂದಾ।। ಬರುತಿಹ ಮಾರ್ಗದಿ ಮುಂದೋರ್ವ ಶೂದ್ರನು। ಕರಪದನಯನಗಳಿಲ್ಲದೆ। ಧರಣಿಯೊಳುರುತರಕ್ಲೇಶವ ಪಡುತಿರೆ। ಕರೆದು ಪೇಳಿದ ರಾಮವ್ರತವ।। ಹರುಷದಿಂದಲಿ ಶೂದ್ರ ಕಥೆಯ ತಾನಾಲಿಸೆ। ಕರಪದ ನಯನಗಳೆಲ್ಲ। ತ್ವರಿತದಿ ಬಂದುದ ನೋಡಿ ವಿಸ್ಮಿತನಾಗಿ। ಪೊರಟ ಮುಂದಕೆ ವಿಪ್ರವರನು।। ಇಂತುಮುಂದಕೆ ಮಾರ್ಗಕ್ರಮಿಸುತಲಾವಿಪ್ರ। ನಿಂತೊಂದು ಗೃಹದ ದ್ವಾರದಲಿ। ಚಿಂತಿಸುತಿದ್ದೋರ್ವ ನಾರಿಯ ಕಾಣುತ। ಎಂತು ವ್ಯಾಕುಲ ನಿನಗೆಂದಾ।। ಸ್ವಾಮಿ ಲಾಲಿಸಿರೆನ್ನ ಪತಿಯು ಕಾಶಿಗೆ ಪೋಗೆ। ಪ್ರೇಮದ ಪುತ್ರನು ತಾನು। ಭೂಮಿಯೊಳೆಲ್ಲಿಹನೆಂಬುದನರಿಯದೆ। ನಾನತಿ ಇಲ್ಲಿ ಚಿಂತಿಸುವೆ।। ನಿತ್ಯ ಭಿಕ್ಷಾನ್ನಕೆ ಪೋಗಿ ಬರುತಲಿರ್ದ। ಪುತ್ರನ ಕಾಣೆನೆಂದೆನಲು। ಮತ್ತೆ ರಾಮನ ವ್ರತವನ್ನು ಪದೇಶಿಸು। ತುತ್ತಮವಿದು ನಡೆಸೆಂದ।।ಬರುತ ಮಾರ್ಗದೊಳೆಂದ ಉರಗೇಂದ್ರ ತಾನು ಸಂ।ಚರಿಸಲಾರದೆ ಇರುತಿರಲು। ಕರೆದು ಕೇಳಿದ ವಿಪ್ರ ಕಾರಣವೇನೆಂದು। ಭರದಿ ಪೇಳಿದ ಫಣಿಪತಿಯು।। ಲಾಲಿಸು ವಿಪ್ರನೆ ರಾಮನಾಣತಿಯಿಂದ। ಏಳುಕೊಪ್ಪರಿಗೆಯ ಧನವ। ಪಾಲಿಸುತಿರ್ಪೆನು ಕರ್ತನ ಕಾಣದೆ। ಶ್ರೀಲೋಲನೆಂದು ಕರುಣಿಪನೋ।। ವರವಿಪ್ರಮೋದದಿ ಶ್ರೀರಾಮವ್ರತವನು। ಹರುಷದಿಂದೊರೆದು ಫಣಿಪತಿಗೆ। ಸ್ಮರಿಸುತಲಿರು ನೀನು ಪರಮಾತ್ಮ ರಾಮನ। ಬರುವೆನಾನೆಂದು ಮುಂಬರಿದ।। ಮುಂದೆ ಬರುತ ವಿಪ್ರ ಕಂಡೊಂದು ನಗರಿಯ। ವಂದಿಪರಾಜನ ನೋಡಿ। ಸಂದೇಹವೇನು ಪೃಥ್ವೀಶನೆ ಮನದಲಿ। ನೊಂದಿರುವಂತೆ ತೋರುವುದು।। ಭೂನಾಥ ಪೇಳಿದ ತಾನಾಗೆ ವಿನಯದಿ। ನಾನೊಂದು ಸರಸಿಯ ರಚಿಸಿ। ನಾನೇನು ಮಾಡಲು ನಿಲ್ಲದು ಜಲರಾಶಿ। ಕಾಣೆನುಪಾಯನದಕೆ।। ರಾಮವ್ರತವನು ತಿಳಿಸುತ ಮೋದದಿ। ಪ್ರೇಮದಿ ನಡೆದು ಭೂಪಾಲ। ಸ್ವಾಮಿಕಟಾಕ್ಷದಿ ಶುಭವ ಪೊಂದುವೆಯೆಂದು। ತಾಮುಂದೆ ಪೊರವಂಟನಾಗ।। ಕಂದಿಕುಂದುತ ಮುಂದಡಿಯಿಡಲಾರದೆ। ನೊಂದು ಘೋರಾರಣ್ಯದಲ್ಲಿ। ತಂದೆ ನೀ ಸಲಹೆಂದು ರಾಮನ ಬೇಡುತ। ಲಂದು ಮೊರೆಯಿಡುತ್ತಿದ್ದವಿಪ್ರ।। ಸುಂದರ ಶ್ರೀರಾಮ ಚಂದ್ರನು ಭಕ್ತಗೆ। ಸಂದರದರುಶನವ ಕುರುಣಿಸಲು। ಚಂದದಿಂದಲಿ ವೃದ್ಧ ಬ್ರಾಹ್ಮಣವೇಷದಿ। ಬಂದನಾವಿಪ್ರನಿದ್ದೆಡೆಗೆ।। ಶ್ರೀನಾಥ ಪೇಳಿದ ಮಾನ್ಯ ಭೂಸುರ ನೀನು। ಕಾನನ ಕೈತಂದುದೇನು। ನಾನು ಶ್ರೀರಾಮನ ಕಾಣಲು ಬಂದೆನು। ನೀನೇತಕಿಲ್ಲಿಗೈತಂದೆ।। ಆವ ಶ್ರೀರಾಮನ ನರಸುತ್ತಲಿರುವೆಯೊ। ನಾನವನೆಂದು ಭಾವಿಪುದೆಂ। ದಾವೃದ್ಧ ಪೇಳಲು ಹಾಸ್ಯಗೈವಿರಿ ಎಂ। ದಾವಿಪ್ರನಂದು ತಾ ನುಡಿದ।। ನಿರ್ಮಿಸಿದನು ತಾನಲ್ಲಿ ವೈಕುಂಠವ। ಧರ್ಮವತ್ಸಲ ಸೀತಾರಾಮ। ನಿರ್ಮಲ ಚಿತ್ತನ ಕರೆದು ಪಚರಿಸುತ। ಸಮ್ಮತಿಯೂಟ ಕೇಳೆಂದ।। ಉಧದಿಶಯನ ಶ್ರೀರಾಮನ ಕಾಣದೆ। ಉದಕಪಾನವನು ನಾನೊಲ್ಲೆ। ಮುದದಿಂದ ದಾರಿಯ ಬಿಡಿಮುಂದೆ ಪೋಪೆನೆಂ। ದೊದರುತಲೆದ್ದನಾ ವಿಪ್ರ।। ಭಕ್ತನೆದ್ದುದಕಂಡು ಮುಕ್ತದಾಯಕ ಸರ್ವ। ಶಕ್ತನು ನೈಜರೂಪವನು। ಅರ್ಥಿಯಿಂ ತೋರಿಸಿ ಹರುಷದಿ ವರಗಳ। ನಿತ್ತ ಪೆ ಬೇಡು ನೀನೆಂದಾ।। ಮಂದಹಾಸದಿ ವಿಪ್ರ ತಂದೆ ಶ್ರೀರಾಮ ನೀ। ನೊಂದು ವರವೀಯಲು ಬೇಡ। ಬಂದಪೆ ನಿನ್ನೊಡನೆನುತ ಮುದದಿ ತಾ। ನಂದು ನಮಿಸಿದ ವಿಪ್ರವರನು।। ಬಿಸಜಲೋಚನ ರಾಮ ಪೇಳಿದ ಭಕ್ತನೀ। ನೆಸಗಬೇಡೈ ಛಲವನ್ನು। ವಸುಮತಿಯಲಿ ವಿಧಿಯಾನತಿಯಂತೆ। ನೀ ವಸಿಸಲು ಬೇಕು ಕೇಳೆಂದ।। ರಾಮವ್ರತದ

ಮಹಿಮೆಯ ನೀ ಮಹಿಯೊಳು। ಪ್ರೇಮದಿ ವಿಸ್ತಾರಗೈದು। ರಾಮನಾಮವ ಸ್ಮರಿಸುತಲಿರು ಮೋದದಿ। ಕಾಮಿತವಪ್ಪುದೆಂದನುತಾ।। ಭಕ್ತವತ್ಸಲ ರಾಮನಾಡಿದ ನುಡಿಕೇಳಿ। ಭಕ್ತಶಿರೋಮಣಿ ವಿಪ್ರ। ಮತ್ತೆನಗೆ ಮಾರ್ಗದಿ ದೊರೆತವರಿಗೆನಾ। ನುತ್ತರವೇನು ಪೇಳುವುದೈ।। ಸರಸಿಯ ನಿರ್ಮಿಸಿದರಸಿನ ಕುವರಿಯ। ವರಿಸುವುದೈ ವತ್ಸ ಮುದದಿ। ತರುಣಿಯ ಮನದಳಲಿಗೆ ಒಡೆಯುತಲಿರ್ಪು। ದರಸ ನಿರ್ಮಿಸಿದ ತಟಾಕ।। ಭಕ್ತಗೆ ಲಾಲಿಸು ಸರ್ಪೇಂದ್ರ ಕಾದಿಹ। ಸಪ್ತಮ ಧನರಾಶಿಗಳನು। ಮತ್ತೆ ಸ್ವೀಕರಿಸುತ ಉರಗಪತಿಯನು। ಮುಕ್ತನ ಗೈವುದು ನೀನು।। ಭಿಕ್ಷಾನ್ನದವಟು ಪೃಥ್ವೀಶನಾಗಿ ನಿ। ರೀಕ್ಷಿಸುತಿರ್ಪನು ನಿನ್ನ। ಪಕ್ಷಿವಾಹನನ ಚರಿತ್ರೆಯ ನೊರೆದು ನೀ। ರಕ್ಷಿಸಾಶೀರ್ವಾದಗೈದು।। ಕುರುಡನಾಗಿರ್ದಾ ಶೂದ್ರನು ರಾಮನ। ವರದಿಂದ ಸುಖಿಸುತಲಿರ್ಪ। ತರಳನೀನವನಿಂದ ದೊರಕುವ ಮಾನ್ಯವ। ಪರಮ ಪ್ರೀತಿಯಲಿ ಸ್ವೀಕರಿಸಿಸೈ।। ಅನುರೂಪವಾಗಿಹ ವರನಿಗೆ ಚಿಂತಿಪ। ವನಿತೆಯ ನೀ ವರಿಸುತಲಿ। ತನುಜೆ ಜಾಮಾತರ ಕರೆದೊಯ್ದು ರಾಮನ। ಒಲವಿಂದ ಅರ್ಚಿಸುತಿರು ನೀಂ।। ಇಂತು ಪೇಳುತ ರಾಮನಂತರ್ಧಾನವ ಪೊಂದೆ। ಭ್ರಾಂತನಾಗುತ ವಿಪ್ರಮನದಿ। ಚಿಂತಿಸಿ ಶ್ರೀರಾಮಚಂದ್ರನ ಸ್ಮರಿಸುತ। ಸಂತಸದಿಂದ ಮುಂಬರಿದ।। ಕಾರುಣ್ಯಪೂರ್ಣನು ಪೇಳಿದ ರೀತಿಯಿಂ। ನಾರಾಯಣಭಟ್ಟ ನಡೆಸಿ। ನಾರಿಯರೀರ್ವರು ಧನರಾಶಿ ಸಹಿತಲಿ। ದಾರಿಯಕ್ರಮಿಸಿದನಾತ।। ತನುಜೆಜಾಮಾತರ ಸಹಿತಲಿ ಬಂದನು। ದಿನಮಣಿಯುದಯದ ಮುನ್ನ। ಘನಮಹಿಮಾನ್ವಿತ ರಾಮನ ಪಾಡುತ। ವಿನಯದಿಂದಿರ್ಪನೂರಾಚೆ।। ಹಿಂದಿನ ಕಣ್ವಗೃಹಮುಪ್ಪರಿಗೆ ಯಾಗಿ। ಬಂದಿತು ಸಕಲೈಶ್ವರ್ಯ। ನಂದನನಿಗೆ ರಾಮಚಂದ್ರನೊಲಿದನೆಂದು। ಚಂದದಿ ವಿಪ್ರತಾನರಿತ।। ಬಾಲನಿಗೊದಗಿದ ಶ್ರೀರಾಮಕರುಣದ। ಜಾಲಮಿದೆಂದು ತಾ ತಿಳಿದು। ನೀಲಮೇಘಶ್ಯಾಮ ತನಯನ ತೋರುತ। ಶ್ರೀ ಲೋಲರಕ್ಷಿಪುದೆಂದು।। ಕೇಶವಭಟ್ಟನು ಚಿಂತಿಪಸಮಯಕ್ಕೆ। ಭೂಸುರನೋರ್ವನು ಬಂದು। ಲೇಸಾದುದು ನಿಮ್ಮ ಸುತನ ಸಂಪದಗಳ। ನೇಸು ವರ್ಣಿಸಲಿ ನಾನೆಂದ।। ಶ್ರೀರಾಮಕೃಪೆಯಿಂದ ಪೊಂದಿಹನಾತ। ನಾರಿಧನಕನಕಗಳೆಲ್ಲಾ। ಆರಾಮದಿ ನಿಮ್ಮ ತನಯತಾಗಿಹನೆಂ। ದೀ ರೀತಿ ಪೇಳ್ದಭೂಸುರನು।। ಲಾಲಿಸಿ ಕೇಳಿದನೀಮಾತ ವಿಪ್ರನು। ಶ್ರೀಲೋಲರಾಮ ಶರಣೆಂದು। ಬಾಲನ ಕಾಣಬೇಕೆಂಬ ಸಂತಸದಲಿ। ಲೀಲೆಯಿಂದಲಿ ನಡೆತಂದಾ।। ಬಂದ ಪಿತನ ಪಾದದ್ವಂದ್ವಕೆ ಷಮಂದಿಸು। ತಿಂದು ಕೃತಾರ್ಥನಾದೆನುನಾಂ। ತಂದೆಯೆ ನಿಮ್ಮನುಗ್ರಹದಿಂದ ಶ್ರೀರಾಮ। ಚಂದ್ರನ ನೋಡಿದೆನೆಂದಾ।। ಕಾರುಣ್ಯ ಪೂರ್ಣನಾ ಶ್ರೀರಾಮಚಂದ್ರನು। ತೋರಿದ ನಿನಗೆ ದರ್ಶನವಾ। ಬಾರೆನ್ನ ವಂಶೋದ್ಧಾರಕನೆ ಕುವರನೆ। ಸಾರಸಗುಣಶಾಲಿಯೆಂದಾ।। ಮುಂದೆಲ್ಲರೊಂದಾಗಿ ಬಂದರು ಗೃಹದಲ್ಲಿ। ವಂದಿಸಿ ಮಾತೆಯ ಪದಕೆ। ಚಂದದಿಂದಲಿ ತನ್ನ ಸತಿಗೆ ತಾ ಪೇಳಿದ। ಬಂದು ನೋಡೀಗ ಪುತ್ರಿಯನು।। ಮತಿಹೀನರಾಗಿ ಮಾನವರತಿ ಕ್ಲೇಶದಿ। ವ್ಯಥಿಸುವರತಿಶೋಕದಲಿ। ಪತಿತಪಾವನ ಸೀತಾಕಾಂತನ ಸ್ಮರಿಸಲು। ಹಿತಮಪ್ಪುದಲ್ತೆ ಸಜ್ಜನಕೆ।। ಕೋಮಲಕಾಯ ಶ್ರೀರಾಮ ಮಂಗಳ। ನಾಮವ ಪಾಡಿಕೊಂಡಾಡಿ। ಭೂಮಿಜಾಕಾಂತನ ಕರುಣಾಕಟಾಕ್ಷದಿ। ಕಾಮಿತಾರ್ಥವನೆ ಪೊಂದಿದರು।। ಸೃಷ್ಟೀಶ ನಿಯಮದ ವಿಧಿಯ ಪರಿಯೊಳವ। ರಷ್ಟೈಶ್ವರ್ಯದಿ ಸುಖಿಸಿ। ಪಟ್ಟಾಭಿರಾಮನ ನಿತ್ಯದಿ ಸೇವಿಸು। ತುತ್ತಮ ಪದವಿಗೈದಿದರು।। ವಾಲಿಯನುಜವರ ವಾನರ ಪಾಲಕ। ಶ್ರೀಲೋಲರಾಮನೆ ಜಯತು। ಲೀಲಾಲೋಲ ವಿಶಾಲಾಕ್ಷ ಸುಂದರ। ನೀಲಕಂಧರ ಮಿತ್ರ ಜಯತು। ಲೋಕಾತ್ಮನೆ ಲೋಕರಕ್ಷಕ ರಾಮನೆ। ಲೋಕೈಕ ವೀರನೆ ಜಯತು। ಲೋಕಾನಂದ ಸ್ವರೂಪನೆ ಶ್ರೀಕರ। ಲೋಕವಂದ್ಯನೆ ರಾಮಜಯತು। ಲೋಕಾನಂದ ಸ್ವರೂಪನೆ ಶ್ರೀಕರ। ಲೋಕವಂದ್ಯನೆ ರಾಮ ಜಯತು।। ಶಂಖಚಕ್ರಾಂಕಿತ ಕಿಂಕರಪಾಲಕ। ಪಂಕಜಲೋಚನ ಜಯತು। ಶಂಕರಪೂಜಿತ ಸಂಕಟ ಭಯಹರ। ಲಂಕೇಶ ವೈರಿಯೆ ಜಯತು ।। ರಾಜರಾಜಾರ್ಚಿತ ರಾಕ್ಷಸಮರ್ಧನ। ರಾಜೇಂದ್ರ ರಘುವೀರ ಜಯತು। ರಾಜೀವ ಲೋಚನ ರಘುಕುಲ ಪುಂಗವ। ರಾಜಸುಂದರ ಮುಖ ಜಯತು।। ಸರಶತಸುಂದರ ಸುರಕುಲ ಪುಂಗವ। ಸಿರಿವರ ರಾಮನೆ ಜಯತು। ಸರಸಿಜವದನನೆ ನಿರುಪಮವಿಗ್ರಹ। ಶರಣರಕ್ಷಕರಾಮ ಜಯತು।। ಹೇಮವತೀ ನದಿತೀರ ದೊಳಿರುತಿಹ। ಶ್ರೀಮಹೀಧರವಾಸ ಜಯತು। ಆಮೃತಟಾಕ ನಿವಾಸನೆ ರಘುವರ। ಕೋಮಾಲಂಗನೆ ರಾಮ ಜಯತು।। ಕರುಣಾಕರ ಸುಂದರ ಶ್ರೀರಾಮ। ಚರಿತೆಯನಿದ ಪೇಳೆ ಮುದದಿ। ಕರುಣಿಸುವನು ರಾಮ ಕಾಮಿತಾರ್ಥಗಳನೆಂ। ದರಿತು ಪೇಳುವುದು ಸಜ್ಜನರು।।



## 7. ಶ್ರೀರಾಮ ಶ್ರೀಕೃಷ್ಣರ ದ್ವಂದ್ವ ಅವತಾರಲೀಲೆ

ರಾಮ ರಾಮ ರಘುರಾಮ ರಾಗ: ಜುಂಜೋಟಿ

ರಾಮ ರಾಮ ರಘುರಾಮ ಪರಾತ್ಪರ ರಾವಣಸಂಹರ ರಣಧೀರ। ಪತಂಗವಾಹನ ಪತಿತಪಾವನ ರಮಾರಮಣ ನಾರಾಯಣ।।ಪಲ್ಲವಿ।। ದಶಶಿರದೈತ್ಯನು ಲೋಕವ ಬಾಧಿಸೆ । ದಶರಥಗುದಿಸಿದ ಶ್ರೀರಾಮ। ವಸುಧೆಯ ಭಾರವನಿಳುಹಲು ಜನಿಸಿದ। ವಸುದೇವನಂದನ ಶ್ರೀಕೃಷ್ಣ।।1।। ಶ್ರೀಮದ್‌ಲಕ್ಷ್ಮಣಭರತಶತ್ರುಘ್ನರಿಂ। ಪ್ರೇಮದಿ ಮೆರೆದನು ಶ್ರೀರಾಮ। ಭಾಮಿನಿ ರೋಹಿಣಿಯೊಳ ಗುದಿಸಿ ಬಲರಾಮನೆನಿಸಿದ ಶ್ರೀಕೃಷ್ಣ।।2।। ವಿಶ್ವಾಮಿತ್ರನ ಯಜ್ಞವ ರಕ್ಷಿಸೆ। ವಿಶ್ವವನ್ನೈದಿದ ಶ್ರೀರಾಮ। ವಿಶ್ವಸ್ವರೂಪನು ಗೋಕುಲದೊಳಗೆ। ವಿಶ್ವರೊಳಾಡಿದ ಶ್ರೀಕೃಷ್ಣ ।।3।। ಮುನಿಯೊಡನೈದುತ ವನದೊಳು ತಾಟಕೆ। ದನುಜೆಯ ಕೊಂದನು ಶ್ರೀರಾಮ। ಜನನಿಯ ತೆರದಿಂ ಸ್ತನಗಳಗೂಡೆ ಪೂತನಿಯನು ಕೊಂದನು ಶ್ರೀಕೃಷ್ಣ।।4।। ಮುನಿಯುಪದೇಶದ ಮಂತ್ರದಿ ಕಲಿತನು। ಧನುರಾಗಮವನು ಶ್ರೀರಾಮ। ಮನೆಹೊರಭಾಗದಿ ಬೀದಿಯೊಳೆಲ್ಲಾ ಕುಣಿಕುಣಿದಾಡಿದ ಶ್ರೀಕೃಷ್ಣ।।5।। ಜ್ಞಾನೋಪದೇಶದ ಮಂತ್ರವ ಕಲಿತನು। ಜ್ಞಾನಸ್ವರೂಪದ ಶ್ರೀರಾಮ। ಮಾನಿನಿಗೊಲ್ಲರ ಮನೆಯೊಳು ಬೆಣ್ಣೆಯ ತಾ ನಲಿದುಂಡನು ಶ್ರೀಕೃಷ್ಣ।।6।। ಋಷಿಗಳ ಯಜ್ಞವ ಕೆಡಿಸಲು ಬಂದಾ। ಅಸುರರ ಕೊಂದನು ಶ್ರೀರಾಮ । ಎಸೆಯುವ ಗೋಕುಲದೊಳು ನರನಟನೆಯ ಶಿಶುವನೆ ತೋರಿದ ಶ್ರೀಕೃಷ್ಣ।।7।। ಕಲ್ಲಾಗಿದ್ದಾ ಅಹಲ್ಯೆಗೆ ರೂಪವ ಅಲ್ಲಿಯೆ ಕೊಟ್ಟನು ಶ್ರೀರಾಮ। ಗೊಲ್ಲತಿಯರ ಕೂಡಾಡುತ ಗೊಲ್ಲರ ಪಳ್ಳಿಯೊಳಿದ್ದನು ಶ್ರೀಕೃಷ್ಣ।।8।। ಧನುವನು ಮುರಿದು ಸೀತೆಯವರಿಸಲು ಭರದೊಳು ಬಂದನು ಶ್ರೀರಾಮ। ದುರುಳ ಕಾಳಿಂಗನ ಹೆಡೆಯನು ಮೆಟ್ಟುತ ಕುಣಿಕುಣಿದಾಡಿದ ಶ್ರೀಕೃಷ್ಣ ।।9।। ಪರಶುಗ್ರಾಹಿಯು ಬಿಲ್ಲನು ತೋರಲು। ಭರದಿಂದೆಳೆದನು ಶ್ರೀರಾಮ। ತರಳನನೊರಳಿಗೆ ಕಟ್ಟಲು ಮತ್ತಿಯ ಮರಗಳ ಮುರಿದನು ಶ್ರೀಕೃಷ್ಣ।।10।। ತಂದೆಯ ವರವನು ಸಲಿಸಲು ಬಂದನು ಕುಂದದೆ ಕಾಡಿಗೆ ಶ್ರೀರಾಮ। ಬೃಂದೆಯ ವನದೊಳು ಕೊಳಲೂದುತೆ ಗೋಬೃಂದವ ಕಾಯ್ದನು ಶ್ರೀಕೃಷ್ಣ।।11।। ಧರಣಿಜೆ ಲಕ್ಷ್ಮಣರೊಡನಾಮುನಿಗಳ। ಪೊರೆಯೊಳಗಾಡಿದ ಶ್ರೀರಾಮ। ತರುಣಿಯರೊಂದಿಗೆ ಜಲಕ್ರೀಡೆಯ ತಾ ಸರಸದೊಳಾಡಿದ ಶ್ರೀಕೃಷ್ಣ।।12।। ಗುಹನನು ಮನ್ನಿಸಿ ಭರತಗೆ ರಾಜ್ಯದ ಪದವನು ಇತ್ತನು ಶ್ರೀರಾಮ। ಮಹಿತರನ ಕ್ರೂರೋದ್ಧವ ಮುಖ್ಯರ ವಿಹಿತದಿ ಪೊರೆದನು ಶ್ರೀಕೃಷ್ಣ।।13।। ಚಿತ್ರಕೂಟದಿ ಭರತಗೆ ಪಾದುಕೆ। ಯಿತ್ತುರೆಯೊಲಿಸಿದ ಶ್ರೀರಾಮ। ಚಿತ್ರಯುದ್ಧದಿ ಸ್ಯಮಂತಕದೊಡನೆ। ಸತ್ಯೆಯ ತಂದನು ಶ್ರೀಕೃಷ್ಣ।।14।। ದಂಡಕವನದಲಿ ಮಾಯಾಮೃಗವನು ಕಂಡದನರಿದನು ಶ್ರೀರಾಮ। ದಂಡಗಳಿಂದಲೆ ಹಿಂಡನ ದೈತ್ಯರ ದಿಂಡುರುಳಿಸಿದನು ಶ್ರೀಕೃಷ್ಣ।।15।। ಮೃಗವನು ಬಯಸಲು ಸೀತೆಯು ಬಾಣವ। ತೆಗೆಯುತಲೋಡಿದ ಶ್ರೀರಾಮ। ಬಗೆ ಬಗೆ ಲೀಲೆಗಳಿಂದಲಿ ಗೋಪಿಯ ರೊಗುಮಿಗೆಯಾದನು ಶ್ರೀಕೃಷ್ಣ।।16।। ರಾವಣ ಸೀತೆಯ ಕದ್ದುದ ಕಂಡಾ ಭಾಮೆಗೆ ಮರುಗಿದ ಶ್ರೀರಾಮ। ದೇವರ ವಿಭು ಮಳೆಗರೆಯಲು ನೆಗಹಿದ। ಗೋವರ್ಧನವನು ಶ್ರೀಕೃಷ್ಣ।।17।। ಪಥದಲಿ ಬಿದ್ದ ಜಟಾಯುಗೆ ಮುಕ್ತಿಯ ಪಥಕಾಣಿಸಿದನು ಶ್ರೀರಾಮ। ಹಿತದಿಂ ದ್ರೌಪದಿಗಭಯವನಿತ್ತು। ವ್ರತಪಾಲಿಸಿದನು ಶ್ರೀಕೃಷ್ಣ ।।18।। ವಾಲಿಯ ರಣದಲಿ ಕೊಂದು ಸುಗ್ರೀವನ। ಪಾಲಿಸಿಕೊಂಡನು ಶ್ರೀರಾಮ। ಲೋಲೇಕ್ಷಣೆಯರ ಸಹಿತಲೆ ನಾನಾ। ಲೀಲೆಗಳಾಡಿದ ಶ್ರೀಕೃಷ್ಣ।।19।। ವನಚರರೊಡನಾ ವನಿತೆಯನರಸಲು। ಹನುಮನ ಕಳುಹಿದ ಶ್ರೀರಾಮ। ದನುಜರ ಧೇನುಕ ಬಕರನು ಕೊಲ್ಲುತೆ। ತೊನೆದುರುಳಿಸಿದನು ಶ್ರೀಕೃಷ್ಣ।।20।। ಮುದ್ರಿಕೆಯುಂಗುರ ಜಾನಕಿಗಿತ್ತನು। ಸುದ್ದಿಯ ಜೊತೆಯಲಿ ಶ್ರೀರಾಮ। ಹೊದ್ದಿದ ಗೋಪಿಗೆ ಲೀಲೆಯ ತೋರಿದ। ಮುದ್ದಿನ ಚಿನ್ಮಯ ಶ್ರೀಕೃಷ್ಣ।।21।।ಚೂಡಾಮಣಿಯನು ಭಾಮೆಗೆ ನೀಡಲು ಹನುಮನಿಗರುಹಿದ ಶ್ರೀರಾಮ। ಕೇಡಿಗ ದನುಜನ ಕೊಲ್ಲಲು ಹಾವಿನ ದಾಡೆಯ ಹೊಕ್ಕನು ಶ್ರೀಕೃಷ್ಣ।।22।। ಸೀತೆಯು ಲಂಕೆಯೊಳಿರುವುದ ಕೇಳಿಯೆ ಕಾತರನಾದನು ಶ್ರೀರಾಮ। ಯಾದವ ಭೂಮಿಯ ಭಾರವನಿಳುಹಲು। ಭೂತವ ಕೊಂದನು ಶ್ರೀಕೃಷ್ಣ।।23।। ರಾವಣ ದೂರಲು ಬಂದ ವಿಭೀಷಣ। ದೇವನ ಸಲಹಿದ ಶ್ರೀರಾಮ। ಮಾವನ ನೋಡಲು ಮಧುರೆಗೆ ಬಂದ। ಬಲದೇವನ ಸಹಿತಲೆ ಶ್ರೀಕೃಷ್ಣ ।।24।।

ವಾನರರಿಂದಲಿ ದೈತ್ಯರ ಕೊಲ್ಲಿಸಿ ದಾನವಗೊಲಿದನು ಶ್ರೀರಾಮ। ಹೀನನ ರಜಕನ ಕೊಲ್ಲುತ ಮಲ್ಲರ। ಆನಕ ಬಡಿದನು ಶ್ರೀಕೃಷ್ಣ॥25॥ ಅಂಬುಧೀಬಂಧನ ಮಾಡಿದನಾಗಲೇ। ಅಂಬುಜಲೋಚನ ಶ್ರೀರಾಮ। ಕುಂಬಿನಿಯೊಳಗಾ ಗಂಧದ ಕುಬ್ಜೆಯ ದೊಂಬಿಯ ತಿದ್ದಿದ ಶ್ರೀಕೃಷ್ಣ॥26॥ ಕುಂಭಶ್ರವಣ ಪ್ರಮುಖರ ಮಡುಹಿದ । ಅಂಬುಜಲೋಚನ ಶ್ರೀರಾಮ। ನಂಬಿದ ಭಕ್ತರ ಪಾಲಿಸೆ ಕಂಸನ। ಕುಂಭಿನಿಗೌಕಿದ ಶ್ರೀಕೃಷ್ಣ॥27॥ ರಾವಣನನ್ನೇ ಕೊಂದಾ ತಮ್ಮಗೆ ಭೂಮಿಯ ಕೊಟ್ಟನು ಶ್ರೀರಾಮ। ಮಾವನ ಕೊಲ್ಲುತ್ತಯ್ಯಗೆ ಪಟ್ಟವ ಭಾವದಿ ಕಟ್ಟಿದ ಶ್ರೀಕೃಷ್ಣ॥28॥ ಮಡದಿಯನಗ್ನಿಗೆ ಪುಗಿಸಿಯೆ ಭರತಗೆ ನುಡಿದುದ ಸಲಿಸಿದ ಶ್ರೀರಾಮ। ಮಡುಹಿಯೆ ಮುರನನು ನಿರ್ಜರತರುವನು ಪೊಡವಿಯಲಿರಿಸಿದ ಶ್ರೀಕೃಷ್ಣ॥29॥ ಧರೆಯೊಳಗುತ್ತಮವಾದ ಕೋಸಲ ಪುರವನ್ನಾಳಿದ ಶ್ರೀರಾಮ। ಧರಣಿಪ ಬಾಣಾಸುರನಾ ಕರಗಳ ಮುರಿಯಿಸಿ ಮೆರೆದನು ಶ್ರೀಕೃಷ್ಣ॥30॥ ಯುದ್ಧದಿ ಲವಕುಶರಂಬಿನ ಗಾಯಕೆ ಬಿದ್ದನು ಧರಣಿಗೆ ಶ್ರೀರಾಮ। ಸದ್ಧಿತದೊಳು ಯಾದವಕುಲವನು ತಾನುದ್ಧಾರಗೈದನು ಶ್ರೀಕೃಷ್ಣ॥31॥ ಶ್ರೀಮದಯೋಧ್ಯಾ ಪುರದಲಿ ನೆಲಸಿದ ಭಾಮೆಯ ಸಹಿತಲಿ ಶ್ರೀರಾಮ। ಪ್ರೇಮದಿ ನೆಲಸಿದ ದ್ವಾರಕಾವತಿಯಲಿ ಕಾಮಿನಿಸಹಿತಲಿ ಶ್ರೀಕೃಷ್ಣ॥32॥ ರಾಮಾಯಣದಾ ಕಥೆಯನು ಪೇಳ್ವರ। ಪ್ರೇಮದಿ ಸಲಹುವ ಶ್ರೀರಾಮ । ಪ್ರೇಮದೊಳಾ ಭಾಗವತವ ಪಠಿಸಲು ಕಾಮಿತವೀವನು ಶ್ರೀಕೃಷ್ಣ॥33॥ ರಾಮರಾಮ ರಘುರಾಮ ಪರಾತ್ಪರ .... ರಾವಣಸಂಹರ ರಣಧೀರ ಪತಂಗವಾಹನ ಪತಿತಪಾವನ ರಮಾರಮಣ ನಾರಾಯಣ॥

ರಾಮ ನಮೋ ಜಯ ಕೃಷ್ಣ ನಮೋ — ರಾಗ: ಅಭೇರಿ-ಆದಿತಾಳ

ರಾಮ ನಮೋ ಜಯ ಕೃಷ್ಣ ನಮೋ। ಕೃಷ್ಣ ನಮೋ ಜಯ ರಾಮ ನಮೋ॥ಪ॥ ಅಯೋಧ್ಯಾಪತಿ ರಾಮ ನಮೋ। ಮಥುರಾನಾಥ ಕೃಷ್ಣನಮೋ। ರಘುಕುಲ ಭೂಷಣ ರಾಮನಮೋ। ಯದುಕುಲ ತಿಲಕ ಕೃಷ್ಣನಮೋ॥1॥ ದಶರಥ ನಂದನ ರಾಮ ನಮೋ। ವಸುದೇವತನಯ ಕೃಷ್ಣ ನಮೋ। ಕೌಸಲ್ಯ ಸುತ ರಾಮ ನಮೋ। ದೇವಕಿ ನಂದನ ಕೃಷ್ಣ ನಮೋ॥2॥ ಸೀತಾವಲ್ಲಭ ರಾಮ ನಮೋ। ರುಕ್ಮಿಣಿ ನಾಯಕ ಕೃಷ್ಣನಮೋ। ಆಪದ್ಬಾಂಧವ ರಾಮ ನಮೋ। ಅನಾಥ ರಕ್ಷಕ ಕೃಷ್ಣ ನಮೋ॥3॥ ನಿರ್ಮಲ ಹೃದಯ ರಾಮನಮೋ। ಕಾರುಣ್ಯ ಸಿಂಧು ಕೃಷ್ಣನಮೋ। ವಿಭೀಷಣಾರ್ಪಿತ ರಾಮನಮೋ। ಅರ್ಜುನ ಸಾರಥಿ ಕೃಷ್ಣನಮೋ॥4॥ ವಿಶ್ವ ವ್ಯಾಪಕ ರಾಮ ನಮೋ। ವಿಶ್ವ ರೂಪಧರ ಕೃಷ್ಣ ನಮೋ। ಪುರಾಣ ಪುರುಷ ರಾಮ ನಮೋ। ದಾಸಜನ ಪ್ರಿಯ ಕೃಷ್ಣ ನಮೋ॥5॥ ಜಯ ಜಯ ಜಯ ಶ್ರೀ ರಾಮ ನಮೋ। ಜಯ ಜಯ ಜಯ ಶ್ರೀ ಕೃಷ್ಣ ನಮೋ। ಜಯ ಮಂಗಳ ಶ್ರೀ ರಾಮನಮೋ। ಶುಭಮಂಗಳ ಶ್ರೀ ಕೃಷ್ಣ ನಮೋ॥6॥

ಜೈಜೈ ರಾಮ ಹರೇ

ಜೈ ಜೈ ರಾಮ ಹರೇ ಜೈ ಜೈ ಕೃಷ್ಣ ಹರೇ॥ಪ॥ ರಾಮ ಹರೇ ರಾಮ ಹರೇ। ಕೃಷ್ಣ ಹರೇ ಹರೇ ಕೃಷ್ಣ ಹರೇ॥ಅ.ಪ.॥ ಕೌಲಸ್ಯಜಠರ ವಂಶೋದ್ಭವ ಸುರ। ಸಂಸೇವಿತಪದ ರಾಮಹರೇ॥ ಕಂಸಾದ್ಯ ಸುರರ ಧ್ವಂಸ ಗೈದ ಯದು। ವಂಶೋದ್ಭವ ಶ್ರೀ ಕೃಷ್ಣಹರೇ॥1॥ ಮುನಿಮಖ ರಕ್ಷಕ ದನುಜರ ಶಿಕ್ಷಕ। ಫಣಿಧರ ಸನ್ನುತ ರಾಮ ಹರೇ॥ ಘನ ವರ್ಣಾಂಗ ಸುಮನಸರೊಡೆಯ ಶ್ರೀ। ವನಜಾಸನ ಪಿತ ಕೃಷ್ಣ ಹರೇ॥2॥ ಶಿಲೆಯ ಪಾದ ರಜದಲಿ ಸ್ತ್ರೀ ಮಾಡಿದ। ಸುಲಲಿತ ಗುಣ ನಿಧಿ ರಾಮ ಹರೇ॥ ಬಲು ವಕ್ರಾಗಿದ್ದ ಬಲೆಯ ಕ್ಷಣದಲಿ। ಚಲುವೆಯ ಮಾಡಿದ ಕೃಷ್ಣ ಹರೇ॥3॥ ಹರಧನು ಭಂಗಿಸಿ ಹರುಷದಿ ಜಾನಕಿ। ಕರವ ಪಿಡಿದ ಶ್ರೀ ರಾಮಹರೇ॥ ಸಿರಿ ರುಕ್ಮಿಣಿಯನು ತ್ವರದಲಿ ವರಿಸಿದ। ಶರಣರ ಪಾಲಕ ಕೃಷ್ಣ ಹರೇ॥4॥ ಜನಕ ಪೇಳೆ ಲಕ್ಷ್ಮಣ ಸೀತಾ ಸಹ। ವನಕೆ ತೆರಳಿದ ರಾಮಹರೇ॥ ವನಕೆಪೋಗಿ ತನ್ನಣುಗ ರೊಡನೆ ಗೋವನು ಪಾಲಿಪ ಶ್ರೀ ಕೃಷ್ಣಹರೇ॥5॥ ತಾಟಕೆ ಖರಮಧು ಕೈಟಭಾರಿ। ಪಾಪಟವಿ ಸುರಮುಖ ರಾಮಹರೇ॥ ಆಟದಿ ಫಣಿಮೇಲ್ ನಾಟ್ಯವನಾಡಿದ ಖೇಟವಾಹ ಶ್ರೀ ಕೃಷ್ಣಹರೇ॥6॥ ಚದುರೆ ಶಬರಿಯಿತ್ತ ಬದರಿಯ ಫಲವನು। ಮುದದಿ ಸೇವಿಸಿದ ರಾಮ ಹರೇ। ವಿದುರನ ಕ್ಷೀರಕೆ ಒದಗಿ ಪೋದ ಶ್ರೀ ಪದುಮನಾಭ ಜಯ ಕೃಷ್ಣ ಹರೇ॥7॥ ಸೇವಿತ ಹನುಮ ಸುಗ್ರೀವನ ಸಖ ಜಗತ್ಪಾವನ ಪರತರ ರಾಮಹರೇ। ದೇವಕಿ ವಸುದೇವರ ಸೆರೆಬಿಡಿಸಿದ। ದೇವ ದೇವ ಶ್ರೀ ಕೃಷ್ಣಹರೇ॥8॥ ಗಿರಿಗಳಿಂದ ವರಶರಧಿ ಬಂಧಿಸಿದ। ಪರಮ ಸಮರ್ಥ ಶ್ರೀ ರಾಮಹರೇ। ಗಿರಿಯ ತನ್ನ ಕಿರಿ

ಬೆರಳಿಲೆತ್ತಿ ಗೋ-।ಪರನ ಕಾಯ್ದ ಶ್ರೀ ಕೃಷ್ಣಹರೇ।।9।। ಖಂಡಿಸಿ ದಶಶಿರ ಚೆಂಡಾಡಿದ ಕೋ-।ದಂಡಪಾಣಿ ಶ್ರೀರಾಮ ಹರೇ। ಪಾಂಡುತನಯರಿಂ ಚಂಡಕೌರವರ। ದಿಂಡು ಗೆಡಹಿಸಿದ ಕೃಷ್ಣಹರೇ।।10।। ತವಕದಯೋಧ್ಯಾ ಪುರಕೈದಿದ ತ-।ನ್ನುವತಿಯೊಡನೆ ಶ್ರೀರಾಮ ಹರೇ। ರವಿಸುತ ತನಯಗೆ ಪಟ್ಟವ ಗಟ್ಟಿದ। ಭವತಾರಕ ಶ್ರೀ ಕೃಷ್ಣಹರೇ।।11।। ಭರತನು ಪ್ರಾರ್ಥಿಸಲರ ಸತ್ವವ ಸ್ವೀ-।ಕರಿಸಿದ ತ್ವರದಲಿ ರಾಮಹರೇ। ವರಧರ್ಮಾರ್ಧ್ಯರ ಧರೆಯೊಳು ಮೆರೆಸಿದ। ಪರಮ ಕೃಪಾಕರ ಕೃಷ್ಣಹರೇ।।12।। ಧರಯೊಳಜ್ಞಜನರನು ಮೋಹಿಪುದಕೆ। ಹರನ ಪೂಜಿಸಿದ ರಾಮಹರೇ। ಹರಣ ಪ್ರಾರ್ಥಿಸಿ ವರವನು ಪಡೆದಾ ಚರಿತೆಯ ಗಾಧವು ಕೃಷ್ಣಹರೇ।।13।। ಅತುಳ ಮಹಿಮ ಸದ್ಯತಿಗಳ ಹೃದಯದಿ ಸತತ ವಿರಾಜಿಪ ರಾಮಹರೇ। ಸಿತವಾಹನ ಸಾರಥಿ ಎನಿಸಿದ। ಸುರತತಿ ಪೂಜಿಪ ಪದ ಕೃಷ್ಣ ಹರೇ।।14।। ರಾಮ ರಾಮ ಎಂದು ನೇಮದಿ ಭಜಿಪರ। ಕಾಮಿತ ಫಲದ ಶ್ರೀರಾಮಹರೇ।। ಪ್ರೇಮದಿ ಭಕ್ತರ ಪಾಲಿಪ ಶ್ರೀ। ವರದೇಶ ವಿಠಲ ಶ್ರೀ ಕೃಷ್ಣಹರೇ।।15।।

ಸೀತಾರಾಮ ಕಹೋ (ಹಿಂದಿ) ರಾಗ: ಸಿಂಧುಭೈರವಿ

ಸೀತಾರಾಮ ಕಹೋ ರಾಧೇಶ್ಯಾಮ ಕಹೋ। ಸೀತಾರಾಮ ಕಹೋ ರಾಧೇಶ್ಯಾಮ ಕಹೋ।।1।। ಸೀತಾ ರಾಮ ಬಿನಾ ಕೋಈ ಪ್ಯಾರಾನಹಿ। ರಾಧೇಶ್ಯಾಮ ಬಿನಾ ಕೋಈ ಅಪನಾನಹಿ।।2।। ಸೀತಾರಾಮ ಬಿನಾ ಸುಖ ಕೌನ್ ಕರೇ। ರಾಧೇ ಶ್ಯಾಮ ಬಿನಾ ದುಃಖ ಕೌನ್ ಹರೇ।।3।। ಸೀತಾರಾಮ ಬಿನಾ ಬೇಡಾ ಪಾರ ನಹಿ। ರಾಧೇ ಶ್ಯಾಮ ಬಿನಾ ಉದ್ಧಾರ ನಹಿ।।4।।

ಕೇಳಿರಿ ಭಾಗ್ಯವು ವಿಷ್ಣುಕಥೆ ರಾಗ: ಮೋಹನ

ಕೇಳಿರಿ ಭಾಗ್ಯವು ವಿಷ್ಣುಕಥೆ। ಪಾವನವಹುದು ವಿಷ್ಣುಕಥೆ।।ಪ।। ರಾಮಾವತಾರದಿ ಶಿಷ್ಟರ ರಕ್ಷಿಸಿದ। ಆದರ್ಶಗುಣವ ಲೋಕಕ್ಕೆ ತೋರಿದ। ಪತಿತ ಪಾವನನೆಂಬ ಖ್ಯಾತಿಯ ಪಡೆದ। ಲೋಕದಿ ಇಂತಹ ಸ್ವಾಮಿ ಇಲ್ಲೆನಿಸಿದ ।।1।। ಕೃಷ್ಣಾವತಾರದಿ ಧರ್ಮನಿಷ್ಠರ ಪೊರೆದ। ಗೀತೆಯ ಬೋಧಿಸಿ ಧರ್ಮಸಂಸ್ಥಾಪಿಸಿದ। ಭಕ್ತಿಜ್ಞಾನ ವೈರಾಗ್ಯ ಮಾರ್ಗತೋರಿದ। ಚೈತನ್ಯ ದಾಸನಿಗೆ ಮುಕ್ತಿಯ ನೀಡಿದ।।2।।

ರಾಮಾ ರಾಘವಾ

ರಾಮಾ ರಾಘವಾ ಜಯ ಸೀತಾ ನಾಯಕ(2ಸಾರಿ) ರಾಮಾ ರಾಘವ ರಾಜೀವ ಲೋಚನ। ಕಾಮಿತ ಫಲದ ಕರಿವರದ। ಕೃಷ್ಣಾ ಕೇಶವ ಜಯಗೋಪಿ ಮಾಧವ(2ಸಾರಿ) ಕೃಷ್ಣಾ ಕೇಶವ ಅಂಬುಜ ಲೋಚನ। ವಾಂಚಿತ ಫಲದ ಯದುವರದ।।

## 8. ಶ್ರೀ ಹನುಮಜ್ಜಯಂತಿ

ಬುದ್ಧಿರ್ಬಲಂ ಯಶೋಧೈರ್ಯಂ (ಧ್ಯಾನಶ್ಲೋಕ)

ಬುದ್ಧಿರ್ಬಲಂ ಯಶೋಧೈರ್ಯಂ ನಿರ್ಭಯತ್ವಮರೋಗತಾ। ಅಜಾಡ್ಯಂ ವಾಕ್ಪಟುತ್ವಂಚ ಹನೂಮಾತ್ ಸ್ಮರಣಾದ್ಭವೇತ್।।

ಅಂಜನೀ ಗರ್ಭ ಸಂಭೂತೋ

ಅಂಜನೀ ಗರ್ಭ ಸಂಭೂತೋ ವಾಯುಪುತ್ರೋ ಸನಾತನಃ। ಕುಮಾರೋ ಬ್ರಹ್ಮಚಾರೀಚ ತಸ್ಮೈ ಶ್ರೀ ಹನುಮತೇ ನಮಃ।।

ಏಳು ಮಾರುತಿ ಎಂದು ಎಬ್ಬಿಸಿದಳು (ಉದಯರಾಗ)

ಏಳು ಮಾರುತಿ ಎಂದು ಎಬ್ಬಿಸಿದಳು ಅಂಜನೆಯು।। ಶ್ರೀರಾಮರ ಸೇವೆಗೆ ತಡವಾಗುವು ದೆಂದು।।ಪ।।

ಸೇತುಗಟ್ಟಲಿಬೇಕು। ಶರಧಿ ದಾಟಲು ಬೇಕು। ಮಾತೆಗೆ ಉಂಗುರವ ಕೊಡಲು ಬೇಕು। ಪಾತಕಿ ರಾವಣನನೆದೆಯ ಸೀಳಲಿ ಬೇಕು। ಸೀತಾಪತಿ ಶ್ರೀರಾಮಚಂದ್ರಗೆ ನಮಿಸಬೇಕು ।।1।। ಇಂತು ಕಳೆಯಲಿಬೇಕು। ಅಜ್ಞಾತವಾಸವನು। ಪಂಥದಲ್ಲಿ ಕೀಚಕನ ಗೆಲಿಯಬೇಕು। ತಂತ್ರದಲಿ ಗೆಲಿಯಬೇಕು। ಶಕುನಿದುರ್‍ಯೋಧನಾದಿಗಳ। ಕುಂತಿ ನಂದನನೆಂದು। ಹೆಸರಾಗ ಬೇಕು।।2।। ಮಧ್ವರಾಯರು ಎಂದು ಪ್ರಸಿದ್ಧನಾಗಲಿಬೇಕು। ತಿದ್ದಿ ಹಾಕಲು ಬೇಕು ಸಕಲ ಗ್ರಂಥಗಳ। ಅದ್ವೈತ ವಾದಿಗಳ ಗೆದ್ದು ಪೋಗಲಿಬೇಕು। ಮುದ್ದು ಪುರಂಧರ ವಿಠಲನ ದಾಸನಾಗಬೇಕು।।3।।

ಮಾರುತನೆ ಏಳೆಂದು — ರಾಗ : ಭೌಳಿ-ಆದಿತಾಳ

ಮಾರುತನೆ ಏಳೆಂದು ಎಬ್ಬಿಸಿದಳಂಜನೆಯು ಶ್ರೀರಾಮ ಸೇವೆಗೆ ತಡವಾಯಿತೇಳು।।ಪ।। ಸೇತು ಕಟ್ಟಲು ಬೇಕು ಶರಧಿ ದಾಟಲು ಬೇಕು। ಮಾತೆಗೆ ಉಂಗುರವ ಕೊಡಲು ಬೇಕು। ಪಾತಕಿ ರಾವಣನ ಶಿರವ ತರಿಯಲುಬೇಕು । ಸೀತಾಪತಿರಾಮಗೆ ನಮಿಸಲು ಬೇಕು।।1।। ಇಂತು ಕಳೆಯಲು ಬೇಕು ಅಜ್ಞಾತವಾಸವನು। ಪಂಥದಲಿ ಕೀಚಕನ ಒದೆಯಬೇಕು। ತಂತ್ರದಲಿ ಗೆಲಬೇಕು ಶಕುನಿ ಧುರ್ಯೋಧನರ। ಕುಂತಿನಂದನನೆಂದು ಹೆಸರಾಗಬೇಕು।।2।। ಮಧ್ವರಾಯರು ಎಂದು ಪ್ರಸಿದ್ಧರಾಗಲುಬೇಕು। ತಿದ್ದಿ ಹಾಕಲು ಬೇಕು ಸಕಲ ಗ್ರಂಥಗಳ। ಅದ್ವೈತವಾದಿಗಳ ಗೆದ್ದು ಕೆಡಹಲು ಬೇಕು। ಮುದ್ದು ಪುರಂದರವಿಠಲನ ದಾಸನೆನಿಸಬೇಕು।।3।।

ಎಲ್ಲಿರುವೆ ತಂದೆ ಬಾರೋ — ರಾಗ: ಬೇಹಾಗ್

ಎಲ್ಲಿರುವೆ ತಂದೆ ಬಾರೋ ಮಾರುತಿ। ಎಲ್ಲೆಲ್ಲಿ ನೋಡಿದರು ಅಲ್ಲಿ ನಿನ್ನ ಕೀರುತಿ। ಎಲ್ಲಿ ನೋಡಿದರು ನಿನ್ನ ಕೂಡಿರುವ ಶ್ರೀಪತಿ।।ಪ।। ಅಂದು ರಘುನಂದನನಿಗೆ ವಂದಿಸುತ ಇಂದಿರೆಯ। ಕಂಡು ಕೊಂಡ್ಯಾಡಿದ್ಯಲ್ಲೋ ಮಾರುತಿ।।1।। ರಂಗನರ್ಧಾಂಗಿಗೆ ಉಂಗುರವ ನೀನಿತ್ತು। ವನಭಂಗವ ಮಾಡಿದ್ಯಲ್ಲೋ ಮಾರುತಿ।।2।। ರಕ್ಕಸರ ಸೊಕ್ಕು ಮುರಿದು ಲಂಕೆಗೆ ಉರಿಯಿಕ್ಕಿ। ಓಡ್ಯಾಡಿದ್ಯಲ್ಲೋ ಮಾರುತಿ।।3।। ಮಂದಮತಿ ಇಂದ್ರಜಿತು ನಿಂದಿಸಲು ಇಂದಿರೆಯ। ಅಂದು ದಶಕಂಠನ ಕುಟ್ಟಿದ್ಯಲ್ಯೋ ಮಾರುತಿ।।4।। ಶೇಷಗಿರಿವಾಸದೊರೆ ನಿಮ್ಮಯ ಪಾದದಾಸರೊಳು। ಕೃಪೆ ತೋರೋ ಮಾರುತಿ।।5।।

ಕೂಸಿನ ಕಂಡೀರಾ ಮುಖ್ಯ — ರಾಗ: ಪುನ್ನಾಗವರಾಳಿ

ಕೂಸಿನ ಕಂಡೀರಾ ಮುಖ್ಯ ಪ್ರಾಣನ ಕಂಡೀರಾ।।ಪ।। ಬಾಲನ ಕಂಡೀರಾ ಬಲವಂತನ ಕಂಡೀರಾ।।ಅ.ಪ।। ಅಂಜನೆ ಉದರದಿ ಜನಿಸಿತು ಕೂಸು। ರಾಮರ ಪಾದಕ್ಕೆರಗಿತು ಕೂಸು। ಸೀತೆಗೆ ಉಂಗುರ ಕೊಟ್ಟಿತು ಕೂಸು। ಲಂಕಾಪುರವನು ಸುಟ್ಟಿತು ಕೂಸು।।1।। ಭಂಡೀ ಅನ್ನವ ನುಂಗಿತು ಕೂಸು। ಬಕನ ಪ್ರಾಣವ ಕೊಂಡಿತು ಕೂಸು। ವಿಷದ ಲಡ್ಡುಗೆಯ ಮೆದ್ದಿತು ಕೂಸು। ಮಡದಿಗೆ ಪುಷ್ಪವ ಕೊಟ್ಟಿತು ಕೂಸು।।2।। ಮಾಯಾವಿಗಳೆಲ್ಲ ಗೆದ್ದಿತು ಕೂಸು। ಮಧ್ವ ಮತವನುದ್ಧರಿಸಿತು ಕೂಸು। ಪುರಂದರವಿಠಲನ ದಯದಿಂದ ಕೂಸು। ಸುಮ್ಮನೆ ಉಡುಪಿಲಿ ನಿಂತಿತು ಕೂಸು।।3।।

ಕೂಸನು ಕಂಡೀರ್‍ಯಾ ಸುಪ್ರಹ್ಲಾದನ — ರಾಗ: ತೋಡಿ-ಆದಿತಾಳ

ಕೂಸನು ಕಂಡೀರ್‍ಯಾ।ಸುಪ್ರಹ್ಲಾದನ ಕಂಡೀರ್‍ಯಾ।।ಪ।। ರಾಕ್ಷಸ ಕುಲದಲಿ ಜನಿಸಿತು ಕೂಸು। ರಾಧಾಕೃಷ್ಣನ ಭಜಿಸಿತು ಕೂಸು। ರಾಗ ದ್ವೇಷಗಳ ಬಿಟ್ಟಿತು ಕೂಸು। ರಾಮನ ಪಾದವ ನೆನೆಯುವ ಕೂಸು।।1।। ಘನ ಹರಿ ಕಂಬದಿ ತೋರಿತು ಕೂಸು। ಗಳಿಸಿತು ಕೃಷ್ಣನ ಪ್ರೇಮದಿ ಕೂಸು। ಘನ ಮಂತ್ರಾಲಯದಿ ವಾಸಿಪ ಕೂಸು। ವೇಣುಗೋಪಾಲನ ಪ್ರೀತಿಯ ಕೂಸು।।2।। ಪ್ರಸಿದ್ಧ ವ್ಯಾಸರಾಯನೆಂಬೋ ಕೂಸು। ಪ್ರವೀಣ ವಿದ್ಯೆಯೊಳೆನಿಸಿದ ಕೂಸು। ಪ್ರಹ್ಲಾದನೆಂಬ ಆಹ್ಲಾದ ಕೂಸು। ಪ್ರಸನ್ನ ಮಧ್ವೇಶ ವಿಠಲನ ಕೂಸು।।3।।

ಸುಂದರ ಮೂರುತಿ ರಾಗ: ಜುಂಜೂಟಿ-ಆದಿತಾಳ

ಸುಂದರ ಮೂರುತಿ ಮುಖ್ಯ ಪ್ರಾಣ ಬಂದ ಮನೆಗೆ ಶ್ರೀರಾಮನಾಮ ಧ್ವನಿಗೆ।।ಪ।। ಕಣ ಕಾಲಂದುಗೆ ಗೆಜ್ಜೆ ಝುಣಝುಣರೆನುತ। ಝುಣಕು ಝುಣಕುರೆಂದು ಕುಣಿಕುಣಿದಾಡುತ।।1।। ತುಂಬುರು ನಾರದ ವೀಣೆ ಬಾರಿಸುತ। ವೀಣೆ ಬಾರಿಸುತ ಶ್ರೀರಾಮ ನಾಮ ಪಾಡುತ।।2।। ಪುರಂದರವಿಠಲನ ನೆನೆದು ಪಾಡುತಲಿ। ನೆನೆದು ಪಾಡುತಲಿ ಆಲಿಂಗನ ಮಾಡುತಲಿ।।3।।

ನಡಿ ನಡಿ ನಮ್ಮ ಮನೆಗೆ ರಾಗ: ಮೋಹನ

ನಡಿ ನಡಿ ನಮ್ಮ ಮನೆಗೆ। ಗುರುಮುಖ್ಯಪ್ರಾಣ।।ಪ।। ನಡಿ ನಡಿ ನಮ್ಮ ಮನೆಗೆ। ನಡೆ ಮುಡಿ ಹಾಸುವೆ। ನಡೆಯದ ಬಗೆಯೇನು ನಂಬಿದ ದಾಸ ನಾನು।।ಅ.ಪ।। ರಾಮದೂತನಾಗಿ ರಕ್ಕಸರ ಕುಲವ ಕೊಂದು। ರಾಮಮುದ್ರಿಕೆ ತಂದು ರಮಣಿಗಿತ್ತವನೆ।।1।। ಕರಿಪುರದಲಿ ನಿಂದು ಕೌರವರ ಕುಲವ ಕೊಂದು। ಮೆರೆದೆಯೋ ನೀನಂದು ಕರುಣ ದಯಾಸಿಂಧು।।2।। ವೇದವ್ಯಾಸರ ಪೂಜೆ ಮೋದದಿಂದಲಿ ಮಾಡಿ। ವೇದ ಪುರಾಣ ಶ್ರೀ ವಿಜಯ ವಿಠಲನ ದಾಸ।।3।।

ಮುಂಜಾನೆ ಎದ್ದು ಸಂಜೀವನೆನ್ನಿ

ಮುಂಜಾನೆ ಎದ್ದು ಸಂಜೀವನೆನ್ನಿ।।ಪ।। ಅಂಜಿಪ ದುರಿತ ದೂರವೆನ್ನಿ।।ಅ.ಪ.।। ವಾಯು ನಂದನನೆನ್ನಿ। ವಜ್ರಕಾಯನೆನ್ನಿ। ರಾಯರಾಘವನ ಕಿಂಕರನೆನ್ನಿ।। ಛಾಯಾಗ್ರೀವನ ಕೊಂದು ವನವ ಕಿತ್ತಿದವನೆನ್ನಿ। ಮಾಯದ ಲಂಕೆಯ ದಹನನೆನ್ನಿ।।1।। ಪಾಂಡುಕುವರನೆನ್ನಿ। ಪಾಪಸಂಹರನೆನ್ನಿ। ಉಂಡೂವಿಷವ ತೇಗಿದವನೆನ್ನಿ। ಚಂಡಕುರುವಂಶ ಹತವೆನ್ನಿರಯ್ಯ। ಲಂಡ ಹಿಂಡಂಬಕನ ಕೊಂದನೆನ್ನಿ।।2।। ಆನಂದ ತೀರ್ಥರೆನ್ನಿ। ಅಮಿತ ಜೀವಾತ್ಮನೆನ್ನಿ। ಜ್ಞಾನಕ್ಕೆ ಮೊದಲು ದೇವತೆ ಎನ್ನಿ।। ಆನಂದ ಮಯನಾದ ವಿಜಯವಿಠ್ಠಲನ। ಧ್ಯಾನಿಪ ಜನರಿಗೆ ಮಾರ್ಗನೆನ್ನಿ।।3।।

ಬಿಡುವೆನೇನಯ್ಯಾ ಹನುಮ ರಾಗ: ಪೂರ್ವಕಲ್ಯಾಣಿ-ಆದಿತಾಳ

ಬಿಡುವೆನೇನಯ್ಯಾ ಹನುಮ ಬಿಡುವೆನೇನಯ್ಯಾ। ನಾ ಸುಮ್ಮನೆ ಬಿಡುವೆನೇನಯ್ಯಾ।।ಪ।। ಬಿಡುವೆನೇನೋ ಹನುಮಾ ನಿನ್ನ ಅಡಿಗಳಿಗೆ ಶಿರವಾ ಕಟ್ಟಿ। ಒಡೆಯನಲ್ಲಿ ಜ್ಞಾನ ಭಕ್ತಿಯನೆನಗೆ ಕೊಡುವ ತನಕ ಸುಮ್ಮನೆ ನಿನ್ನ।।1।। ಹಸ್ತವನೆತ್ತಿ ದರೇನು ಹಾರಾಕಾಲನು ಇಟ್ಟರೇನು। ಭೃತ್ಯನು ನಿನ್ನವನು ನಾನು ಹಸ್ತಿವರದನ ತೋರುವತನಕ।।2।। ಹಲ್ಲು ಮುಡಿಯ ಕಚ್ಚಿದರೇನು ಅಂಜುವೆನೆ ನಿನಗೆ ನಾನು। ಫುಲ್ಲನಾಭನಲ್ಲಿ ಎನ್ನ ಮನಸ ನೀ ನಿಲ್ಲಿಸೋತನಕ।।3।। ಡೊಂಕುಮೋರೆ ಬಾಲವ ತಿದ್ದಿ ಹೂಂಕರಿಸಿದರೆ ಅಂಜುವನಲ್ಲ। ಕಿಂಕಾರಾ ನಿನ್ನವ ನಾನು ಪುರಂದರವಿಠಲನ ತೋರುವತನಕ।।4।।

ಘಟಿಕಾಚಲದಿ ನಿಂತ ರಾಗ: ನಾಟಿ-ಆದಿತಾಳ

ಘಟಿಕಾಚಲದಿ ನಿಂತ ಶ್ರೀ ಹನುಮಂತ।।ಪ।। ಘಟಿಕಾ ಚಲದಿ ನಿಂತ ಪಟು ಹನುಮಂತನ ಪಠನೆಯ ಮಾಡಲುತ್ಕಟದಿ ಪೊರೆವೆನೆಂದು।।ಅ.ಪ।। ಚತುರ ಯುಗದಿ ತಾನು ಮುಖ್ಯ ಪ್ರಾಣನು। ಚತುರ ಮುಖನಯ್ಯನ ಚತುರ ಮೂರುತಿಗಳನು। ಚತುರತನದಿ ಭಜಿಸಿ ಚತುರ್ಮುಖನಾಗಿ। ಜಗಕೆ ಚತುರ್ವಿಧ ಫಲ ಕೊಡುತೆ।।1।। ಸರಸಿಜ ಭವಗೋಸ್ಕರ ಕಲ್ಮಷದೂರ। ವರಚಕ್ರತೀರ್ಥ ಸರ। ಮೆರೆವಾಚಲದಿ ನಿತ್ಯ ನರಹರಿಗೆದುರಾಗಿ। ಸ್ಥಿರಯೋಗಾಸನದಿ ಕರೆದು ವರಗಳ ಕೊಡುತೆ।।2।। ಶಂಖ ಚಕ್ರವ ಧರಿಸಿ ಭಕ್ತರ। ಮನಃ ಪಂಕವ ಪರಿಹರಿಸಿ। ಪಂಕಜನಾಭ ಶ್ರೀ ಪುರಂದರ ವಿಠಲನ। ಬಿಂಕದ ಸೇವಕ ಸಂಕಟ ಕಳೆಯುತ।।3।।

ಆಂಜನೇಯನೆ ಉಂದನ್ ಪಾದಕಮಲಮೇ (ತಮಿಳು) ರಾಗ: ಸುರುಟಿ-ರೂಪಕತಾಳ

ಆಂಜನೇಯನೆ ಉಂದನ್ ಪಾದಕಮಲಮೇ ಶರಣಂ ಶರಣಂ।।ಪ।। ಅಂಜನಾದೇವಿಯಿನ್ ಅರುಳ್ ತವ ಪುದಲ್ವಾ

ಅನ್ನೈ ಸೀತಾದೇವಿಯಿನ್ ಅರುಳ್ ಪೆಟ್ರ ಧೀರನೆ।।ಅ.ಪ.।। ರಾಮ ರಾಮ ಎನ್ನುಂ ತಾರಕ ಮಂತ್ರರತ್ತೈ ಸದಾ ಜಪಿತ್ತಿಡುಂ ಶೀಲನೆ। ರಾಮ ನಾಮತ್ತೈ ಭಜಿತ್ತುಡುವೋರ್ಕು ನವಗ್ರಹ ದೋಷತ್ತೈ ವಿಲೈಕ್ಕಿಡುವಾಯ್। ಕಲಿಯುಗತ್ತಿನಿಲೇ ಕಣ್ ಕಂಡ ದೈವಮಾಯ್। ಕಾತ್ತಿಡುಂ ಪಾಟಲೀಶ್ವರ ರೂಪನೆ।।ಚರಣ।।

ಪವಮಾನ ಗುರು ಪವಮಾನ

ಪವಮಾನ ಗುರು ಪವಮಾನ ಜಯ ಪವಮಾನ।।ಪ।। ಹರಿಬಲ ಕಾರ್ಯಧುರೀಣ। ಜಯ ಜಗತ್ರಾಣ। ಪವಮಾನ।।ಅ.ಪ।। ಅಂಜನೆಯುದರದಿ ಜನಿಸಿದನೆ। ಕಂಜವದನೆಗುಂಗುರ ನೀಡಿದನೇ। ಅಂಜದೆ ಲಂಕೆಯ ಸುಟ್ಟವನೇ। ರಂಜಿಪ ರಾಮರ ಪೂಜಿಸಿದವನೇ।।1।। ಕುಂತಿ ಕುಮಾರಾ ಜಗದೇಕ ವೀರ। ಕಂತು ಪಿತನ ಪ್ರಿಯ ಬಲು ಗಂಭೀರ। ಪಂಥದಿ ಕುರುಕುಲ ಸೀಳಿದ ಧೀರ। ಸಂತ ಜನಾನತ ವೃಕೋದರಾ।।2।। ಹರಿಮತ ಕಾರ್ಯಕೆ ಧವೆಗುದಿಸಿದನೇ। ಪರಿಪರಿ ಮಹಿಮೆಯ ತೋರಿದನೇ। ಪರಭಾಷ್ಯವ ಸುಲಭದಿ ಜಯಿಸಿದನೇ। ಪರಮ ಪೂಜ್ಯ ಭಾಷ್ಯವ ರಚಿಸಿಹನೇ।।3।। ಅಂದಿಗು ಇಂದಿಗು ಮುಂದಿಗು ತಂದೆ। ನೀನೇ ಗತಿಯೆಂದೇ। ಕುಂದದ ವರಗಳ ಚಂದದಿನೀಡುತ ಮುದದಿಂಕಾಯೆಂದೇ। ಮಂದಭಾಗ್ಯನಾನೆಸಗಿಹ ಅಘಗಳ ಜವದಿಂ ತರಿಯೆಂದೇ। ಚಂದದಿ ಜಯ ಕಮಲೇಶನ ಪೊಂದುವ ಮಾರ್ಗವ। ತೋರೆಂದೇ ತಂದೇ ಮಾರ್ಗವ ತೋರೆಂದೇ।।4।।

ವೀರ ಮಾರುತಿ ಗಂಭೀರ ಮಾರುತಿ ರಾಗ: ಸಿಂಧೂಭೈರವಿ

ವೀರ ಮಾರುತಿ ಗಂಭೀರ ಮಾರುತಿ । ವೀರಮಾರುತಿ ಅತಿಧೀರ ಮಾರುತಿ। ಗೀತಮಾರುತಿ ಸಂಗೀತ ಮಾರುತಿ । ದೂತಮಾರುತಿ ರಾಮದೂತ ಮಾರುತಿ। ಭಕ್ತ ಮಾರುತಿ ಪರಮ ಭಕ್ತ ಮಾರುತಿ।।ವೀರ ಮಾರುತಿ।।

ನಮಾಮಿ ದೂತಂ ರಾಮಸ್ಯ (ಯಂತ್ರೋದ್ಧಾರಕ ಹನುಮತ್ ಸ್ತೋತ್ರ)

ನಮಾಮಿ ದೂತಂ ರಾಮಸ್ಯ ಸುಖದಂ ಚ ಸುರದ್ರುಮಮ್। ಪೀನವೃತ್ತ ಮಹಾಬಾಹುಂ ಸರ್ವಶತ್ರು ನಿವಾರಣಂ।।1।। ನಾನಾರತ್ನ ಸಮಾಯುಕ್ತಂ ಕುಂಡಲಾದಿವಿರಾಜಿತಂ। ಸರ್ವದಾಭೀಷ್ಟದಾತಾರಂ ಸತಾಂ ವೈ ದೃಢಮಾಹವೇ।।2।। ವಾಸಿನಂ ಚಕ್ರತೀರ್ಥಸ್ಯ ದಕ್ಷಿಣಸ್ಥಗಿರೌ ಸದಾ। ತುಂಗಾಂಬೋಧಿತರಂಗಸ್ಯ ವಾತೇನ ಪರಿಶೋಭಿತೇ।।3।। ನಾನಾದೇಶಾಗತೈಃ ಸದ್ಭಿಃ ಸೇವ್ಯಮಾನಂ ನೃಪೋತ್ತಮೈಃ। ಧೂಪದೀಪಾದಿನೈವೇದ್ಯೈಃಪಂಚಖಾದ್ಯೈಶ್ಚಶಕ್ತಿತಃ।।4।। ವ್ರಜಾಮಿ ಶ್ರೀಹನೂಮಂತಂ ಹೇಮಕಾಂತಿಸಮಪ್ರಭಂ। ವ್ಯಾಸತೀರ್ಥ ಯತೀಂದ್ರೇಣ ಪೂಜಿತಂ ಚ ವಿಧಾನತಃ।।5।। ತ್ರಿವಾರಂ ಯಶ್ರ ಪಠೇನ್ನಿತ್ಯಂ ಸ್ತೋತ್ರಂ ಭಕ್ತ್ಯಾದ್ವಿಜೋತ್ತಮಃ। ವಾಂಛಿತಂ ಲಭತೇಭಿಷ್ಟಂ ಷಣ್ಮಾಸಾಭ್ಯಂತರೇ ಖಲು।।6।। ಪುತ್ರಾರ್ಥೀಲಭತೇ ಪುತ್ರಾನ್ ಯಶೋರ್ಥೀ ಲಭತೇ ಯಶಃ। ವಿದ್ಯಾರ್ಥೀ ಲಭತೇ ವಿದ್ಯಾ ಧನಾರ್ಥೀ ಲಭತೇ ಧನಮ್।।7।। ಸರ್ವಥಾ ಮಾಸ್ತು ಸಂದೇಹೋ ಹರಿಃ ಸಾಕ್ಷೀ ಜಗತ್ಪತಿ। ಯಃಕರೋತ್ಯತ್ರ ಸಂದೇಹಂ ಸ ಯಾತಿ ನರಕಂ ಧ್ರುವಮ್।।8।।

ಇದು ಏನು ಚರಿತ ಯಂತ್ರೋದ್ಧಾರ

ಇದು ಏನು ಚರಿತ ಯಂತ್ರೋದ್ಧಾರ।।ಪ।। ಇದು ಏನು ಚರಿತ ಶ್ರೀ ಪದುಮನಾಭನ ದೂತ। ಸದಾಕಾಲದಲಿ ಸರ್ವರ ಹೃದಯಾಂತರ್ಗತ।।ಅ.ಪ।। ವಾರಿಧಿ ಗೋಪ್ಪಾದನೀರಂತೆ ದಾಟಿದ। ಧೀರ ಯೋಗಾಸನ ಧಾರಿಯಾಗಿಪ್ಪೋದು।।1।। ದುರುಳ ಕೌರವರನ್ನು ವರಗದೆಯಲಿ ಕೊಂದ। ಕರದಲ್ಲಿ ಜಪಮಾಲೆಧರಿಸಿ ಎಣಿಸುವುದು।।2।। ಹೀನಮತಗಳನ್ನು ವಾಣಿಲಿ ತರಿದಂಥ। ಜ್ಞಾನವಂತನೆ ಹೀಗೆ ಮೌನವಧರಿಸಿದ್ದು।।3।। ಸರ್ವವ್ಯಾಪಕ ನೀನು ಪೂರ್ವಿಕ ದೇವನೆ। ಶರ್ವನಪಿತ ಬಂದೀ ಪರ್ವತ ಸೇರಿದ್ದು।।4।। ಗೋಪಾಲವಿಠಲಗೆ ನೀ ಪ್ರೀತಿ ಮಂತ್ರಿಯು ವ್ಯಾಪಾರ ಮಾಡದೆ ಈಪರಿ ಕುಳಿತಿದ್ದು।।5।।

ಭಜರೇ ಹನುಮಂತಂ ಮಾನಸ ರಾಗ: ಹಿಂದೋಳ

ಭಜರೇ ಹನುಮಂತಂ ಮಾನಸ। ಭಜರೇ ಹನುಮಂತಂ।।ಪ।। ಕೋಮಲಕಾಯಂ ನಾಮ ಸುದೇವಂ। ಭಜ ಸಖಿಸಿಂಹಂ

ಭೂಸುರ ಶ್ರೇಷ್ಠಂ॥ಅ.ಪ॥ ಮೂರ್ಖನಿಶಾಚರವನಸಂಹಾರಂ। ಸೀತಾದುಃಖವಿನಾಶನಕಾರಂ॥ ರಣರಂಗಧೀರಂ ಗುಣಗಂಭೀರಂ। ದಾನವದೈತ್ಯಾರಣ್ಯ ಕುಠಾರಂ॥1॥ ಪರಮಾನಂದಗುಣೋದಯಚರಿತಂ। ಕರುಣಾರಸ ಸಂಪೂರ್ಣ ಸುಭರಿತಂ॥ ಗುರು ಚನ್ನಕೇಶವ ಕದಳೀರಂಗಂ। ಸ್ಥಿರಸದ್ಭಕ್ತಂ ಮುಖ್ಯಪ್ರಾಣಂ॥2॥

ಪವನಾತ್ಮಜಂ ಭಜರೇ — ರಾಗ: ಶಂಕರಾಭರಣ-ಆದಿತಾಳ

ಪವನಾತ್ಮಜಂ ಭಜರೇ ಚಿತ್ತ ಪರಮಶಾಂತಂ। ಸುರಗುರುಗುಹ ಮಹಿತಂ॥ಪ॥ ಭುವನತ್ರಯ ವ್ಯಾಪಕ ಮತಿಲಲಿತಂ। ಭೂಸುರಾದಿ ಸೇವಿತ ರಾಮದೂತಂ॥ ಶ್ರವಣ ರಾಮನಾಮ ಪ್ರಭಾವಂ। ಶಾಶ್ವತ ಸಂಜೀವಿನ್ಯೌಷಧಕರಂ॥ಚ॥

ವೀರಹನುಮತೇ ನಮೋ ನಮಃ — ರಾಗ: ಕಾಪಿ-ರೂಪಕತಾಳ

ವೀರಹನುಮತೇ ನಮೋ ನಮಃ ಮಾರುತ ತನಯ ನಮೋ ನಮಃ॥ಪ॥ ಸರಸೀರುಹವದನ ಶ್ರೀರಾಮಚಂದ್ರ ಚರಣ ॥ಅ.ಪ॥ ಕ್ರೂರರಾಕ್ಷಸಾದಿಹರಣ ಸರ್ವ ವಿದ್ಯಾದಾನ ನಿಪುಣ ಪರಮಂತ್ರ ವಿನಾಶಕರಣ ಕಪಿವಿನುತ ಗುರುಗುಹಸ್ಮರಣ ॥ಚ॥

ಆಂಜನೇಯಂ ಸದಾ ಭಾವಯಾಮಿ — ರಾಗ: ಶಂಕರಾಭರಣ-ತ್ರಿಶ್ರಏಕತಾಳ

ಆಂಜನೇಯಂ ಸದಾ ಭಾವಯಾಮಿ ಅಪ್ರಮೇಯಂ ಮುದಾಚಿಂತಯಾಮಿ॥ಪ॥ ಅಂಜನಾ ನಂದನಂ ವಾನರೇಶಂವರಂ ಪಂಚವಕ್ತ್ರಂ ಸುರೇಶಾದಿವಂದ್ಯಂ॥ಅ.ಪ॥ ಗುರುಗುಹಹಿತಂ ಶಾಂತಂ ಸದಾ ಸೇವಿತ ಶ್ರೀರಾಮ ಪಾದಪಂಕಜ ಸಂಜೀವಿ ಪರ್ವತಕರಂ ಮುಖಾಬ್ಜಂ ಸದಾ ರಾಮಚಂದ್ರ ದೂತಂ ಬಜೇ॥ಚ॥

ಪಾಹಿ ರಾಮದೂತ, ಜಗತ್ಪ್ರಾಣ ಕುಮಾರ

ಪಾಹಿ ರಾಮದೂತ, ಜಗತ್ಪ್ರಾಣ ಕುಮಾರ ಮಾಂ॥ಪ॥ ವಾಹಿನೀಶ ತರಣ ದಶವದನ ಸೂನು ತನು ಹರಣ॥ಅ.ಪ.॥ ತರುಣಾರುಣ ವದನಾಬ್ಜ ತಪನ ಕೋಟಿ ಸಂಕಾಶ। ಕರಧೃತ ರಘುವರ ಸುಚರಣ ಕಲಿಮಲಾಭ್ರ ಗಂಧವಾಹ॥ ಘೋರಾಸುರ ವಾರಾನ್ನಿಧಿ ಕುಂಭತನಯ ಕೃತಕಾರ್ಯ। ಪಾರಿಜಾತ ತರುನಿವಾಸ ಪವನ ತುಲ್ಯ ವೇಗ॥1॥ ಪಾದವಿಜಿತ ದುಷ್ಟಗ್ರಹ ಪತಿತ ಲೋಕಪಾವನ। ವೇದಶಾಸ್ತ್ರ ನಿಪುಣವರ್ಯ ವಿಮಲಚಿತ್ತ ಸತತಂ ಮಾಂ। ಕರುಣಾಸರ ಪರಿಪೂರ್ಣ ಕಾಂಚನಾದ್ರಿ ಸಮದೇಹ। ಪರಮ ಭಾಗವತ ವರೇಣ್ಯ ವರದ ತ್ಯಾಗರಾಜನುತ॥2॥

ಕಲುಗುನಾ ಪದನೀರಜ ಸೇವ — ರಾಗ: ಪೂರ್ಣಲಲಿತ-ಆದಿತಾಳ

ಕಲುಗುನಾ ಪದನೀರಜ ಸೇವ ಗಂಧವಾಹಾ ತನಯ॥ಪ॥ಪಲುಮಾರು ಜೂಡುಚು ಬ್ರಹ್ಮಾನಂದುಡೈ ಬರಗೆಡು ಭಕ್ತಾಗ್ರೇಸರ ತನಕು॥ಅ.ಪ.॥ ವೇಕುವ ಜಾಮುನ ನೀಕರಮುನ ನಿಡಿ ಶ್ರೀಕಾಂತುಡಮೃತ ಸ್ನಾನಮುಂ ಜೇಸಿತಾಸೀ ತಾಕರಮುಲಚೇ ಭುಜಿಂಚಿ ನಿನು ಸಾತ್ವಿಕ ಪುರಾಣ ಪಠನ ಜೇಯುಮನು ಸಾಕೇತ ಪತಿನಿ ಸರ್ವಾಧಾರುನಿ ಪ್ರಕಟಮುಗ ತ್ಯಾಗರಾಜ ನುತ ನಿಗನ॥ಚ॥

ಪಂಚಮುಖ ಆಂಜನೇಯ — ರಾಗ: ಅಭೇರಿ-ಆದಿತಾಳ

ಪಂಚಮುಖ ಆಂಜನೇಯ ಪಂಚಭೂತನೇ ನೀನು। ಪಂಚಪ್ರಾಣ ನೀನಯ್ಯ ಸಚ್ಚಿದಾನಂದನೇ॥ಪ॥ ಸಕಲವೂ ನೀನಯ್ಯ ಸಾಧುಜನ ಭಕ್ತರಿಗೆ। ಬ್ರಹ್ಮಜ್ಞಾನ ನೀನಯ್ಯ ಆತ್ಮ ಚಿಂತೆ ಸಾಧನೆಗೆ॥1॥ ವಾನರಾಕಾರದಲ್ಲಿ ರಾಮಕಾರ್ಯ ಮಾಡಿದೆ। ನಾರಸಿಂಹನಲ್ಲಿ ಸೇರಿ ಪ್ರಹ್ಲಾದನ ಉದ್ಧರಿಸಿದೆ॥2॥ ಖಗರಾಜ ರೂಪನಾಗಿ ತಾಯಿ ದಾಸ್ಯ ನೀಗಿಸಿದೆ। ವರಾಹನಲ್ಲಿ ಸೇರಿ ಭೂಮಿಯನ್ನು ರಕ್ಷಿಸಿದೆ॥3॥ ಅಶ್ವಮುಖನಾಗಿ ಶ್ರೀವಿದ್ಯೆ ಕೊಟ್ಟೆ ಕುಂಭಜಗೆ। ಪಂಚಮುಖನಾಗಿ ನೀ ಶತಕಂಠನ ವಧಿಸಿದೆ॥4॥ ಒಂಟಿ ವಾಹನಾ ನೀ ಇಂದ್ರನಾ ಮಿತ್ರನೆ। ಪಂಪಾತಟ ವಾಸನೇ ಸಂಪಿಗೆಯ ಪ್ರಿಯ ನೀನು॥5॥

ಶ್ರೀಮದ್ವಿಷ್ಣುವಿನಾಜ್ಞೆಯಿಂದ (ವಾಯುಸ್ತುತಿ)

ಶ್ರೀಮದ್ವಿಷ್ಣುವಿನಾಜ್ಞೆಯಿಂದ ಜನಿಸಿ ಪವನನು ಕೇಸರೀ ಕ್ಷೇತ್ರದಲ್ಲಿ। ಕಂಜಾಕ್ಷಿ ಸೀತೆಗಾಗಿ ಲವಣ ಜಲಧಿಯಂ ಲಂಘಿಸಿ ಲಂಕೆಯಲ್ಲಿ॥1॥ ಅಲ್ಲಿದ್ದಂಥಾ ರಾವಣನ್ನ ರಘುಪನ ಕರದಿಂ ಭಂಗಿಸಿ ಭೂಜೆಯಿಂದ। ಕೂಡಿದ್ದಾ ರಾಘವನ್ನ ಭಜಿಸಿ ಮೆರೆದನು ಕಿಂಪುರುಷ ಖಂಡದಲ್ಲಿ॥2॥ ಆ ವಾಯು ಭೀಮನಾಗಿ ಹರವರ ಬಲದಿಂ ಕೊಬ್ಬಿದ ಮಾಘದನ್ನ। ಕೀರ್ಮಿರ ಕೀಚಕ ಬಕಮುಖಖಳರಂ ದುಷ್ಟ ದುರ್ಯೋಧನನ್ನು॥3॥ ಕೊಂದು ರಾಜಾಶ್ವಮೇಧ ಪ್ರಮುಖ ಮಖಗಳಂ ಮಾಡಿ ಕೃಷ್ಣಾರ್ಪಣೆಂದು। ರಾಜಾಧಿ ರಾಜನಾಗಿ ಸುಜನರ ಪತಿಯು ಮೆರೆದನು ಸಾಧು ಬಂಧು॥4॥ ಪ್ರಾಗ್ಜನ್ಮ ದ್ವೇಷದಿಂದ ಕಲಿಯಲಿ ಮಣಿಮಾನ್ ಸಂಕರಾಚಾರ್ಯನಾಗಿ। ಬ್ರಹ್ಮಾಹಂ ನಿರ್ಗುಣೆಂಬೋ ವಿತಥ ವಚನದಿಂ ಎಲ್ಲರಂ ಕೆಡಿಸಲಾಗಿ॥5॥ ಅಜ್ಞಾನಾಖ್ಯಾನ ದಿಂದ ಸುಜನರ ಮತಿಯ ಮ್ಲಾನವಂ ಪೊಂದಿರಲಾಗ। ಶ್ರೀಶಾಜ್ಞಾ ಶಿರದಿವಹಿಸಿ ಕುರುಕುಲ ಪತಿಯು ಆದನು ಮದ್ವಸೂರ್ಯ॥6॥ ಸರ್ವಜ್ಞ ಶ್ರೀಶನೇವೆ ವಿಧಿಭವಮುಖರು ಶ್ರೀಹರಿ ದಾಸರೇವೆ। ಸತ್ಯೇವೆ ಈ ಜಗತ್ತು ಜನವು ತ್ರಿವಿಧವು ನಿತ್ಯ ಪಂಚ ಪ್ರಭೇದ॥7॥ ಈಶಾಧೀನೇವೆ ಸರ್ವ ಶ್ರುತಿಗಿದನುಗುಣ ಅಂಥ ವೇದ ಪ್ರಮಾಣ। ಹೀಗೆಂದು ಮದ್ವಸೂರ್ಯ ತಿಳಿಸಿ ಸುಜನಕೆ ಇತ್ತನು ದಿವ್ಯ ಮೋದ॥8॥ ಕೇಳೆಲವೋ ಮಾಯವಾದಿ ಸಕಲ ಸುರಪನು ಎಂದಿಗಲ್ಪಜ್ಞನಲ್ಲ। ಜಿಜ್ಞಾಸ್ಯ ಬ್ರಹ್ಮನಾರಾಯಣ ಸಕಲ ಜಗತ್ಪರಿ ಮಿತಿಯನ್ನು ಬಲ್ಲ॥9॥ ನೀನರಿಯೋ ನಿನ್ನ ನಾರಿ ಹಗಲು ಇರುಳಲಿ ಜಾರವ ಮಾಡವೋದು। ಬ್ರಹ್ಮಾಹಂ ನಿರ್ಗುಣೆಂಬೋ ವಿಥತ ವಚನವಂ ಹ್ಯಾಂಗೆ ನೀ ಆಡುವೋದು॥10॥ ಮಾಯಾವಾದಿಗೆ ಮಾನಹೀನಜನಕೆ ಶುದ್ಧಿಲ್ಲದಾ ನಾಯಿಗೆ। ಮಾಯಿ ಸಂಕರಗೆ ಸಮೀರನ ಗದಾ ಪೆಟ್ಟಿಂದಲೇ ಮುಕ್ತಿಯು॥11॥ ನಿತ್ಯ ಅಂಧಂತಮ ಅಹೋದು ಎಂದು ಅಜ್ಞಾನವಂ ವರ್ಜಿಸಿ। ಶ್ರೀಮುದ್ರಾಸಹ ಗೋಪಿಸುಚಂದನಂ ದೇಹಂಗಳಲ್ಯರ್ಚಿಸಿ ॥12॥ ॥ಇತಿ ಶ್ರೀಮತ್ಕವಿಕುಲತಿಲಕ ಶ್ರೀಮದ್ವಾದಿರಾಜ ಕೃತಿ ಕನ್ನಡ ಲಘುವಾಯುಸ್ತುತಿ ಸಂಪೂರ್ಣಂ॥

ಏಳೇಳು ಶರಧಿಯು — ರಾಗ: ಶಂಕರಾಭರಣ-ಆಟ್ಟತಾಳ

ಏಳೇಳು ಶರಧಿಯು ಏಕವಾಗಿದೆ ಕಂಡ್ಯ। ಹ್ಯಾಗೆ ಬಂದೆ ಹೇಳೊ ಕೋತಿ॥ಪ॥ ಏಳು ಶರಧಿಯು ಎನಗೆ ಏಳು ಕಾಲುವೆಯು। ತೂಳಿ ಲಂಘಿಸಿ ಬಂದೆ ಭೂತ॥ಅ.ಪ.॥ ಏಳು ಸಮುದ್ರದೊಳಿರುವ ಮಕರಿ ಮತ್ಸ್ಯ। ಹ್ಯಾಗೆಬಿಟ್ಟರು ಹೇಳೊ ಕೋತಿ। ಏಳು ಸಮುದ್ರದ ಮಕರಿ ಮತ್ಸ್ಯದ ಕೂಡೆ। ಮಾತಾಡಿ ಬಂದೆನೊ ಭೂತ॥1॥ ಲಂಕಾದ್ವಾರದೊಳೊಬ್ಬ ಲಂಕಿಣಿ ಇರುವಳು ಹ್ಯಾಗೆ ಬಿಟ್ಟಳು ಹೇಳೊ ಕೋತಿ। ಲಂಕಿಣಿಯನು ಕೊಂದು ಶಂಕೆಯಿಲ್ಲದೆ ನಾನು ಬಿಂಕದಿಂದಲಿ ಬಂದೆ ಭೂತ॥2॥ ಕೊಂಬೆ ಕೊಂಬೆಗೆ ಕೋಟಿ ಮಂದಿ ರಾಕ್ಷಸರಿರೆ ಹ್ಯಾಗೆ ಬಿಟ್ಟರು ಹೇಳೊ ಕೋತಿ। ಕೊಂಬೆ ಕೊಂಬೆಗೆ ಕೋಟಿ ಮಂದಿ ರಾಕ್ಷಸರನ್ನು ಕೊಂದ್ವಾಕಿ ಬಂದೆನೊ ಭೂತ॥3॥ ಯಾವೂರೊ ಎಲೊ ನೀನು ಯಾವ ಭೂಮಿಯೊ ನಿಂದು ಯಾಕೆ ಬಂದೆ ಹೇಳೊ ಕೋತಿ। ಯಾವ ವನದೊಳಗೆ ಜಾನಕಿದೇವಿ ಇದ್ದಳೊ ಅವಳ ನೋಡಬಂದೆ ಭೂತ॥4॥ ದಕ್ಷಿಣಪುರಿ ಲಂಕಾ ದಾನವರಿಗಲ್ಲದೆ ತ್ರ್ಯಕ್ಷಾದ್ಯರಿಗಳವಲ್ಲ ಕೋತಿ। ಪಕ್ಷಿಧ್ವಜ ರಾಮನ ಅಪ್ಪಣೆ ಎನಗಿಲ್ಲ ಈ ಕ್ಷಣದಿ ತಪ್ಪಿಸಿಕೊಂಡೆ ಭೂತ॥5॥ ದೂತನಾಗಿಹೆ ಎನ್ನ ಕೈಯೊಳು ಸಿಕ್ಕಿಹೆ ಕೋಪವಿನ್ನ್ಯಾತಕೊ ಕೋತಿ। ನಾ ತಾಳಿಕೊಂಡಿಹೆನೊ ಈ ಕ್ಷಣದಿ ಲಂಕೆ ನಿರ್ಧೂಮವನು ಮಾಳ್ಪೆ ಭೂತ॥6॥ ನಿಮ್ಮಂಥ ದಾಸರು ನಿಮ್ಮರಸನ ಬಳಿ ಎಷ್ಟು ಮಂದಿದ್ದಾರೊ ಕೋತಿ। ನನ್ನಂಥ ದಾಸರು ನಿನ್ನಂಥ ಹೇಡಿಗಳು ಕೋಟ್ಯನುಕೋಟಿಯೊ ಭೂತ ॥7॥ ಎಲ್ಲಿಂದ ನೀ ಬಂದೆ ಏತಕೆಲ್ಲರ ಕೊಂದೆ ಯಾವರಸಿನ ಭಂಟ ಕೋತಿ। ಚೆಲ್ವಯೋಧ್ಯಾ ಪುರದರಸು ಜಾನಕಿಪತಿ ರಾಮಚಂದ್ರನ ಭಂಟ ಭೂತ॥8॥ ಸಿರಿ ರಾಮಚಂದ್ರನು ನಿನ್ನರಸನಾದರೆ ಆತ ಮುನ್ನಾರು ಹೇಳೊ ಕೋತಿ। ಹಿರಣ್ಯಕನನು ಸೀಳಿ ಪ್ರಹ್ಲಾದಗೊಲಿದ ಶ್ರೀ ಪುರಂದರವಿಠಲನೊ ಭೂತ॥9॥

ಸರ್ವಕಲ್ಯಾಣ ದಾತಾರಂ (ದ್ವಾದಶನಾಮ)

ಸರ್ವಕಲ್ಯಾಣ ದಾತಾರಂ। ಸರ್ವಾಪದ್ದನ ಮಾರುತಂ। ಅಪಾರಕರುಣಾಮೂರ್ತಿಂ ಆಂಜನೇಯಂ ನಮಾಮ್ಯಹಂ॥ ಓಂ

ಹನುಮತೇ ನಮಃ। ಓಂ ಅಂಜನಾ ಸೂನವೇ ನಮಃ। ಓಂ ವಾಯುಪುತ್ರಾಯ ನಮಃ। ಓಂ ಮಹಾಬಲಾಯ ನಮಃ। ಓಂ ರಾಮೇಷ್ಟಾಯ ನಮಃ। ಓಂ ಫಲ್ಗುನ ಸಖಾಯ ನಮಃ। ಓಂ ಪಿಂಗಾಕ್ಷಾಯ ನಮಃ। ಓಂ ಅಮಿತವಿಕ್ರಮಾಯ ನಮಃ। ಓಂ ಉಧದಿಕ್ರಮಣಾಯ ನಮಃ। ಓಂ ಲಕ್ಷ್ಮಣ ಪ್ರಾಣದಾತ್ರೇನಮಃ। ಓಂ ದಶಗ್ರೀವಸ್ಯ ದರ್ಪಘ್ನೇ ನಮಃ॥

ಹನುಮಾನ್ ಅಂಜನಾಸೂನುಃ (ದ್ವಾದಶನಾಮ)

ಹನುಮಾನ್ ಅಂಜನಾಸೂನುಃ ವಾಯುಪುತ್ರೋ ಮಹಾಬಲಃ। ರಾಮೇಷ್ಟಫಲ್ಗುಣಸ್ಸಖಃ। ಪಿಂಗಾಕ್ಷೋಮಿತವಿಕ್ರಮಃ ॥1॥ ಉಧದಿ ಕ್ರಮಣಶ್ಚೈವ ಸೀತಾಶೋಕವಿನಾಶಕಃ। ಲಕ್ಷ್ಮಣಃ ಪ್ರಾಣದಾತಾಚ। ದಶಗ್ರೀವಸ್ಯದರ್ಪಹಾ॥2॥ ದ್ವಾದಶೈತಾನಿ ನಾಮಾನಿ ಕಪೀಂದ್ರಸ್ಯ ಮಹಾತ್ಮನಃ। ಪ್ರಾತಃ ಕಾಲೇ ಪಠೇನ್ನಿತ್ಯಂ ಯಾತ್ರಾಕಾಲೇ ವಿಶೇಷತಃ॥3॥ ತಸ್ಯ ಮೃತ್ಯು ಭಯಂ ನಾಸ್ತಿ ಸರ್ವತ್ರ ವಿಜಯೀ ಭವೇತ್॥4॥

ಜಯ ಹನುಮಾನ ಜ್ಞಾನಗುಣಸಾಗರ (ಹನುಮಾನ್ ಚಾಲೀಸ್-ಹಿಂದಿ)

ಜಯ ಹನುಮಾನ ಜ್ಞಾನಗುಣಸಾಗರ। ಜಯ ಕಪೀಶ ತಿಹುಂಲೋಕ ಉಜಾಗರ॥1॥ ರಾಮದೂತ ಅತುಲಿತ ಬಲಧಾಮಾ। ಅಂಜನಿಪುತ್ರ ಪವನಸುತ ನಾಮ॥2॥ ಮಹಾವೀರ ವಿಕ್ರಮ ಬಜರಂಗೀ। ಕುಮತಿನಿವಾರ ಸುಮತಿಕೆ ಸಂಗೀ॥3॥ ಕಂಚನವರನ ಬಿರಾಜ ಸುಭೇಷಾ । ಕಾನನಕುಂಡಲ ಕುಂಚಿತ ಕೇಶಾ॥4॥ ಹಾಥ್ ಬಜ್ರ ಔದ್ವಜಾ ವಿರಾಜೈ। ಕಾಂದೇ ಮೂಂಜ ಜನೇವೂ ಸಾಜೈ॥5॥ ಶಂಕರಸುವನ ಕೇಸರಿನಂದನ। ತೇಜಪ್ರತಾಪ ಮಹಾಜಗವಂದನ॥6॥ ವಿದ್ಯಾವಾನ ಗುಣೀ ಅತಿಚಾತುರ ರಾಮಕಾಜ ಕರಿಬೇಕೋ ಆತುರ॥7॥ ಪ್ರಭುಚರಿತ್ರ ಸುನಿಬೇಕೋ ರಸಿಯಾ। ರಾಮಲಕ್ಷ್ಮಣ ಸೀತಾ ಮನ ಬಸಿಯಾ॥8॥ ರಾಮ ಲಕ್ಷ್ಮಣ ಜಾನಕೀ, ಜೈ ಬೋಲೋ ಹನುಮಾನ್ ಕೀ॥ ಸೂಕ್ಷ್ಮ ರೂಪಧರಿ ಸಿಯಹಿ ದಿಖಾವಾ। ವಿಕಟರೂಪಧರಿ ಲಂಕ ಜರಾವಾ॥9॥ ಭೀಮರೂಪಧರಿ ಅಸುರಸಂಹಾರೇ। ರಾಮಚಂದ್ರ ಕೇ ಕಾಜಸಂವಾರೇ॥10॥ ಲಾಯ ಸಂಜೀವನ ಲಖನ ಜೀಯಾಯೇ। ಶ್ರೀರಘುವೀರ ಹರಷಿ ಉರಲಾಯೇ॥11॥ ರಘುಪತಿ ಕೀನ್‌ಹೀ, ಬಹುತ ಬಡಾಯಿ। ತುಮಮಮ ಪ್ರಿಯ ಭರತಸಮಭಾಯಿ॥12॥ ಸಹಸ್ರ ಬದನ ತುಮ್ಹರೋ ಯಸಗಾವೈ। ಅಸಕಹಿ ಶ್ರೀಪತಿ ಕಂಠ ಲಗಾವೈ॥13॥ ಸನಕಾದಿಕ ಬ್ರಹ್ಮಾದಿ ಮುನೀಸಾ। ನಾರದ ಶಾರದ ಸಹಿತ ಅಹೀಸಾ॥14॥ ಯಮ ಕುಬೇರ ದಿಗ್‌ಪಾಲ ಜಹಾತೇ। ಕವಿ ಕೋಬಿದ ಕಹಿ ಸಕೇ ಕಹಾಂತೇ॥15॥ ತುಮ ಉಪಕಾರ ಸುಗ್ರೀವಹಿ ಕೀನ್ಹಾಹಾ। ರಾಮ ಮಿಲಾಯ ರಾಜಪದ ದೀನ್ಹಾಹಾ॥16॥ ರಾಮ ಲಕ್ಷ್ಮಣ ಜಾನಕೀ ಜೈ ಜೈ ಬೋಲೋ ಹನುಮಾನ್ ಕೀ॥ ತುಮ್ಹರೋ ಮಂತ್ರ ವಿಭೀಷಣ ಮಾನಾ। ಲಂಕೇಶ್ವರ ಭಯೇ ಸಬ ಜಗ ಜಾನಾ॥17॥ ಯುಗ ಸಹಸ್ರ ಯೋಜನ ಪರಭಾನು। ಲೀಲ್ಯೋ ತಾಹಿ ಮಧುರ ಫಲ ಜಾನೂ॥18॥ ಪ್ರಭುಮುದ್ರಿಕಾ ಮೇಲಿ ಮುಖ ಮಾಹೀ। ಜಲಧಿ ಲಾಂಘಿಗಯೇ ಅಚರಜ ನಾಹೀ॥19॥ ದುರ್ಗಮ ಕಾಜ ಜಗತ ಕೆ ಜೇತೇ। ಸುಗಮ ಅನುಗ್ರಹ ತುಮ್ಹರೆ ತೇತೇ॥20॥ ರಾಮ ದುವಾರೇ ತುಮ ರಖವಾರೇ। ಹೋತ ನ ಆಜ್ಞಾಬಿನು ಪೈ ಸಾರೇ॥21॥ ಸಬ ಸುಖ ಲಹೈ ತುಮ್ಹಾರೀ ಸರನಾ। ತುಮ ರಕ್ಷಕ ಕಾಹೂಕೋ ಡರನಾ॥22॥ ಅಪನ ತೇಜ ಸಂಮ್ಹರೋ ಆಪೈ। ತೀನೋಲೋಕ ಹಾಂಕತೇ ಕಾಂಪೈ॥23॥ ಭೂತ ಪಿಶಾಚ ನಿಕಟ ನಹಿ ಆವೈ। ಮಹಾವೀರ್ ಜಬ ನಾಮ ಸುನಾವೈ॥24॥ ರಾಮ ಲಕ್ಷ್ಮಣ ಜಾನಕೀ ಜೈ ಬೋಲೋ ಹನುಮಾನ್ ಕೀ॥ ನಾಸೈ ರೋಗಹರೇ ಸಬ ಪೀಡಾ। ಜಪತ್ ನಿರಂತರ ಹನುಮತ್ ಬೀರಾ॥25॥ ಸಂಕಟ ಸೇ ಹನುಮಾನ ಛುಡಾವೈ। ಮನಕರ್ಮ ವಚನ ಧ್ಯಾನ ಜೋ ಲಾವೈ॥26॥ ಸಬ ಪೈ ರಾಮ ತಪಸ್ವೀ ರಾಜಾ। ತಿನಕೇ ಕಾಜ ಸಕಲ ತುಮ ಸಾಜಾ॥27॥ ಔರ ಮನೋರಥ ಜೋ ಕೋಯಿ ಲಾವೈ। ಸೋಯಿ ಅಮಿತ ಜೀವನಫಲ ಪಾವೈ॥28॥ ಚಾರೋ ಯುಗ ಪ್ರತಾಪ ತುಮ್ಹಾರಾ। ಹೈ ಪ್ರಸಿದ್ಧ ಜಗತ ಉಜಿಯಾರಾ॥29॥ ಸಾಧುಸಂತನಕೇ ತುಮ ರಖವಾರೇ । ಅಸುರನಿಕಂದನ ರಾಮ ದುಲಾರೇ॥30॥ ಅಷ್ಟಸಿದ್ಧಿ ನವ ನಿಧಿಕೇ ದಾತಾ । ಅಸಬರ ದೀನ ಜಾನಕೀ ಮಾತಾ॥31॥ ರಾಮರಸಾಯನ ತುಮ್ಹಾರೇ ಪಾಸಾ। ಸದಾ ರಹೋ ರಘುಪತಿ ಕೇ ದಾಸಾ॥32॥ ರಾಮ ಲಕ್ಷ್ಮಣ ಜಾನಕೀ, ಜೈ ಬೋಲೋ ಹನುಮಾನ್

ಕೀ।।ತುಮ್ಹಾರೇ ಭಜನ ರಾಮಕೋ ಭಾವೈ। ಜನಮ ಜನಮ ಕೇ ದುಃಖ ಬಿಸರಾವೈ।।33।। ಅಂತಕಾಲ ರಘುವರ ಪುರಜಾಯಿ । ಜಹಾಜನ್ಮಿ ಹರಿಭಕ್ತ ಕಹಾಯಿ।।34।। ಔರ ದೇವತಾ ಚಿತ್ತ ನ ಧರಯಿ। ಹನುಮತ್ ಸೇ ಹಿ ಸರ್ವ ಸುಖ ಕರಯಿ।।35।। ಸಂಕಟ ಹರೈ ಮಿಟೈ ಸಬ ಪೀಡಾ। ಜೋ ಸುಮಿರೈ ಹನುಮತ್ ಬಲಬೀರಾ।।36।। ಜೈ ಜೈ ಜೈ ಹನಮಾನ ಗೋಸಾಯಿ। ಕೃಪಾ ಕರಹು ಗುರುದೇವ ಕಿ ನಾಯೀ।।37।। ಜೋ ಶತ ಬಾರ್ ಪಾಠಕರ ಜೋಯಿ। ಛೂಟಹಿ ಬಂದಿ ಮಹಾಸುಖ ಹೋಯಿ।।38।। ಜೋ ಯಹ್ ಪಢೈ ಹನುಮಾನ ಚಾಲೀಸಾ। ಹೋಯ ಸಿದ್ಧಿ ಸಾಖೀ ಗೌರೀಸಾ।।39।। ತುಲಸೀದಾಸ ಸದಾ ಹರಿ ಚೇರಾ। ಕೀಜೈನಾಥ ಹೃದಯ ಮಮ ಡೇರಾ।।40।। ರಾಮ ಲಕ್ಷ್ಮಣ ಜಾನಕೀ ಜೈ ಬೋಲೋ ಹನುಮಾನ್‌ಕೀ।।

ಜಯ ಹನುಮಂತಾ ಹೇ ಜ್ಞಾನಿ ಗುಣವಂತ (ಹನುಮಾನ್ ಚಾಲೀಸ್-ಕನ್ನಡಾನುವಾದ)

ಜಯ ಹನುಮಂತಾ ಹೇ ಜ್ಞಾನಿ ಗುಣವಂತ। ಜಯ ಕಪೀಶ ಜಯತ್ರಿಲೋಕ ಪ್ರಕಾಶಾ।।1।। ರಾಮದೂತ ಅಗಣಿತ ಬಲ ಧಾಮಾ। ಅಂಜನಾ ಪುತ್ರ ಪವನಸುತ ನಾಮಾ।।2।। ಮಹಾವೀರನೇ ವಿಕ್ರಮ ಬಲ ಶಾಲೀ। ಕುಮತಿ ನಿವಾರನೆ ಸಜ್ಜನ ಸಂಗೀ।।3।। ಕಾಂಚನ ಕಾಯಾ ವಜ್ರ ಶರೀರಾ। ರುಚಿರ ಕುಂಡಲಧರ ತೇಜೋರೂಪಾ।।4।। ಧ್ವಜ ವಜ್ರಾಂಕಿತ ಹಸ್ತ ಸುಶೋಭಾ। ಮೌಂಜೀಧರ ಶುಭಯಜ್ಞೋಪವೀತಾ।।5।। ಓರುದ್ರಾಂಶನೇ ಪವನ ಕುಮಾರ। ತೇಜೋ ದೇಶ ಜಯಜಯ ವೀರಾ।।6।। ವಿದ್ಯಾವಂತಾ ಚತುರ ಗುಣಶಾಲೀ। ರಾಮಕಾರ್ಯಸಾಧಕ ಸುರಬಾಲ।।7।। ರಾಮ ಚರಿತ ಮಾನಸ ಮಹಾವೀರ। ರಾಮಲಕ್ಷ್ಮಣ ಸೀತಾ ಪ್ರಿಯದೂತ।।8।। ಸೂಕ್ಷ್ಮ ರೂಪಧರ ಸೀತಾದುಃಖಹಾರೀ। ಲಂಕಾಭಯಂಕರ ರಾವಣ ವೈರೀ।।9।। ಭೀಮರೂಪಧರ ಅಸುರ ಸಂಹಾರಾ। ಶ್ರೀರಾಮ ಧೂತ ಪವನ ಸುತ ವೀರಾ।।10।। ಶ್ರೀರಾಮ ಲಕ್ಷ್ಮಣ ಪ್ರಾಣದಾತಾ। ರಾಮಪ್ರಿಯ ಸಖ ಹೇ ಹನುಮಂತಾ।।11।। ರಘುಪತಿ ಪ್ರಿಯ ಹೇ ಗುಣ ಗಣ ಧಾಮಾ। ಭರತ ಸಮಾನ ಹಿತರಾಮನ ದೂತಾ।।12।। ನಿನ್ನ ಕೀರ್ತಿಯನು ಶ್ರೀರಾಮನು ಪೊಗಳಿದ। ಆಲಿಂಗನದಾ ಪರಮ ಪದನೀಡಿದ।।13।। ಯಮ ಕುಬೇರ ದಿಶಪಾಲರು ಪೊಗಳೆ। ನಿನ್ನಯ ಕೀರುತಿ ಹೇ ಜಯ ವೀರ।।14।। ಬ್ರಹ್ಮಾದಿ ದೇವತೆಗಳು ಸನಕ ಸನಂದನರು। ನಾರದ ಮುನಿಗಳು ಸನಕ ನಿನ್ನನು ಪೊಗಳೆ।।15।। ಸುಗ್ರೀವಗೆ ನೀನುಪಕರಿಸಿದೆ ವೀರಾ। ರಾಮಸಖ್ಯವನೀಡಿ ರಾಜ್ಯ ಕರುಣಿಸಿದೆ।।16।। ನಿನ್ನ ನಂಬಿದ ವಿಭೀಷಣ ಧನ್ಯಾ। ಲಂಕೆಯರ ಸನಾದ ನಿನ್ನಯದಯದಿ।।17।। ದಿನಕರ ಬಿಂಬವ ಫಲವೆಂದರಿತು। ಲೀಲೆಯಿಂ ಮುಟ್ಟಿದೆ ಹೇ ಹನುಮಂತಾ।।18।। ಶ್ರೀರಾಮ ಮುದ್ರಿಕೆಯ ಸೀತೆಗಿತ್ತೆ। ಸಾಗರವ ಲಂಘಿಸಿದೆ ಲೀಲೆಯಲಿ ನೀನು।।19।। ಈಜಗದ ಎಂತಹ ಕಷ್ಟ ಕಾರ್ಯವು ಕೂಡ। ನಿನ್ನ ಜಯದಲಿ ಸುಲಭವಾಹುದೋ ವೀರ।।20।। ರಾಮ ಪ್ರಿಯನೆ ಶ್ರೀರಘುಪತಿ ಸಖನೆ। ನಿನ್ನಪ್ಪಣೆಯಿಲ್ಲದೆ ರಾಮ ದರ್ಶನ ವಹುದೆ।।21।। ನಿನ್ನ ಮೊರೆ ಹೋಗಲು ಸುಖಶಾಂತಿಬಹುದು। ಸರ್ವರಕ್ಷಕ ವೀರ ಪೊರೆನಮ್ಮ ತಂದೆ।।22।। ಅಮಿತ ವಿಕ್ರಮ ನೀನು ಅಮಿತ ತೇಜಾ। ನಿನ್ನ ತೇಜವ ಸಹಿಸಲಾರಿಗೂಸಲ್ಲ।।23।। ನಿನ್ನ ಸ್ಮರಣೆಯಮಾಡೆ ಭೂತಪ್ರೇತಗಳು। ಓಡುವುದು ಭಯದಿಂದ ಹೇರಾಮಭಕ್ತಾ।।24।। ನಿನ್ನ ನಾಮದ ಜಪದಿ ರೋಗ ಪರಿಹಾರ। ಗ್ರಹಪೀಡೆ ಭಯ ನಾಶ ಸರ್ವರಕ್ಷಾ।।25।। ನಿನ್ನ ನೆನೆದವರ ಸಂಕಟವ ಪರಿಹರಿಸಿ। ಮನಕೆ ನೆಮ್ಮದಿ ನೀಡೋ ಪರಮ ಕರುಣಾಳು।26।। ಶ್ರೀರಾಜರಾಮನ ಸಕಲಕಾರ್ಯಗಳನೂ। ನೀನು ಮಾಡಿದೆ ಧನ್ಯ ಧನ್ಯ ವೀರಾ।।27।। ನಿನ್ನ ನೆನೆದವರ ಮನದಾಸೆ ಫಲಿಸಲಿ। ಅಮಿತ ಫಲಸಿಗಲಿ ಯಶ ದೊರೆಯಲಿ।।28।। ನಾಲ್ಕು ಯುಗದಲಿ ಹೇ ವೀರ ನಿನ್ನ ಮಹಿಮೆ। ಜಗವೆಲ್ಲ ಪಸರಿಸಿದೆ ಜಯಶೂರ ಧೀರಾ।।29।। ಸಾಧು ಸಜ್ಜನರ ಪೊರೆಯೊ ಹೇ ಧೀರಾ। ಅಸುರ ನಾಶನ ವೀರ ಶ್ರೀರಾಮ ಸಖನೆ।।30।। ಅಷ್ಟಸಿದ್ಧಿಯ ದಾತ ನವನಿಧಿಯ ದಾತಾರ। ಈ ಶಕ್ತಿಯನು ನಿನಗೆ ಇತ್ತಳಾಸೀತೆ।।31।। ರಾಮ ನಾಮದ ಮಹಿಮೆ ತಿಳಿದ ಹೇ ಧೀರಾ। ರಘುಪತಿಯ ದಾಸ ನೀ ಅಂತರಗದಾ ಭಕ್ತಾ।।32।। ನಿನ್ನ ಪೂಜಿಸೆ ರಾಮ ಮೋದ ಪೊಂದುವನು। ಜನ್ಮ ಜನ್ಮ ದ ದುಃಖ ಬೇಗ ಕಳೆದು।।33।। ಸಕಲ ಸಜ್ಜನರೆಲ್ಲಾ ತಮ್ಮಂತ್ಯಕಾಲದಲೀ। ಶ್ರೀರಾಮನಾಪಾದ ಪೊಂದುವರು ಭಕ್ತಿಯಲಿ।।34।। ಅನ್ಯ ದೇವರ ಗೊಡವೆನಮಗೇಕೆ ಓ ಹನುಮಾ। ನಿನ್ನ ನಂಬಿರೆ

ನಾವುಸಕಲ ಸುಖವೊ।35।। ಸಂಕಟವ ಪರಿಹರಿಸಿ ಪೀಡೆಯಾ ಕಳೆದು। ಮಂಕುಬುದ್ಧಿಯ ಕಳೆಯೊ ಪವನ ತನಯಾ।।36।। ಜಯಜಯ ಹನುಮಂತ ಹೇಜ್ಞಾನವಂತಾ। ಕೃಪೆಮಾಡುತ್ವರಿತದಲಿ ಗುರುದೇವ ಎಮಗೆ।।37।। ಈ ಸ್ತೋತ್ರವಂ ನೂರು ಬಾರಿ ಪಠಿಸಿದರೇ। ಕ್ಲೇಶಗಳು ತೊಲಗಿ ಬಹು ಸುಖವು ಒದಗುವುದು।।38।। ಹನುಮನ ಚಾಲೀಸ ಸ್ತೋತ್ರವ ಪಠಿಸಿದರೆ। ಸರ್ವಸಿದ್ಧಿಯು ಲಾಭವಹುದು ಶಿವನಾಣೆ।।39।। ತುಳಸೀ ದಾಸರು ನಮ್ಮ ಹರಿದಾಸರು। ಶ್ರೀಹರಿಯ ಹೃದಯದಲಿ ಪೊಂದಿದವರು।।40।। ಶ್ರೀರಾಮಚಂದ್ರಾರ್ಪಣ ಮಸ್ತು।।

ಶ್ರೀಗುರು ಚರಣ ಸರೋಜ ರಜದಿಂ (ಹನುಮಾನ್ ಚಾಲೀಸ್-ಕನ್ನಡ ಭಾವಾನುವಾದ)

ಶ್ರೀಗುರು ಚರಣ ಸರೋಜ ರಜದಿಂ। ಮನದರ್ಪಣ ಸ್ವಚ್ಛ ಮಾಡುವೆನು। ನಾಲ್ಕು ಪುರುಷಾರ್ಥವನೀವ। ಶ್ರೀ ರಾಮ ಕೀರ್ತಿಯ ಬಣ್ಣಿಸಿ ಪಾಡುವೆನು।। ಬುದ್ಧಿಹೀನನ ಮೊರೆಯನಾಲಿಸಿ। ಪವನಕುಮಾರ ಸುಬುದ್ಧಿಯ ನೀಡು। ಪಂಚಕ್ಲೇಶ ಷಡ್ವಿಕಾರಗಳನು। ನಾಶಗೊಳಿಸಿ ಬಲಬುದ್ಧಿಯ ನೀಡು।।

ಜಯ ಹನುಮಾನ ಜ್ಞಾನಗುಣಸಾಗರ। ಜಯ ಕಪೀಶ ಮೂರ್ಲೋಕ ಪ್ರಭಾಕರ।।1।। ರಾಮಧೂತ ಅತುಲಿತ ಬಲಧಾಮ। ಅಂಜನಿ ಪುತ್ರ ಪವನಸುತ ನಾಮ।।2।। ಮಹಾವೀರ ವಿಕ್ರಮ ಬಜರಂಗೀ। ಕುಮತಿ ನಿವಾರಕ ಸುಮತಿಯ ಸಂಗೀ।।3।। ಕಾಂಚನ ರಂಜತ ಸುಂದರ ವೇಷ। ಕರ್ಣಕುಂಡಲ ಗುಂಗುರು ಕೇಶ।।4।। ವಜ್ರಗದಾಧರ ಧ್ವಜಕರಶೋಭಿತ। ಸುಂದರ ಭುಜ ಉಪವೀತ ಅಲಂಕೃತ।।5।। ಶಂಕರ ಕುವರ ಕೇಸರೀ ನಂದನ। ತೇಜಪ್ರತಾಪ ಮಹಾಜಗ ವಂದನ।।6।। ವಿದ್ಯಾವಾನ ಗುಣೀ ಅತಿ ಚತುರ। ರಾಮಕಾರ್ಯವೆಸಗೆ ಬಲು ಕಾತುರ।।7।। ಪ್ರಭುಕಥೆ ಕೇಳುತ ಮೈಮರೆವಾತ। ಮನದಿ ರಾಮ ಸೌಮಿತ್ರಿ ಸೀತ।।8।। ಸೂಕ್ಷ್ಮರೂಪವನು ಸೀತೆಗೆ ತೋರಿದೆ। ವಿಕಟರೂಪದಲಿ ಲಂಕೆಯ ದಹಿಸಿದೆ।।9।। ಭೀಮ ರೂಪದಲಿ ಅಸುರರ ಕೊಂದೆ। ರಾಮಚಂದ್ರನ ಕಾರ್ಯವೆಸಗಿದೆ।।10।। ಮೂಲಿಕೆ ತಂದು ಸೌಮಿತ್ರಿಯ ಪೊರೆದೆ। ರಾಮಪ್ರೀತಿಯ ಅಪ್ಪುಗೆ ಪಡೆದೆ।।11।। ಭರತನಂತೆ ನೀನು ಪ್ರಿಯಸೋದರ। ಎನುತ ಹೊಗಳಿದ ಶ್ರೀರಘುವೀರ।।12।। ಸಹಸ್ರ ಮುಖವು ನಿನ್ನ ಸ್ತುತಿಸಿದೆ। ಎನ್ನುತ ಶ್ರೀಪತಿ ಆಲಿಂಗಿಸಿದ।।13।। ಸನಕಬ್ರಹ್ಮಾದಿ ಮುನಿವರೇಣ್ಯರು। ನಾರದಶಾರದೆ ಆದಿಶೇಷರು।।14।। ಯಮಕುಬೇರ ದಿಕ್ಪಾಲಕರೆಲ್ಲರು। ಕವಿಕೋವಿದರು ನಿನ್ನ ಸ್ತುತಿಸಿಹರು।।15।। ಸುಗ್ರೀವಗೆ ನೀ ಸಹಾಯ ಮಾಡಿದೆ। ರಾಮಸಖ್ಯದಿ ರಾಜ್ಯ ಕೊಡಿಸಿದೆ।।16।। ನಿನ್ನುಪದೇಶ ವಿಭೀಷಣ ಒಪ್ಪಿದ। ಲಂಕೇಶನಾದುದ ಜಗವೇ ಬಲ್ಲದು।।17।। ಮಧುರ ಹಣ್ಣೆಂದು ತಿಳಿದು ರವಿಯನು। ಪಿಡಿಯೆ ಹಾರಿದೆ ಸಹಸ್ರ ಯೋಜನ।।18।। ಪ್ರಭುಮುದ್ರಿಕೆಯನು ಧರಿಸಿ ಬಾಯಲಿ। ಶರಧಿ ಲಂಘನವು ಸೋಜಿಗವಲ್ಲ ।।19।। ಎಷ್ಟೇ ಕಠಿಣ ಕಾರ್ಯವೇ ಇರಲಿ। ಅಷ್ಟೇ ಸುಲಭ ನಿನ್ನ ಕೃಪೆಯಿಂದಲಿ।।20।। ರಾಮನ ದ್ವಾರಪಾಲಕ ನೀನು। ನಿನ್ನಾಜ್ಞೆ ವಿನ ಒಳ ಬರಲಾರೆನು।।21।। ಸುಖವೆಲ್ಲ ನಿನಗೆ ಶರಣಾಗಿ ಇರಲು। ಭಯವೇಕೆ ಎಮಗೆ ನೀ ರಕ್ಷಿಸಲು।।22।। ನಿನ್ನ ತೇಜ ನಿನ್ನಿಂದಲೆ ಶಮನ। ನಿನ್ನ ಘರ್ಜನೆಗೆ ತ್ರಿಲೋಕ ಕಂಪನ।।23।। ಮಹಾವೀರ ನಿನ್ನ ನಾಮ ಕೇಳಲು। ಸನಿಹಕೆ ಬರದು ಭೂತಪ್ರೇತಗಳು।।24।। ಹನುಮ ನಿನ್ನನು ಸದಾ ಭಜಿಸಲು। ನಾಶವಾಗುವುವು ರೋಗರುಜಿನಗಳು ।।25।। ಹನುಮನ ಧ್ಯಾನಿಸೆ ತ್ರಿಕರಣದಿಂದ। ಕಷ್ಟಕಾರ್ಪಣ್ಯವು ದೂರಾ ಗುವುದು ।।26।। ತಪಸ್ವೀ ರಾಮನ ಕಾರ್ಯಗಳೆಲ್ಲವ। ಯಶಸ್ಸಿನಿಂದ ಸಫಲಗೊಳಿಸಿದವ।।27।। ನೆರವೇರಿಸುತಲಿ ಭಕ್ತರಾಭೀಷ್ಟವ। ಅಮಿತ ಫಲವನು ನೀಕರುಣಿಸುವೆ ।।28।। ನಾಲ್ಕು ಯುಗದಲೂಪ್ರತಾಪ ನಿನ್ನದೆ। ನಿನ್ನಯ ಪ್ರಭೆಯು ಲೋಕ ಬೆಳಗಿದೆ।।29।। ಸಾಧುಸಂತರನು ಪೊರೆದು ಸಲಹಿದೆ। ಅಸುರರ ಕೊಂದು ರಾಮಪ್ರಿಯನಾದೆ।।30।। ಅಷ್ಟಸಿದ್ಧಿ ನವನಿಧಿಯ ಕೊಡುವವನ। ಜಾನಕಿ ಮಾತೆಯಿಂ ವರವ ಪಡೆದವ।।31।। ನಿನ್ನಲಿ ಇರಲು ರಾಮರಸಾಯನ। ಸದಾರಘುಪತಿಯ ದಾಸನು ನೀನು।।32।। ನಿನ್ನ ಭಜಿಸಿದವ ರಾಮನ ಪಡೆವ। ಜನ್ಮ ಜನ್ಮದ ದುಃಖವ ಮರೆವ।।33।। ಜೀವಿಸಿರಲು ಹರಿ ಭಕ್ತನೆನಿಸುವ। ಅಂತ್ಯ ಸಮಯದಿ ರಾಮನ ಸೇರುವ।।34।। ಅನ್ಯ ದೇವರನು ಭಜಿಸದಿದ್ದರು। ಹನುಮನ ಸೇವಿಸೆ ಸುಖವ ಪಡೆವರು।।35।। ವೀರಹನುಮನ ಭಜಿಸಲು ಭಕ್ತರು। ವ್ಯಾಧಿ ಸಂಕಟದಿ ಮುಕ್ತಿ ಪಡೆವರು।।36।। ಜಯಜಯ ಜಯ ಹನುಮಾನ ಗೋಸಾಯಿ। ಗುರುವಿನಂದದಿ ಕೃಪೆ ಇಡು ಸಾಯಿ।।37।। ನೂರು ಬಾರಿ ಇದ ಪಠಣ

ಮಾಡಿದವ। ಬಂಧನ ಕಳಚುತ ನಿಜ ಸುಖ ಪಡೆವ॥38॥ ಯಾರು ಪಠಿಸುವರೊ ಹನುಮ ಚಾಲೀಸ। ಸಿದ್ಧಿಪಡೆಯುವರು ಸಾಕ್ಷಿ ಗೌರೀಶ॥39॥ತುಲಸೀದಾಸ ಸದಾ ಹರಿಭಕ್ತ। ವಾಸಿಸು ಎನ್ನ ಹೃದಯದಿ ನಾಥ॥40॥ ಪರಮ ಭಕ್ತ ಶ್ರೀ ತುಲಸೀದಾಸರ। ಚರಣಕೆ ವಂದಿಪೆ ನಿತ್ಯ ನಿರಂತರ॥41॥ ಹನುಮನ ದಯೆಯಿಂ ಆತನ ಚರಿತೆಯ। ಕನ್ನಡ ಭಾಷೆಗೆ ಬರೆವಂತಾಯ್ತು॥42॥ ಇಂತು ಚೈತನ್ಯವ ನೀಡಿದ ಪ್ರಭುವನು ಚೈತನ್ಯದಾಸ ಭಕ್ತಿಲಿ ನಮಿಪನು॥43॥

ಮಂಗಳ ಶ್ಲೋಕ:- ಪವನ ತನಯ ಸಂಕಟಹರಣ। ಮಂಗಳ ಮೂರುತಿ ರೂಪ। ರಾಮ ಸೌಮಿತ್ರಿ ಸೀತಾ ಸಹಿತ ನೆಲೆಸು ಹೃದಯದಿ ಸುರಭೂಪ॥

ಶ್ರೀ ಗುರು ಚರಣ ಸರೋಜ ಧೂಳಿ (ಹನುಮಾನ್ ಚಾಲೀಸಾ-ಕನ್ನಡಾನುವಾದ)

ಶ್ರೀ ಗುರು ಚರಣ ಸರೋಜ ಧೂಳಿ ಮನ ಕನ್ನಡಿ ಎನ್ನ ಸ್ವಚ್ಛಗೊಳಿಸಲೀ॥ ನಾಲಿಗೆ ರಘುವರನಾ ನಿರ್ಮಲ ಗುಣಗಳ ಪಾಡಲೀ ಬುದ್ಧಿಯು ಎನ್ನಾ ನೆನಪಿಗೆ ಬರಲೀ ನೆನೆಯಲಿ ಪವನ ಕುಮಾರನಾ ಬಲಬುದ್ಧಿ ವಿದ್ಯವ ನೀಡಲೀ ಶೋಕ ವಿಕಾರವ ಕಳೆಯಲೀ॥ ಚೌಪಾಯಿ॥ ಜಯ ಹನುಮಾನ್ ಜ್ಞಾನಗುಣ ಸಾಗರ ಜಯ ಮೂರ್ಲೋಕ ಪ್ರಕಾಶ ಕಪೀಶ್ವರ॥1॥ ರಾಮದೂತ ಅತಿ ಶಕ್ತಿ ಬಲಧಾಮಾ ಅಂಜನಿ ಪುತ್ರ ಪವನ ಸುತ ನಾಮಾ॥2॥ ವಜ್ರಕಾಯ ಶೌರ್ಯ ಧೈರ್ಯಪರಾಕ್ರಮಿ ದುರ್ಜನನಾಶನ ಸಜ್ಜನ ಪ್ರೇಮೀ॥3॥ ಸುಂದರ ಕಾಯ ಮೈಕಾಂತಿ ಹೊಂಬಣ್ಣಾ ಗುಂಗುರು ಕುರುಳಿನ ಕುಂಡಲ ಚಿನ್ನ॥4॥ ಕೈಯಲಿ ವಜ್ರ ಪತಾಕೆ ಮನೋಹರ ಹೆಗಲಲಿ ರಂಜಿಪ ಬಿಳಿ ಜನಿವಾರ॥5॥ ಶಂಕರಸುತನೇ ಕೇಸರಿನಂದನಾ ತೇಜ ಪ್ರತಾಪ ಮಹಾ ಜಗವಂದ್ಯಾ॥6॥ ವಿದ್ಯಾವಂತ ಗುಣೀ ಬಲು ಚತುರಾ ರಾಮ ಕಾರ್ಯದಲಿ ಅತಿ ಬಲು ಆತುರಾ॥7॥ ಪ್ರಭು ಚರಿತ್ರ ಕೇಳಲಾನಂದ॥ ರಾಮಲಕ್ಷ್ಮಣ ಸೀತಾಮನಕಂದಾ॥8॥ ಸೂಕ್ಷ್ಮರೂಪದಲಿ ಸೀತೆಯಹುಡುಕಿದೇ। ವಿಕಟರೂಪದಲಿ ಲಂಕೆಯ ದಹಿಸಿದೇ॥9॥ಭೀಮ ರೂಪದಿ ಅಸುರರ ಕೊಂದೇ ಶ್ರೀರಾಮಚಂದ್ರಗೆ ಗೆಲುವನು ತಂದೇ॥10॥ತಂದು ಸಂಜೀವಿನಿ ಲಕ್ಷ್ಮಣನ ನುಳಿಸಿದೆ ಆಲಂಗಿಸೆ ರಾಮ ಹರ್ಷದಿಂದುಬ್ಬಿದೇ॥11॥ ಹೊಗಳಲು ಕೀರ್ತಿ ಶ್ರೀರಾಮಚಂದ್ರಾ ನಿನ್ನ ಭರತಗೆ ಸಮ ಪ್ರಿಯನೆಂದಾ॥12॥ ಸಾವಿರ ನಾಲಿಗೆ ಸಾಲದು ಹೊಗಳಲು ಆದಿಶೇಷಗೆಂದು ನಿನ್ನನ್ನು ತಬ್ಬಲು॥13॥ ಸನಕಾದಿ ಬ್ರಹ್ಮಾದಿ ಮುನಿಗಳು।ನಾರದ ಶಾರದ ಆದಿಶೇಷನೂ॥14॥ ಯಮ ಕುಬೇರ ದಿಕ್ಪಾಲಕರೆಲ್ಲಾ ಗುಣಕಥನವ ಗೈಯುತಲಿಹರೂ॥15॥ ನೀಉಪಕಾರ ಸುಗ್ರೀವಗೆ ಗೈದೇರಾಮ ಮಿಲನವಾ ರಾಜ್ಯ ಸಂಪದವಾ॥16॥ನಿನ್ನಯ ಮಾತಿಗೆ ನಡೆದ ವಿಭೀಷಣ ಜಗವರಿಯೇ ಲಂಕಾಧಿಪನಾದ॥17॥ ಯೋಜನ ಸಹಸ್ರದೊಳಿರುವ ಸೂರ್ಯನನು ಫಲವೆಂದು ಬಗೆದು ಆಕಾಶದಿಜಿಗಿದೇ॥18॥ ಮುದ್ರಿಕೆಯನು ಬಾಯೊಳಗಿರಿಸಿ ನೀ ವಾರಿಧಿದಾಟಿ ಲಂಕೆಯೊಳಿದೇ॥19॥ಕಷ್ಟದ ಕಾರ್ಯವು ಏನೇ ಇರಲೀ ಸುಗಮವಾಗುವುದು ನಿನ್ನ ದಯದೀ॥20॥ ನಿನ್ನಯ ಅನುಗ್ರಹ ಅನುಮತಿ ಇಲ್ಲದೇ ರಾಮಕೃಪೆಯು ಸಾಧ್ಯವೇ ನೀನಿಲ್ಲದೇ॥21॥ ಶರಣಾಗತ ರಕ್ಷಕನಿರುವಾಗೇ ಬೇರೇನು ಭಯ ಶರಣಾಗತ ಗೇ॥22॥ ಅಗ್ನಿ ತೇಜ ಭಕ್ತಗೆ ಬೆಳದಿಂಗಳು ಘರ್ಜಿಸೆ ಕಂಪಿಪ ತ್ರೈಲೋಕ್ಯಗಳು॥23॥ಭೂತಪ್ರೇತ ನಿನ್ನ ಬಳಿಬರಲಾರವು ಮಹಾವೀರ ನಿನ್ನ ನಾಮವ ಜಪಿಸೇ॥24॥ ರೋಗ ರುಜಿನಗಳು ತೊಲಗಿ ಪೋಗುವುವು ಜಪಿಸಲು ಹನುಮನ ನಾಮವನು॥25॥ ಸಂಕಟ ಮೋಚನನಲ್ಲವೇ ನೀನು ಕಾಯವಾಚಾ ಮನಸಾ ಶುದ್ಧಗೆ॥26॥ಸಕಲರ ಕಾಯುವ ಶ್ರೀ ರಾಮಗಿಂತ ಕಾರ್ಯವ ಸಾಧಿಸಿ ಜೈಸಿದೆ ನೀನು॥27॥ ಭಕ್ತರ ಬೀಷ್ಟವನೀಡೇರಿಸುವೇ ಜೀವನ ಸಫಲವ ಗೈಯುತಲಿರುವೇ॥28॥ನಾಲ್ಕು ಯುಗಗಳಲಿ ಮೆರೆದಿಹೆ ನೀನು ಜಗಜ್ಯೋತಿರೂಪ ಪ್ರಕಾಶನು ನೀನು॥29॥ ಸಾಧು ಸಂತರಾ ರಕ್ಷಕ ನೀನೇ ಅಸುರ ನಿಕಂದನ ರಘು ಪ್ರಿಯ ನೀನೇ॥30॥ಅಷ್ಟಸಿದ್ಧಿ ನವನಿಧಿಗಳಬಲದೀ। ನೀಡುವೆ ನೀ ಸೀತಾ ವರದಾನದೀ॥31॥ ರಾಮ ರಸಾಯನ ನಿನ್ನ ಸಮೀಪವೇ। ರಘುಪತಿ ಸೇವೆಯು ನಿನ್ನ ದಾಸ್ಯವೇ॥32॥ ರಾಮನನುಗ್ರಹ ನಿನಾಗಾಗಲೆಂದು ಜನುಮಜನುಮ ದುಃಖ ತೊಲಗಲಿ ಎಂದು॥33॥ ಅಂತಕಾಲ ರಘುವರಪುರ ಸೇರುವೇ। ಹರಿಭಕ್ತ ನೀನೆಂದು ಹರಸಿರುವೇ॥34॥ ಸಕಲ ಇಷ್ಟಾರ್ಥಕ ಕೊಡುವನು ಹನುಮ ಅನ್ಯದೇವತಾ ಚಿತ್ತಿದೇನು॥35॥ ಸಂಕಟ ಕಷ್ಟ ನಷ್ಟ ತೊಲಗುವುದು ಧ್ಯಾನಿಸೆ ಹನುಮನ ದುಃಖಗಳು॥36॥ ಜೈ ಜೈ ಜೈ ಹನುಮಂತ ಹೇ ಸ್ವಾಮೀ। ಕೃಪಾಕರನೇ ಗುರು ಅಂತರಯಾಮೀ॥37॥ ನೂರು ಬಾರಿ

ಈಪಾಠವನೊದಲು ಬಂಧನ ಭೇಧನ ಸುಕ ಪ್ರದಾನ॥38॥ ಶ್ರದ್ಧಾಪಾಠದಿಃಷ್ಟವ ಪಡೆವೇ ಸಾಕ್ಷಿ ಇದಕೆ ಗೌರೀಶನೇ ಅಲ್ಲವೇ॥39॥ ತುಳಸೀದಾಸ ಸದಾ ನಿನ್ನದಾಸ ದಯಪಾಲಿಸೋ ನಿನ್ನ ಹೃದಯ ನಿವಾಸ॥40॥ ಪವನ ತನಯ ಸಂಕಟಹರಣ ಮಂಗಳ ಮೂರುತಿ ರೂಪನೇ ಶ್ರೀರಾಮಲಕ್ಷ್ಮಣ ಸೀತಾ ಸಮೇತ ಹೃದಯದಲಿರು ಸುರ ಭೂಪನೇ॥ ಇತಿ ಶ್ರೀ ಹನುಮಾನ್ ಚಾಲೀಸಾ ಸಂಪೂರ್ಣಂ॥

ಶ್ರೀ ಹನುಮ ಗುರುದೇವ (ಹನುಮಾನ್‌ಚಾಲೀಸಾ-ಕನ್ನಡಾನುವಾದ) ರಾಗ: ದರ್ಬಾರೀಕಾನಡ

ಶ್ರೀ ಹನುಮ ಗುರುದೇವ ಚರಣಗಳು। ಇಹಪರ ಸಾಧಕ ಶರಣಗಳು॥ಪ॥ ಬುದ್ಧಿ ಹೀನತೆಯಿರುವ ತನುಗಳು ಬದ್ಧುದಗಳೆಂದು ನುಡಿವ ಸತ್ವಗಳು॥ಅ.ಪ.॥ ಜಯ ಹನುಮಂತ ಜ್ಞಾನಗುಣ ವಂದಿತ ಜಯಪಂಡಿತ ತ್ರಿಲೋಕ ಪೂಜಿತ॥1॥ ರಾಮ ದೂತ ಅತುಲಿತ ಬಲಧಾಮ। ಅಂಜನಾ ಪುತ್ರ ಪವನ ಸುತ ನಾಮ॥2॥ ಉದಯ ರವಿಯನು ಮಧುರ ಫಲವೆಂಬ। ಭಾವನ ಲೀಲಾಮೃತವನು ಸವಿದ॥3॥ ಕಾಂಚನ ವರ್ಣ ವಿರಾಜಿತ ವೇಷ ಕುಂಡಲ ಮಂಡಿತ ಕುಂಚಿತ ಕೇಶ॥4॥ ಶ್ರೀ ರಾಮ ಸುಗ್ರೀವರ ಮೈತ್ರಿಯ ಕಲ್ಪಿಸಿ ರಾಜಪದವಿಯಲಿ ಸುಗ್ರೀವನ ನಿಲ್ಲಿಸಿ॥5॥ ಜಾನಕೀ ಪತಿಯ ಮುದ್ರಿಕೆ ಕೈಗೊಂಡು ಜಲಧಿಯಲಂಘಿಸಿ ಲಂಕೆ ಸೇರಿಕೊಂಡು॥6॥ ಸೂಕ್ಷ್ಮ ರೂಪದಲಿ ಸೀತೆಯನ್ನರಸಿ ವಿಕಟ ರೂಪದಲಿ ಲಂಕೆಯ ದಹಿಸಿ॥7॥ ಭೀಮ ರೂಪದಲಿ ಅಸುರರನಳಿಸಿದ ರಾಮ ಕಾಯವನು ಸಫಲಗೊಳಿಸಿದ॥8॥ಶ್ರೀ॥ ಸೀತೆ ಸುಳಿವ ಕಂಡು ಮರಳಿದ ನಿನ್ನಕಂಡು ಶ್ರೀರಘುವೀರ ನಿನ್ನಾಲಂಗಿಸಿ ಕೊಂಡು॥9॥ ಪರಿಪರಿ ವಿಧದೊಳು ನಿನ್ನ ಕೊಂಡಾಡಲು। ಮುಂದಿನ ಕಾರ್ಯವ ನಿರ್ವಹಿಸೆನಲು॥10॥ ವಾನರರೊಡನೆವಾರಿಧಿ ದಾಟಿ। ಲಂಕೇಶನನು ಎದುರಿಸಿ ಹೋರಿ॥11॥ ಅತಿಘೋರದಲಿ ಸಮರವ ಸಲಿಸಿದ ಅಸುರ ಸೇನೆಯ ಉಸಿರ ಹೀರಿದ॥12॥ಶ್ರೀ॥ ಸೌಮಿತ್ರಿ ಮೂರ್ಛೆಯೊಳು ರಾಮ ಕಂಗೆಡಲು ಸಂಜೀವಿನಯ ತಂದ ಪ್ರಾಣ ಪ್ರದಾತ॥13॥ ರಾಮ ಲಕ್ಷ್ಮಣರ ಅಸ್ತ್ರ ಧಾಟಿಗೆ। ಅಸುರ ವೀರರು ಅಸುವನು ನೀಗೆ॥14॥ ಪತಿಯೇ ಇಲ್ಲದ ಶ್ರೀ ರಾಮಬಾಣವು ನೆರವೇರಿಸಿತು ರಾವಣ ಸಂಹಾರವನು॥15॥ ರಾವಣನಳಿದ ಆ ಲಂಕಾಪುರದ ರಮಣನಾಗಿ ವಿಭೀಷಣನ ನಿಲ್ಲಿಸಿದ॥16॥ ಸೀತಾ ರಾಮರು ಹರ್ಷಿತರಾದರು ಮೂರ್ಲೋಕದಲಿ ಆರತಿ ಗೊಂಡರು॥17॥ ಅಯೋಧ್ಯಾ ಪುರವು ನಕ್ಕುನಲಿಯಿತು। ಆನಂದಾಶ್ರುವು ಉಕ್ಕಿಹರಿಯಿತು॥18॥ ಸೀತಾರಾಮರ ಸುಂದರ ಮಂದಿರವು ಶ್ರೀಕಾಂತ ಪದವು ನಿನ್ನಯ ಹೃದಯವು॥19॥ ರಾಮ ಚರಿತ ಕರ್ಣಾಮೃತ ಗಾನ ರಾಮ ನಾಮ ರಸಾಮೃತ ಪಾನ॥20॥ ದುರ್ಗಮವಾದ ಯಾವ ಕಾರ್ಯವಾದರು ಸುಗಮವೇ ಅಹುದು ನಿನ್ನ ಕೃಪೆಯಿರಲು॥21॥ ದೊರೆವುದು ಸುಖವು ನಿನ್ನಯ ಶರಣೆನಲು ತೊಗಲುವುದು ಭಯ ನಿನ್ನ ರಕ್ಷಣೆಯಿರಲು॥22॥ ರಾಮದ್ವಾರದಪಾಲಕ ನಿನ್ನಯ ಕಟ್ಟಳೆ ಮೀರೆ ಬ್ರಹ್ಮಾದ್ಯರಿಗೂ ಭಯ॥23॥ಭೂತ ಪಿಶಾಚಿ ಶಾಕಿನಿ ಡಾಕಿನಿ ಭಯಗೊಂಡೊಡೆ ನಿನ್ನ ನಾಮಜಪಕೇಳಿ॥24॥ಶ್ರೀ॥ ಧ್ವಜ ವಿರಾಜ ವಜ್ರಶರೀರ ಭುಜ ಬಲ ತೇಜ ಗದಾಧರ॥25॥ಈಶ್ವರಾಂಶ ಸಂಭೂತ ಪವಿತ್ರ ಕೇಸರಿ ಪುತ್ರ ಪಾವನ ಗಾತ್ರ॥26॥ ಸನಕಾದ್ಯರು ಬ್ರಹ್ಮಾದಿ ಸುರರು ಶಾರದ ನಾರದ ಆದಿಶೇಷರು॥27॥ ಯಮ ಕುಬೇರ ದಿಕ್ಪಾಲರು ಪುಳಕಿತರು ನಿನ್ನಕೀರ್ತಿ ಗಾನದೊಳು॥28॥ಶ್ರೀ॥ ಸೋದರ ಭರತ ಸಮಾನಯೆಂದು ಶ್ರೀರಾಮನೆಣಿಸಿದ ಶ್ರೇಷ್ಠ ಹನುಮ॥29॥ ಇಂದ್ರನು ನೀನು ಭಕ್ತರಪಾಲಿಗೆ ಕಾಲನು ನೀನು ಅಸುರರ ಪಾಲಿಗೆ॥30॥ ಅಷ್ಟಸಿದ್ಧಿ ನವನಿಧಿಗಳದಾತನು ಆದೆಸೀತೆಯ ವರದಿಂದ ನೀನು॥31॥ ರಾಮ ರಸಾಮೃತ ಪಾನವ ಮಾಡಿದ ಮೃತ್ಯುಂಜಯನೆಂದು ಜಗದಿ ಬೆಳಗಿದ॥32॥ಶ್ರೀ॥ ನಿನ್ನ ನಾಮ ಭಜನೆ ಶ್ರೀರಾಮ ರಂಜನೆ। ಜನ್ಮ ಜನ್ಮಾಂತರ ದುಃಖ ಭಂಜನೆ॥33॥ ರಘುವರ ದಾಸನು ಎಲ್ಲೇ ಇರಲಿ ಕೊನೆಗೆ ರಾಮನ ಸೇರುವ ನಿಜದಲಿ॥34॥ ಅನ್ಯ ಚಿಂತನೆಯು ಮನದಲಿ ಹೊರೆಯು ಸ್ಥಿರದಲಿ ಮಾರುತಿ ಸೇವೆಯು ಸುಖವು॥35॥ ಎಲ್ಲೆಲ್ಲಿರುವುದೋ ಶ್ರೀರಾಮಕೀರ್ತನೆ ಅಲ್ಲಲ್ಲಿನಡೆವುದು ಹನುಮನ ನರ್ತನೆ॥36॥ಶ್ರೀ॥ ಶ್ರದ್ಧೆಯಿಂದಲಿ ನೀವಿದನಾಲಿಸಿ ಬಹು ಶುಭಫಲಗಳು ಬರುವುದರಸಿ॥37॥ ಭಕ್ತಿ ಪುರದೊಳು ಗಾನವ ಮಾಡಲು। ಮುಕ್ತಿ ದೊರೆವುದು ಗೌರೀಶರಾಣೆಗು॥38॥ ತುಲಸಿದಾಸ ಹನುಮ ಚಾಲೀಸ ಸದಾ ಜನರು ಸಿರಿಗನ್ನಡದಲಿ ಹಾಡಲು ॥39॥ ಸುಂದರಹರಿಸುತ ಸುಮಧುರ ನುಡಿಯಲಿ। ದೋಷಗಳಿರಲು ಮನ್ನಿಸಿ ದಯೆಯಲಿ॥40॥ಶ್ರೀ॥ ಮಂಗಳ ಆರತಿಗೊಳು

ಹನುಮಂತ।ಸೀತಾರಾಮ ಲಕ್ಷ್ಮಣ ಸಮೇತ। ನನ್ನಂತರಾತ್ಮದಿ ನೆಲೆಸೋ ಅನಂತ ನಾನಿನ್ನ ಪಂಥ ಶ್ರೀ ಹನುಮಂತ।।

ಶ್ರೀಗುರು ಹನುಮಾ ವಂದಿತ ಚರಣ (ಹನುಮಾನ್‌ಚಾಲೀಸಾ-ಕನ್ನಡಾನುವಾದ) ರಾಗ:ಭೂಪಾಲ್

ಶ್ರೀಗುರು ಹನುಮಾ ವಂದಿತ ಚರಣ। ಇಹಪರ ಸಾಧಕ ಕರುಣಾಭರಣ। ಸುಜ್ಞಾನ ತುಂಬುವ ಪ್ರೇರಣ ಕಾರಣ। ಶ್ರೀ ಸೀತಾರಾಮಚಂದ್ರ ಪ್ರಭುವಿಗೆ ಚರಣ।। ರಾಮಲಕ್ಷ್ಮಣ ಜಾನಕೀ ಎಂದು ವಂದಿಸಿ ಹನುಮಗೆ ಎಲ್ಲರೂ ಬಂದು। ಶ್ರೀರಾಮ ಲಕ್ಷ್ಮಣ ಜಾನಕಿ ಎಂದು ವಂದಿಸಿ ಹನುಮಗೆ ಎಲ್ಲರೂ ಬಂದು। ಜಯ ಹನುಮಂತ ತ್ರಿಲೋಕ ಪೂಜಿತ ನವವ್ಯಾಕರಣ ಪಂಡಿತ ಗುಣವಂತ। ಶ್ರೀರಾಮಧೂತ ಅಂಜನಾ ಪ್ರಿಯಸುತ। ಪವಮಾನ ನಂದನ ವೀರ ಬಲವಂತ। ಕಪಿಗಳ ನಾಯಕ ವಿಕ್ರಮ ವೀರ। ದುಷ್ಟ ಶಿಕ್ಷಕ ಸಾಧು ಜನೋದ್ಧಾರ। ಕಾಂಚನ ವರ್ಣ ಪ್ರಕಾಶದಿ ಹೊಳೆವ। ಕರ್ಣಕುಂಡಲವ ಧರಿಸಿ ನಿಂದವ। ಯಜ್ಞೋಪವೀತಧರ ಸುಂದರ ಮೂರುತಿ। ಕೌಪೀನಧರಶ್ರೀ ರಾಮಭಕ್ತ ಮಾರುತಿ। ಕೇಸರಿ ಪುತ್ರನೇ ಶಂಕರಾಂಶ ಸಂಭೂತನೇ ಸರ್ವಪೂಜಿತನೆ ಭಕ್ತಪರಿಪಾಲನೆ। ಕಲ್ಯಾಣ ಗುಣನಿಧಿ ಅತಿಚತುರನೆ ವರ ಶ್ರೀರಾಮ ಕಾರ್ಯ ದುರಂದರ ಮಹಾವೀರ। ಶ್ರೀರಾಮಚರಿತಾಮೃತಸವಿದ ಹನುಮಂತ। ಹೃದಯದಲ್ಲಿ ಸೀತಾರಾಮರ ಕಂಡ ಧೀಮಂತ। ಸೀತಾಮಾತೆಯ ಕಂಡ ಸೂಕ್ಷ್ಮರೂಪದಿ। ಲಂಕೆಯ ದಹಿಸಿದ ಭಯಂಕರ ರೂಪದಿ। ಭೀಮರೂಪದಿ ಅಸುರರ ಹರಿಸಿದ। ಶ್ರೀರಾಮ ಜಯರಾಮ ಎಂದು ವಂದಿಸಿದ। ಸಂಜೀವಿನಿ ತಂದು ಲಕ್ಷ್ಮಣನ ಬದುಕಿಸಿದ। ಶ್ರೀರಾಮ ಚಂದ್ರನಿಂದ ಆಲಿಂಗನ ಪಡೆದ। ಭರತನಂತೆ ಪರಮ ಭಕ್ತನೆಂದೆನಿಸಿದ। ಬಾಲ ಹನುಮ ಬಹು ಸಂತಸ ಪಡೆದ। ಪುರುಷೋತ್ತಮ ಶ್ರೀ ರಾಮ ಭಕ್ತ ಹನುಮಂತ। ಶ್ರೀರಾಮ ಜಾನಕಿ ಸೇವಾ ನಿರತ। ಬ್ರಹ್ಮ ಸನಕ ಮುನಿ ನಾರದಾದಿಗಳೆಲ್ಲರೂ। ವಾಣಿಪಾರ್ವತಿಯರು ಹೊಗಳುವರು। ಸಕಲ ದಿಕ್ಪಾಲಕ ದೇವಾದಿ ದೇವರು ವಿದ್ವನ್‌ಮಣಿಗಳು ಗುಣಗಾನ ಮಾಡುವರು। ಸುಗ್ರೀವಗೆ ರಾಮನ ಸಖ್ಯವ ಕೊಡಿಸಿದೆ। ಸಂಕಟ ಹರಿಸಿ ರಾಜ್ಯವನುಳಿಸಿದೆ। ಮನ್ನಿಸಿ ವಿಭೀಷಣನ ರಾಮಪಕ್ಷ ಸೇರಿಸಿದೆ। ಲಂಕಾಧಿಪತಿಯ ವಂದನೆ ಸ್ವೀಕರಿಸಿದೆ। ರವಿಯನ್ನೇ ಹಣ್ಣೆಂದು ತಿನ್ನಲು ನೋಡಿದೆ। ದೇವಾದಿ ದೇವರಿಂದ ವರವನು ಪಡೆದೆ। ಸಾವಿರ ಯೋಜನಾ ಹಾರಿದ ಧೀರ। ಮಾತೆಗೆ ಮುದ್ರಿಕೆ ಇತ್ತ ಗಂಭೀರ। ನಿನ್ನನು ನೆನೆದರೆ ಕಷ್ಟವೆಲ್ಲ ದೂರ। ಭಕ್ತರ ಸಲಹುವ ಕರುಣಸಾಗರ। ಶ್ರೀರಾಮ ಪಾದಸೇವ ದುರಂಧರ ನೀನು। ನಿನ್ನ ಸೇವ ಕಾರ್ಯದಿ ಪ್ರಸನ್ನ ರಾಮನು। ನಿನ್ನ ಭಕ್ತರಿಗೆ ಶ್ರೀರಾಮನಾಮ ಕರುಣಿಸು। ಶರಣು ಬಂದವರಿಗೆ ಅಭಯವ ಸಲ್ಲಿಸು। ಅತಿ ಬಲವಂತ ತೇಜೋವಂತ। ಮೂರು ಲೋಕಕ್ಕೆ ಅತಿ ಹಿತವಂತ। ಸ್ಮರಣೆ ಮಾತ್ರದಲ್ಲಿ ಭೂತಗ್ರಹ ನಾಶ। ನಿಮಿಷ ಮಾತ್ರದಲ್ಲಿ ಮನದಲಿ ಹರುಷ। ಸದಾ ನಿನ್ನ ನಾಮ ಸ್ಮರಣೆಯ ಮಾಡಲು। ರೋಗಾದಿ ಪೀಡೆಗಳು ಮಾಯವಾಗಲು। ಚಿತ್ತಶುದ್ಧನಾಗಿ ಭಜನೆಯ ಮಾಡುತ್ತ। ಪಾವನ ನಾಮ ಶ್ರೀರಾಮ ಎಂದೆನ್ನುತ। ತಪೋಧನರನ್ನು ರಕ್ಷಿಸುವ ರಾಮಚಂದ್ರ। ಕಪಿಸಾರ್ವಭೌಮ ಮಾರುತಿ ವೀರಭದ್ರ। ಜನ್ಮ ಸಾರ್ಥಕವು ಜಪತಪ ಅನುಷ್ಠಾನ। ಬೇಡಿದ ಭಕ್ತರಿಗೆ ನೀಡುವೆ ವರದಾನ। ನಾಲ್ಕು ಯುಗಗಳಲ್ಲಿ ಪ್ರತಾಪಿ ಹನುಮ। ಜಗತ್ತಿಗಾಧಾರ ನಿನ್ನ ನಾಮವೇ ಹನುಮ। ಜಗದಲ್ಲಿ ತುಂಬಿದೆ ಮಾರುತಿ ಕೀರುತಿ। ಶ್ರೀರಾಮಚಂದ್ರ ನಿನ್ನ ಆರಾಧ್ಯ ಮೂರುತಿ। ಜಗನ್ಮಾತೆ ಶ್ರೀ ಜಾನಕಿ ದಯದಿಂದ। ಅಷ್ಟ ಸಿದ್ಧಿಯ ಪಡೆದೆ ಜಯವನು ಹೊಂದಿದೆ। ಸಕಲರಿಗೆ ನೀ ರಾಮರಸ ಕುಡಿಸಿದೆ। ಶ್ರೀ ರಾಮ ಜಪದಲ್ಲಿ ಮನವ ನಿಲ್ಲಿಸಿದೆ। ಜನ್ಮ ಜನ್ಮಗಳ ಪಾಪವ ಹರಿದ ಪವಮಾನ ನಂದನ ಮಹಾಭಕ್ತನೆನಿಸಿದೆ। ನೀಚಯೋನಿಯಲ್ಲಿ ಜನಿಸಿದ ಜನರು। ಹರಿಭಕ್ತಮುಕ್ತರಾದುದು ನಿನ್ನವರ। ಸಿರಿಸಂಪದವು ನಿನ್ನ ಪೂಜಾಫಲ। ನಿನ್ನ ಸೇವೆಯೆ ಅತಿಹಿತ ಮಹಾಬಲ। ಭಕ್ತರ ಸಂಕಟ ಹರಿಸುವ ದೇವ ನಂಬಿದರೆ ಹರಿಸುವೆ ಎಲ್ಲರ ನೋವಾ। ಸರ್ವಜ್ಞಮೂರುತಿ ನಿನಗೆನ್ನ ನಮಸ್ಕಾರ। ಜಯಗುರುವೆ ನೀಡು ಶ್ರೀ ರಾಮನಾಮದ ಸಾರ। ಸದಾ ನಿನ್ನ ನಾಮ ಎಮಗೆ ಅಭಯಪ್ರಧಾನ। ಕೇಸರಿಯ ಪುತ್ರ ಬಿಡಿಸು ಸಂಸಾರ ಬಂಧನ। ತುಳಸಿದಾಸರ ಈ ಹನುಮನ ಕಥನವ ಭಕ್ತಿಯಿಂದ ಪಾಡಿದರೆ ಹೊಂದುವಿರಿ ಜಯವ। ಬಹು ಆನಂದ ಬಾಲ ಹನುಮನ ಚರಿತ। ಜಯ ಜಯವೆನ್ನೋಣ ಭಕ್ತಿಯಿಂದ ವಂದಿಸುತ।।3।। ಶ್ರೀಗುರು।।

ಶ್ರೀ ಗುರುಚರಣಾಂಬುಜಕೆರಗಿ (ಹನುಮಾನ್ ಚಾಲೀಸಾ-ಕನ್ನಡ ಲಲಿತ ಪದ್ಯಾನುವಾದ)

ಶ್ರೀ ಗುರುಚರಣಾಂಬುಜಕೆರಗಿ। ಮನವನು ನಿರುಮಲ ಗೈವೆ। ವರ ಪುರುಷಾರ್ಥ ಪ್ರದಾಯಕ ರಾಮಚರಿತೆಯನು ಬರೆವೆ।। ಹನುಮನೆ, ಮತಿಹೀನನಿಗೆಕೊಡೋ ಬಲ ಸನ್ಮತಿ। ಸುಜ್ಞಾನ ಭ್ರಮೆ ರಾಗ ಕ್ಲೇಶ ಅಳಿಸೊ ಹುಟ್ಟು ಸಾವು ಅಜ್ಞಾನ।। ಅರಿವಿನ ಆಗರ ನಿಜಗುಣ ಸಾಗರ। ಹನುಮಂತನೆ ಜಯ ಜಯ ಕಪಿವರನೆ। ಮೂರು ಲೋಕಗಳೆ ಬೆಳಗುತಲಿವೆ ತವ। ದಿವ್ಯ ತೇಜದಲಿ ಮಹಿಮಾನ್ವಿತನೇ।।1।।ರಾಮನ ಬಂಟನು ಬಲು ಬಲವಂತನು। ಪವನ ಸುಕುಮಾರನು ನೀನೀರುವೆ। ಅಂಜನೀಸುತ ಆಂಜನೆಯ। ಬಹು ಪೂಜನೀಯನೇ ವಂದಿಸುವೆ।।2।।ಅತುಲ ಪರಾಕ್ರಮಿ ಕಠಿಣ ಶರೀರೀ। ಧೀರನೆ ರಣವೀರನೆ ಕೋವಿದನೆ। ಶತಶತ ವಂದನೆ ಕುಮತಿಯ ತೊಲಗಿಸಿ। ಸಜ್ಜನ ಸಂಗವ ಕರುಣಿಸುವವನೇ।।3।। ಚಿನ್ನದ ಬಣ್ಣದ ದೇಹದಿ ಹೊಳೆವ। ಅಂದದ ಕುಂಡಲ ಕಿವಿಯಲಿ ಮೆರೆವ। ಗುಂಗುರ ಕೇಶದಿ ಶೋಭಿಸುವವನೆ। ಕರಮುಗಿವೆನು ಸಾಲಂಕೃತನೇ।।4।। ವಿಶೇಷ ರೂಪದಿ ಕಾಂತಿಯ ಪಡೆದು। ವಜ್ರದಗದೆ ಧ್ವಜ ಕರಗಳಲಿಹುದು। ಹೆಗಲಲಿ ಪರಮ ಪವಿತ್ರದ ಸೂತ್ರ। ಮಣಿಯುವೆ ಮುದದಲಿ ಮರುತ ಸುಪುತ್ರ।।5।। ಭೂಮಿಗೆ ಬಂದಿಹ ಶಂಕರ ನೀನು। ರಾಮನ ಕಿಂಕರ ಕೇಸರಿ ಸುತನು। ಅತಿಶಯ ತೇಜ ಪ್ರಕಾಶದ ರೂಪನು। ಲೋಕಕೆ ಮಾನ್ಯನು ಬಹು ವಂದಿತನು।।6।। ವರಪಂಡಿತ, ಬಲುಗುಣ ಸಂಪನ್ನನು। ಕುಶಾಗ್ರಮತಿ ಅತಿ ಚತುರನು ನೀನು। ರಾಮನ ಸೇವಿಸೆ ಆತುರನಾಗಿಹ। ಮಾರುತ ಸುತ ಶರಣೆನುವೆನು ನಾನು।।7।। ಪ್ರಭು ಶ್ರೀರಾಮನ ಚರಿತೆಯ ಕೇಳುತ। ಮೈಮರೆಯುವ ರಸಿಕಾಗ್ರಣಿ ನೀನು। ರಾಮಸೀತೆ ಲಕ್ಷ್ಮಣರನೆ ಹೃದಯದಿ। ಕೂಡಿದ ನಿರುಪಮ ಭಕ್ತನು ನೀನು।।8।। ಅಣುವಿನ ರೂಪದಿ ಅಶೋಕ ವನದಲ್ಲಿ। ಜನನಿ ಜಾನಕಿಗೆ ನೀ ಕಾಣಿಸಿದೆ। ಲಂಕಾನಗರವ ದಹಿಸುವ ಸಮಯದಿ। ಘನಘೋರ ರೂಪ ನೀ ತೋರಿಸಿದೆ।।9।। ಬಹಳ ಭಯಂಕರ ಭೀಮಕಾಯದವನು। ಧರಿಸುತ ಸಂಹರಿಸಿದೆ ಅಸುರರನು। ರವಿಕುಲ ತಿಲಕನ ಮನದಿಂಗಿತವನು। ಪೂರೈಸಿದ ಹಿರಿ ಸಾಧಕ ನೀನು।।10।। ಸಂಜೀವಿನಿ ದಿವ್ಯೌಷಧಿ ತಂದು। ಲಕ್ಷ್ಮಣನನು ನೀನುಳಿಸಿದೆ ಧೀರ। ಆನಂದದ ಶುಭಗಳಿಗೆಯಿದೆಂದು। ಆಲಂಗಿಸಿದನು ಶ್ರೀರಘುವೀರ।।11।। ಸಾಹಸ ಮೆಚ್ಚಿ ಪ್ರಶಂಸೆಯ ಗೈದನು। ಕ್ಷಣವೂ ನಿಲಿಸದೆ ತವ ಗುಣಗಾನ। ಭಾವ ತುಂಬಿ ರಘುರಾಮನು ನುಡಿದನು। "ನೀ ಪ್ರಿಯ ಸೋದರ ಭರತ ಸಮಾನ"।।12।। "ಹಾಡಿ ಹೊಗಳುತಿವೆ ಸಾವಿರ ಮುಖಗಳು। ನಿನ್ನ ಕೀರ್ತಿ ಹೇ ಹನುಮನೆ" ಎಂದು। ರಾಮಚಂದ್ರ ತಾನಪ್ಪಿದ ನಿನ್ನನು। ಭಕ್ತವರನೆ ಹಿರಿ ಹಿಗ್ಗಿನಲಂದು।।13।।ಬ್ರಹ್ಮ ಸರಸ್ವತಿ ಸನಕ ಸನಂದನ। ಆದಿಶೇಷ ವರಋಷಿ ನಾರದರು। ಸಂಭ್ರಮದಲಿ ಸದ್ಗುಣಗಳ ನೆನೆಯುತ। ಸಂತೃಪ್ತಿಯ ನಗೆ ಹರಿಸುತಲಿಹರು।।14।।ಯಮ ಕುಬೇರ ದಿಕ್ಪಾಲಕರಾದಿ। ಸುರ ಸಮೂಹ ಕವಿ ಕೋವಿದರಾದಿ। ಬಲು ಮೆಚ್ಚುಗೆಯಲಿ ಬಣ್ಣಿಸುತಿರುವರು। ಹನುಮಾನನೆ ಗುಣರಾಶಿಯ ಭರದಿ।।15।। ರಾಜ್ಯವಿರದೆ ಗಿರಿಶಿಖರಗಳಲ್ಲಿ। ಸುಗ್ರೀವನು ಅಲೆದಾಡುತಲಿರಲು। ರಾಮನ ಮಿಲನವ ಮಾಡಿಸಿ ಕೊಡಿಸಿದೆ। ದೇಶವ ಕೋಶವ ಮಹದುಪಕರಿಸಿ।।16।। ರಾಮನಲ್ಲಿ ಶರಣಾದ ವಿಭೀಷಣ। ನೀ ನೀಡಿದ ಹಿತವಚನಕೆ ಬಾಗಿ। ರಾವಣನಳಿಯಲು ಪದವಿಯನೇರಿದ। ಜಗಬಲ್ಲುದು ಮೆಚ್ಚಿದೆ ತಲೆದೂಗಿ।।17।। ಹೊಂಬಣ್ಣದ ರವಿ ರುಚಿ ಫಲವೆಂದು। ಭಾವಿಸಿ ಬಾಲ್ಯದಿ ತಿನ್ನುವೆನೆಂದು। ಸಾವಿರ ಸಾವಿರ ಯೋಜನ ದೂರ। ಅಂತರಿಕ್ಷದಲಿ ಹಾರಿದೆ ವೀರ।।18।। ಒಡೆಯನ ಮುದ್ರಿಕೆ ಬಾಯೊಳಗಿರಿಸಿ। ಭೋರ್ಗರೆಯುವ ಸಾಗರವನು ಸೆಣಸಿ। ಲೀಲಾಜಾಲದಿ ದಾಟಿದೆ ನೀನು। ಮಹಿಮೆಯನರಿತಿರೆ ಅಚ್ಚರಿಯೇನು।।19।। ದುರ್ಗಮ ಕಾರ್ಯಗಳೆಷ್ಟೇಇರಲಿ। ಬದುಕಿನ ಜಗದಲಿ ಬಿಡದೆಯೆ ಬರಲಿ। ದಿವ್ಯ ಅನುಗ್ರಹ ಭಕ್ತರಲ್ಲಿರಲು ಎಲ್ಲವು ಸುಗಮವು ನೀನು ದಯಾಳು।।20।। ರಾಮ ಮಂದಿರದ ದ್ವಾರಪಾಲಕನು। ಪ್ರಭುವಿಗೆ ಬಲು ಪ್ರಿಯನಾದವನು। ಆಂಜನೇಯ ನಿನನ್ನು ಮತಿ ಸಿಗದೆ। ದೇವನ ದರುಶನ ಲಭಿಸುವುದೇನು।।21।। ಶರಣು ಶರಣು ನಿನಗೆಂದಿಹ ಜನರಿಗೆ। ಪರಮಸುಖ ಸಂಪದ ಲಭಿಸುವುದು। ರಕ್ಷಕನೆ ನೀನಾಗಿರೆ ಪವನಜ। ಜನನ ಮರಣ ಭಯ ತಾನೆಲ್ಲಿಹುದು। ಹೂಂಕರಿಸಲು ನಿನಾಗಿರೆ ಪವನಜ। ಜನನ ಮರಣ ಭಯ ತಾನೆಲ್ಲಿಹುದು।।22।। ನಿನಗೆ ನೀನೇ ಸರಿಸಾಟಿಯು ತೇಜದಿ। ನಿಗ್ರಹಿಸುವ ಬಲ

ನಿನ್ನಲೆ ಇಹುದು। ಹೂಂಕರಿಸಲು ಕಂಪಿಸುವುದು ಮೂಜಗ। ತತ್ತರಿಸುತ ಮುಗ್ಗರಿಸುವುದು।।23।। ಪಾವನ ನಾಮ ಸ್ಮರಣೆಯ ಮಾತ್ರದಿ। ಭೂತ ಪ್ರೇತ ಪಿಶಾಚಿಗಳೆಲ್ಲ। ಸನಿಹಕೆ ಬಾರದೆ ಭಾಧೆಯ ಕೊಡದೆ। ಹೆದರಿ ಪಲಾಯನ ಮಾಡುವುವಲ್ಲ।।24।। ನಿನ್ನ ನಾಮವನು ಜಪಿಸಿ ನಿರಂತರ। ದೂರ ಸಾರುವುವು ಹೇ ಹನುಮಂತ। ಭವದ ರೋಗಗಳು ಸಕಲ ನೋವುಗಳು। ಪತಿತೋದ್ಧಾರಕ ನಮನ ಅನಂತ।।25।। ತ್ರಿಕರಣ ಶುದ್ದರು ದೃಢ ಸಂಕಲ್ಪದಿ। ನಿನ್ನನೆ ಧ್ಯಾನಿಸುತಿರೆ ಕರುಣಾಳು। ಸಂಕಟಗಳ ಸಂಕೋಲೆಯ ಕಳಚುತ। ಸಲಹುವೆ ಪವನಜ ನೀ ಪ್ರೀತಿಯೊಳು।।26।। ರಾಜ ಋಷಿ ರಘುರಾಮನ ಕಾರ್ಯದಿ, ಖುಷಿಯಲಿ ಬೆರೆಯುತ ಸಫಲತೆ ಪಡೆದೆ। ರಾಮನ ದಾಸರ ಕೋರಿಕೆಯೆಲ್ಲವ। ನೀನೇ ವಿನಯದಿ ತೀರಿಸಿದೆ।।27।। ರಾಮ ಭಕ್ತರಲಿ ನೀ ದಯ ತೋರಲು। ಸಫಲ ಮನೋರಥರಾಗುವರೆಲ್ಲ। ನಿರಾಯಾಸದಲಿ ಜನ್ಮ ಸಾರ್ಥಕದ। ಮೋಕ್ಷ ಫಲವನೂ ಗಳಿಸುವರೆಲ್ಲ।।28।। ಜನಜನಿತವು ಕಪಿವರ ಬಲಭೀಮ। ನಾಲ್ಕು ಯುಗಗಳಲು ನಿನ್ನ ಪ್ರತಾಪ। ಜಗದುದ್ದಗಲದಿ ಬಹಳ ಪ್ರಸಿದ್ದವು। ಬೆಳಬೆಳಗುವ ವರ ತೇಜದ ರೂಪ।।29।। ಸಾಧುಸಂತ ಸತ್ಪುರುಷರ ರಕ್ಷಕ, ದುಷ್ಟ ರಕ್ಕಸರ ಶಿಕ್ಷಕ ನೀನು। ಸದ್ಗುಣ ಭರಿತನು ವೀರನು ಧೀರನು, ರಘುಕುಲ ಸೋಮನ ಮೆಚ್ಚುಗೆಯವನು।।30।। ಜಾನಕಿದೇವಿಯ ವರಫಲದಿಂದಲಿ, ಬಹಳ ಸಮರ್ಥನು ನೀನಿಹೆ ಹನುಮ। ಅಷ್ಟಸಿದ್ಧಿ ನವನಿಧಿಗಳ ನೀಡುವೆ, ಭಾಗ್ಯಪ್ರದಾಯಕ, ನಿನಗೆ ಪ್ರಣಾಮ।।31।। ರಾಮನಾಮ ರಸಾಮೃತ ಸವಿಯುವೆ। ಅನುದಿನ ಕ್ಷಣಕ್ಷಣವೂ ನೀ ಹನುಮ। ಅನವರತವು ರಘುಪತಿ ಸನ್ನಿಧಿಯೊಳಿಹೆ। ಪರಮ ಭಕ್ತ ಉದ್ದಂಡ ಪ್ರಣಾಮ।।32।। ಸದಾ ನಿನ್ನ ವರ ನಾಮವ ಜಪಿಸುವ, ಭಕುತರಿಗೊಲಿವನು ರಾಘವ ರಾಮ। ಜನ್ಮ ಜನ್ಮಗಳ ಪಾಪ ನಶಿಸುವುದು। ಪೂಜನೀಯ, ಸುದೀರ್ಘ ಪ್ರಣಾಮ।।33।। ತವ ಭಜಕರು ಭವ ಜೀವನ ನಂತರ। ರಾಮದೇವ ಪದ ಸೇರುವರು। ಶ್ರೀಹರಿ ಸೇವಕರಿವರೆಂದೆನಿಸುತ। ಪರಲೋಕದ ಗೌರವ ಗಳಿಸುವರು।।34।। ಅನ್ಯದೇವರನು ನೆನೆಯದೆ ನಿನ್ನನೆ। ಅನನ್ಯಭಾವದಿ ಪೂಜಿಸುವವಗೂ। ಸರ್ವ ವಿಧದ ಸುಖ ಭಾಗ್ಯವ ಕೊಡುವೆ। ಆಂಜನೇಯ ನನ್ನೆದೆಯಲಿ ಬೆಳಗು।।35।। ಚಂಚಲಮನ ತಡೆ ಹಿಡಿಯುತ ನಿನ್ನನೆ। ನೆನೆವವನ ಸಂಕಟ ಭಾದೆಗಳನ್ನು। ಪರಿಹರಿಸುತ ದಯಪಾಲಿಸುತಿರುವೆ। ಬಲವಂತನೆ ಸೊಗಸಂತಸವನ್ನು।।36।। ಜಯ ಚಿರಂಜೀವಿಯೆ ಜಯ ಗೋಸಾಯೀ। ಜಯ ಶ್ರೀರಾಮನ ವರಅನುಯಾಯಿ। ಈ ಗೋಸ್ವಾಮಿಗೆ ಹನಿದಯ ಹರಿಸಿ। ರಾಮನ ದರುಶನ ಮಾಡಿಸು ಹರಸಿ।।37।। ಯಾವನು ನಿರ್ಮಲ ಚಿತ್ತವ ತೋರಿ। ಪಠಿಸುವ ವರ ಚರಿತೆಯ ಶತಬಾರಿ। ಅವನಿಗೆ ಬದುಕಿನ ಬಂಧಗಳಿರವು। ಸಿಗುವುದು ಪರಮಾನಂದದ ಅರಿವು।।38।। ಪಾವನ "ಹನುಮಾನ್ ಚಾಲೀಸಾ" ವನು। ಪರಮ ಶ್ರದ್ದೆಯಲಿ ಪಠಿಸುವ ನರನು। ದಿವ್ಯಸಿದ್ಧಿಗಳ ಪಡೆವನು ಸತ್ಯವು। ಸಾಕ್ಷಿಯು ಗೌರೀಪತಿ ಶಂಕರನು।।39।। ಶ್ರೀಹರಿರಾಮನ ಕಿಂಕರ ನಾನಹೆ। ತುಲಸೀದಾಸನು ಹೇ ಹನುಮಾ। ರಾಮ ಸೀತೆ ಲಕ್ಷ್ಮಣರೊಡಸೇರಿ। ಮನ ಮಂಟಪದಲಿ ನೆಲಸು ಪ್ರಣಾಮ।।40।। ಪವನಜನೆ। ಸಂಕಟಹರನೇ। ಮಂಗಳ ಮೂರುತಿ। ಹರಸು। ರಾಮ ಸೀತೆ ಲಕ್ಷ್ಮಣರೊಡನೆ। ಮನ ಮಂದಿರದಲಿ ನೆಲಸು।।

ಶ್ರೀ ಗುರು ಚರಣ ಪದಾಬ್ಜ ಪರಾಗದಿ (ಶ್ರೀಕಾರ್ಯಸಿದ್ಧಿ ಹನುಮಾನ್ ಚಾಲೀಸ್)

ಶ್ರೀ ಗುರು ಚರಣ ಪದಾಬ್ಜ ಪರಾಗದಿ। ಮನಸಿನ ಕನ್ನಡಿ ಶುಚಿ ಮಾಡಿ। ರಘುಕುಲ ತಿಲಕನ ಲೀಲೆಯ ಹಾಡಿ। ನಾಲ್ಬಗೆ ಫಲಗಳ ಬೇಗ ಹಿಡಿ।।1।। ಬುದ್ಧಿಹೀನ ಬಲು ಅಜ್ಞನು ನಾನು। ಶುದ್ಧಿಸು ಅಂತಃಕರಣವನು। ಬುದ್ಧಿಬಲಗಳಕೊಡುತಲಿ ನೀನು। ನೀಗಿಸು ಕ್ಲೇಶ ವಿಕಾರವನು।।2।। ಜಯ ಹನುಮಾನ್! ಜ್ಞಾನ ಗುಣ ಸಾಗರ। ಜಯ ಕಪೀಶ ಮುಲ್ಲೋಕ ವಿಭಾಕರ। ರಾಮ ಬಂಟ! ಅನುಪಮ ಬಲವಂತ। ಅಂಜನ ಕುವರ! ಪವನಜ! ಸಂತ।।3।। ಮಹಾವೀರ ವಿಕ್ರಮ ವಜ್ರಾಂಗನೆ! ಕುಮತಿಯ ನೀಗಿಪ ಸನ್ಮತಿ ದಾತನೆ। ಕಾಂಚನದ್ರಿ ಸಮ ಶೋಭಿತ ಕಾಯನೆ। ಸಂಚಿತ ಪಾಪವ ತೊಲಗಿಸು ಬೇಗನೆ।।4।। ಪಿಡಿದಿಹೆ ಕರದಲಿ ಧ್ವಜವಜ್ರಗಳನು। ಭುಜದಲಿ ದರಿಸಿದೆ ಉಪವೀತವನು। ಶಂಕರ ಜನ್ಯನೆ। ಕೇಸರಿ ಸುತನೇ। ತೇಜಪ್ರತಾಪನೆ। ಮೂಜಗ ವಂದ್ಯನೆ।।5।। ಚತುರನು ಸುಗುಣನು ವಿದ್ಯಾವಂತನು। ರಾಮಕಾರ್ಯದಲಿ

ದಕ್ಷನು ಇವನು। ರಾಮಕಥಾಮೃತ ಶ್ರವಣಾಸಕ್ತನು। ಸೀತಾರಾಮರ ಮನದಲಿ ನಲಿವನು॥6॥ ಭರದಲಿ ಸಂಜೀವಿನಿಯನು ತಂದು। ಲಕ್ಷ್ಮಣ ಪ್ರಾಣವ ಉಳಿಸಿದೆ ಅಂದು। ಭರತ ಸಮಾನನು ನೀ ನನಗೆಂದು। ಪೊಗಳಿದ ರಾಮನು ನಿನ್ನನು ಅಂದು॥7॥ ಭಜಿಸಲಿ ಸಾಸಿರ ಫಣೆಗಳ ನಾಗನು। ನಿನ್ನಯ ಕೀರುತಿ ಅಂದನು ರಾಮನು। ಸನಕಸನಂದರು ನಾರದ ಶೇಷರು। ನಿನ್ನಯ ಮಹಿಮೆಯ ಹಾಡಲಶಕ್ತರು॥8॥ ಹೊಗಳಲಶಕ್ತರು ಕವಿಕೋವಿದರು। ಧರ್ಮ-ಕುಬೇರರು ದಿಕ್ಪಾಲಕರು। ಸುಗ್ರೀವಗೆ ಉಪಕಾರವ ಮಾಡಿದೆ। ರಾಮಮೈತ್ರಿಯನು ಕಲ್ಪಿಸಿ ಮೆರೆಸಿದೆ॥9॥ ಕೇಳಿ ವಿಭೀಷಣ ನಿನ್ನುಪ-ದೇಶವ। ಆಳಿದ ಧರುಮದಿ ಲಂಕಾರಾಜ್ಯವ। ಹಾರುತ ಸಾಸಿರ ಯೋಜನ ದೂರವ। ಫಲವೆಂ-ದೆಣಿಸುತ ಹಿಡಿದನು ಭಾನುವ॥10॥ ಬಾಯಲಿ ಹಿಡಿದು ಪ್ರಭು ಮುದ್ರಿಕೆಯನು। ಜಲಧಿಯ ದಾಟಿರೆ ಅಚ್ಚರಿಯೇನು? ಮನದಲಿ ನುತಿಸಿರೆ ಅನುದಿನ ನಿನ್ನನು। ಉಳಿಯದು ಕೆಲಸದಿ ಕಠಿನತೆ ಏನೂ॥11॥ ರಾಮನ ರಾಜ್ಯದ ಹೆಬ್ಬಾಗಿಲಲಿ। ಕಾವಲು ನಿಂತಿಹೆ ನೀ ಹರುಷದಲಿ। ಸುಖ ಸಂಪದವು ಹರಿವುದು ಇಲ್ಲಿ। ರಕ್ಷಕ ನೀನಿರೆ ಭಯವಿನ್ನೆಲ್ಲಿ॥12॥ ನಿನ್ನಯ ಘರ್ಜನೆ ಭೋರ್ಗರೆತದಿ। ನಡುಗಿತು ಮೂರ್ಜಗ ಅತಿ ಭೀತಿಯಲಿ। ಹನುಮನಾಮವಿರೆ ನಾಲಿಗೆಯಲ್ಲಿ। ಬಾರವು ಭೂತಪಿಶಾಚಿಗಳಲ್ಲಿ॥13॥ ನಶಿಪುದು ರೋಗ ಬಲುವಿಧ ಪೀಡೆ। ಅನುದಿನ ಹನುಮನ ಸ್ಮರಣೆಯ ಮಾಡೆ। ಸಂಕಟದಿಂದಲಿ ಬೇಗನೆ ಬಿಡುಗಡೆ। ತ್ರಿಕರಣ ಅರ್ಪಿಸಿ ದಾನವ ಮಾಡೆ॥14॥ ರಾಮನೆ ಗಮ್ಯನು ಮುನಿಕುಲಕೆಲ್ಲ। ಅವನನೆ ಕಾಯುತ ನಿಂತಿಹೆಯಲ್ಲ। ಕರುಣೆಪೆ ಭಕ್ತ ಮನೋರಥವೆಲ್ಲ। ಹಂಚುವೆ ಸತ್ಫಲ-ರಸ ಜಗಕೆಲ್ಲ॥15॥ ನಾಲ್ಕು ಯುಗದಲಿ ನಿನ್ನ ಪರಾಕ್ರಮ। ಹರಡಿತು ನಿನ್ನಯ ಕಾಂತಿಯ ಸಂಭ್ರಮ। ಸಾಧುಸಂತರಿಗೆ ಶಾಂತಿಯ ಧಾಮ। ಗಳಿಸಿದೆ ರಘುವರ ರಾಮನ ಪ್ರೇಮ॥16॥ ಅಷ್ಟಸಿದ್ಧಿ-ನವನಿಧಿಗಳ ದಾತ। ಅದನು ಜಾನಕಿ ಕೃಪೆಯಿಂದೀತ। ರಾಮರಸಾಯನ ರುಚಿಯನು ಸವಿಯುತ। ರಾಮ ಸೇವೆಯಲಿ ಇರುವನು ನಿರುತ॥17॥ ನಿನ್ನನು ಭಜಿಪಗೆ ರಾಮನು ಸುಲಭನು। ದುಃಖದ ಸಾಗರ ದಾಟುವ ನವನು। ಕೊನೆಗಾಲದಲಿ ರಾಮನ ನೆನೆವನು। ಪಡೆವನು ಮುಂದೆ ಹರಿಭಕುತಿಯನು॥18॥ ಹಲುವಿಧ ಧ್ಯಾನವು ಏತಕೆ ಬೇಕು। ಹನುಮನ ಚಿಂತನೆ-ಯೊಂದೇ ಸಾಕು। ಅನುದಿನ ಹನುಮನ ನೆನೆದರೆ ನಮ್ಮ। ಸಂಕಟವೆಲ್ಲವ ತೆಗೆವನು ಹನುಮ॥19॥ ಜೈಜೈಜೈ ಹನುಮಾನ ಗೋಸಾಯಿ। ಗುರುವರ ರೂಪ ಸಕಲ ಫಲದಾಯಿ। ಭಜಿಸಿರೆ ಅನುದಿನ ನಿನ್ನಯ ನಾಮವ। ಪಡೆವರು ಎಲ್ಲರು ಅಚಿರದಿ ಮೋಕ್ಷವ॥20॥ ಹನುಮನ ಲೀಲೆಯ ಅನುದಿನ ಭಜಿಸಿರೆ। ತುಲಸೀದಾಸರ ಮರೆಯದೆ ನೆನೆದಿರೆ। ಸುಲಭವು ಮುನಿ ವಾಲ್-ಮೀಕಿಯ ಕೃಪೆಯು। ಖಚಿತವು ಬೇಗನೆ ಕಾರ್ಯದ ಸಿದ್ಧಿಯು॥21॥ ನೆಲಸಲಿ ಮನದಲಿ ಹನುಮನ ರೂಪ। ತಣೆಯಲಿ ಕ್ರೋಧ-ದ್ವೇಷದ ತಾಪ। ನೀಗಲಿ ತ್ರಿಕರಣ ಕಲುಷದ ಲೋಪ। ಬೆಳಗಲಿ ಸಚ್ಚಿದಾನಂದದ ದೀಪ॥22॥ ಪವನ ತನಯ ಸಂಕಟ ಹರಣ। ಮಂಗಳ ಮೂರುತಿ ಮಾರುತಿ ರೂಪ। ಸೀತಾರಾಮ ತಾ ಮನ ಮಂದಿರದಲಿ। ನೆಲಸಿಹ ವಾನರ ಸುರಭಂದ॥23॥ ಶ್ರೀ ಕಾರ್ಯಸಿದ್ಧಿ ಹನುಮಾನ್ ಪೂರ್ಣಫಲ। ತ್ವಮಸ್ಮಿನ್ ಕಾರ್ಯನಿರ್ಯೋಗೇ। ಪ್ರಮಾಣಂ ಹರಿಸತ್ತಮ। ಹನುಮಾನ್ ಯತ್ನ ಮಾಸ್ಥಾಯ। ದುಃಖಕ್ಷಯಕರೋಭವ॥

## ಕಾಮಿತ ವಿತರಣ ವಾಯುಸುತ (ಶ್ರೀ ಹನುಮನ್ನಾಮಾಮೃತ)

ಕಾಮಿತ ವಿತರಣ ವಾಯುಸುತ। ರಾಮದೂತ ಪವಮಾನಸುತ। ಕಪಿಕುಲ ಸಂಭವ ವಾಯುಸುತ। ಹೃತರವಿ ಮಂಡಲ ವಾಯುಸುತ। ಜಿತ ಮನ್ಮಥವರ ದೇಹಯುತ। ಭೂಷಣ ಭೂಷಿತ ವಾಯುಸುತ। ಕೋಷಿತ ಲೋಕ ಸಮೀರ ಸುತ। ವೇದಿತ ನವ ವ್ಯಾಕರಣ ರತ। ಮೋದಿತ ಸುರಮುನಿಗಣವಿನುತ। ನೀಲಮೇಘ ಸುಕಾಂತಿಯುತ। ವಾಲಗೇಯಯುತ ವಾಯುಸುತ। ಪಾಟಲಮುಖ ಪವಮಾನಸುತ। ಕೋಟಿನಾಭ ಕಿರೀಟಯುತ। ಕಾಂಚನಾದ್ರಿ ಸಮ ದೇಹಯುತ। ಕಾಂಚನ ಕುಂಡಲ ಶೌರ್ಯಯುತ। ಪಾರಿಜಾತ ತರು ವಾಸರತ। ನೀರಜಾಕ್ಷ ಪರ ಬ್ರಹ್ಮರತ। ಜಾಗ್ರದ ಮಾತ್ಯೋತ್ತಮ ಚರಿತ। ಸುಗ್ರೀವೇಪ್ಸಿತ ವಾಯುಸುತ। ಮಂತ್ರಿ ಪದಾಂಕಿತ ವಾಯುಸುತ। ಚಿಂತಿತ ಪ್ರಭುಹಿತ ವಾಯುಸುತ।ಕಪಿಕುಲಾ ನಂದಿತ ನಿಜಚರಿತ। ಕವಿಕುಲಾ ನಂದಿತ ನಿಜಚರಿತ। ಕಪಿಪತಿ ಹರ್ಷಿತ ವಾಯುಸುತ। ವಾಲೀ ಭೀತ ಸುಗ್ರೀವ ಯುತ।

ತಾಲತಮಾಲ ದ್ರುಮ ನಿರತ। ಋಷ್ಯಮೂಕ ಚರ ವಾಯುಸುತ। ವಶ್ಯೇಂದ್ರಿಯ ಪವಮಾನಸುತ। ವನಮಧ್ಯೈಕ್ಷಿತ ವಾಯುಸುತ। ಮನಸಾ ಚಿಂತಿಪ ರಾಮಹಿತ। ದುಃಖಿತ ತಚ್ಚರಿ ತಾವನತ। ಆಖ್ಯಾತೇನಜ ನೃಪಚರಿತ। ಸ್ವಭುಜಾರೋಪಿತ ರಾಜಸುತ। ವಿಭು ಸಮ್ಮತ ಸನ್ಮಾನಯುತ। ರಾಮದೂತ ವರ ಭಕ್ತಿಯುತ। ರಾಮಾಜ್ಞಾಪಿತ ಕಾರ್ಯರತ। ನೃಪ ವಾನರ ಪತಿ ಸಖ್ಯರತ। ತಪನಭ ವೇಷ್ಟದ ರಾಮಯುತ। ಸೀತಾನ್ವೇಷಣ ಮಾರ್ಗರತ। ವಾತಾತ್ಮಜ ಬಹು ಬುದ್ಧಿಯುತ। ರಘುರಾಜೋರ್ಮಿಕ ಯೋಲ್ಲಸಿತ। ಮೇಘಧ್ವೋತ್ಸ್ಸವ ವಾಯುಸುತ। ಜಾಂಬವ ಅಂಗದ ಸಂಘಯುತ। ಬಿಂಬಾಧರ ಪರಮಾನರತ। ದಕ್ಷಿಣ ದಿಕ್ತಟ ಗಮನರತ। ಪಕ್ಷೀಂ ದ್ರೋಪಮ ವೇಗಯುತ। ಸ್ವಯಂ ಪ್ರಭಾಧೃತ ವಾಯುಸುತ। ರಾಮಾಂಕಿತೋದ್ಯಮ ಸಿದ್ಧಿರತ। ಗೀತರಘೂದ್ವಯ ಚರಿತನುತ। ಪೂತಜಟಾಯು ಮಹಾಚರಿತ। ಸಂಪಾತಿ ಶ್ರುತ ವರಚರಿತ। ಕಂಪಿತ ವಾಲಿ ಸಮೀರ ಸುತ। ಪಕ್ಷೀಂ ದ್ರೋದಿತ ಮಾರ್ಗಗತ। ಇಕ್ಷ್ವಾಕು ಕುಲೇಂದ್ರಾಭಿಮತ। ಸಾಗರ ಲಂಘನ ತೋಷಯುತ। ವೇಗಯು ತಾಂಗದ ವೀರನುತ। ಮೈನಾಕಾದೃತ ವಾಯುಸುತ। ಶ್ರೀರಾಮನಾಮ ಸ್ಮರಣೈಕರತ। ಸುರಸಾಂದಕ ಪವಮಾನಸುತ। ತರಸಾಲಂಘಿತ ಸಿಂಧುಸುತ। ಲಂಕಾತಂಕದ ವಾಯುಸುತ। ಸಂಕೋಚಿತ ನಿಜ ದೇಹಯುತ। ಸೀತಾದರ್ಶನ ಭಕ್ತಿಯುತ। ಕೌತುಕ ಶೋಧಿತ ಪುರಮಹಿತ। ಅಶೋಕ ವನಚರ ಧೈರ್ಯಯುತ। ಶಿಂಶು ಪಾಶಾಕ ವಿಶಾಖಗತ। ಸೀತಾದರ್ಶನ ತೋಷಯುತ। ಪೂತವಿನತಾಸುತ ಮಹಿತ। ಮಧುರೋದೀರತ ರಘುಚರಿತ। ವಿದುಮುಖಿ ಸೀತಾಕರ ಮಹಿತ। ಲಬ್ಧ ಮಣಿ ಪ್ರವರೊಲ್ಲಸಿತ। ಶಬ್ದ ವಿಭೋದಿತ ಯಾತುವೃತ। ಧ್ವಂಸೋಧ್ಯಾನ ಸಮೀರಸುತ। ಶಾಸ್ತ್ರಾಸುರಕುಲ ವೇಗಯುತ। ರಾವಣ್ಯಾಸ್ತ್ರ ವರಾಪ ಹೃತ। ರಾವಣ ರಾಜ ದ್ವಾರಗತ। ಪ್ರಕಟಿತ ರಘುವರ ನೃಪಚರಿತ। ಭೃಕುಟೀ ಭರ್ತ್ಸಿತ ದನುಜ ವೃತ। ರಕ್ಷೋದಾಹಿತ ವಾಲಯುತ। ಸಾಕ್ಷಾದ್ದಹನ ಸಹಾಯಯುತ। ಸೀತಾರಾಮ ಧ್ಯಾನರತ। ಖ್ಯಾತ ವಿಭೀಷಣ ವಿನಯರತ। ಧ್ವಂಸಿತಲಂಕಾ ಸಮೀರಸುತ। ಹಿಂಸಿತ ರಾಕ್ಷಸ ಸುರವಿನುತ। ವಿನತಾ ದ್ಯುದ್ಧರಣೈಕರತ। ಪತಿಪಾಲಿತ ಕಪಿ ಸಂಘನುತ। ವೇದಿತ ರಾಕ್ಷಸ ಪತಿಚರಿತ। ಸಾಧಿತ ಸೀತಾ ರತ್ನಯುತ। ಕೃರಯಾರಾಮ ಸಮೀಪಗತ। ನಿರುಪಮ ವಿನಯ ವಿವೇಕಯುತ। ಅರ್ಪಿತ ಮಣಿವರ ಭಕ್ತಿಯುತ। ದರ್ಪಿತ ವಾನರ ಪತಿ ವಿನುತ। ವಾನರ ಸೇನಾ ನಾಥಯುತ। ಮನಸಾಧ್ಯಾತ ಸತೀ ಚರತ। ಲಂಕೋನ್ಮುಖ ರಘುರಾಜಯುತ। ಕಪಿವರ ರಾಕ್ಷಸ ಯುದ್ಧರತ। ಕಪಿಬಲ ಹರ್ಷಿತ ನಿಜಚರಿತ। ರಾವಣ ಮರ್ಧನ ರಾಮಯುತ। ಜೀವಿತ ಸೀತೋದಿತ ಚರಿತ। ಸಾನುಜ ರಾಘವ ಪಾದರತ। ಭಾನುಜ ಚಿಂತಿತ ಕಾರ್ಯರತ। ಭಕ್ತಾಗ್ರೇಸರ ವಾಯು ಸುತ। ಭಕ್ತಜನಾವನ ವಾಯುಸುತ। ಸಂಕಟಹರ ಪವಮಾನಸುತ। ವೆಂಕಟರಾಮಾ ಭಿಜ್ಞನುತ। ಸೀತಾರಾಮ ಪ್ರಿಯದೂತ। ವಾತಾತ್ಮಜ ಬಲ ವಿಖ್ಯಾತ। ಜಯಜಯಮಂಗಳ ಪವಮಾನಸುತ। ಜಯ ಶುಭಮಂಗಳ ಪವಮಾನಸುತ। ಜಯ ಸನ್ಮಂಗಳ ಸನಕಾದಿನುತ॥

## ಚಂದ್ರಮುಖ ಬೋಧಿಸಿದ ಬೋಧನೆ (ಸುಂದರಕಾಂಡ)

ಚಂದ್ರಮುಖ ಬೋಧಿಸಿದ ಬೋಧನೆ ಇಂದೆನೆಗೆ ಸಿದ್ಧಿಸಿತು ಎನುತಲೇ ರಘುನಂದನನ ಕೃಪೆಯಿಂದ ಸದೃಢ ಆದೆನೆಂತೆಂದ॥ ಹಾರಿದನು ಹನುಮಂತ ಶರಧಿಯ ಏರಿದನು ಮೈನಾಕನ್ನಾಗ್ರವ ಏರಿ ಮುಂದಕೆ। ನಡೆದನು ಮೆಹಂ ಮೇರ್ದ್ವಿಯಂದದಲಿ। ಬೇರೊಬ್ಬಳು ಅಸುರೆ ನುಂಗಿದರೆ ಮಹಂ ಮೇರ್ದ್ವಿ ಯಂದದಿ ಬೆಳೆದನು। ಉದರದಿ ಶರೀರವೇ ಇಬ್ಬಾಗವಾಯಿತು ಮಡಿದಾಳಾ ಅಸುರೆ॥1॥ ಧಾರಿಣಿ ದೇವಿಗಿಂತ ಅಧಿಕ ವಿಸ್ತಾರವಾಗೆ ಬಾಯಿಬಿಡುತಿರೆ। ಸಾರೆ ಅಣುಮಾತ್ರದಿಂದ ಹೊಕ್ಕು ಹೊರಹೊರಟ ನವಳಸುವ। ಧಾರಿಣೀ ದೇವಿಗಿಂದರ್ಧ ಧೀರ ಹನುಮಂತ ತಾನಿದ್ದನು ಸೇರಿ। ಶರೀರದಲ್ಲೇ ಅರ್ಧವನ್ನಿತ್ತನು ಲಂಕಾಪುರಿಯ ಪಟ್ಟಣಕೆ॥2॥ ಒಬ್ಬನೇ ಹನುಮಂತ ಬರುತಿರೆ ಕೊಬ್ಬಿದ್ದ ಲಂಕಿಣಿ ತಡೆದಳು। ಅಬ್ಬರಿಸಿ ಅವಳ ಸಂಹರಿಸಿ ತಾ ಮುಂದೆ ತೆರಳಿದನು॥3॥ ಸರ್ವಗೃಹದೊಳು ಬೀದಿ ಬೀದಿಯಲಿ ಊರ್ಬಿಸುತೆ ಜಾನಕಿಯ ಹುಡುಕುತ। ನಿರ್ಗುಣಾತ್ಮಕ ರಾಮಚಂದ್ರರ ಚರಣ ಸ್ಮರಣೆಯಲಿ॥4॥ಅಸುರನಂತಃಪುರ್ವ ಹೊಕ್ಕನು ದಶದಿಕ್ಕುಗಳನೆಲ್ಲ ಹುಡುಕಿದ। ದಶಶಿರನ ಮಂಚದಲಿ ಮಂಡೋದರಿಯು ಮಲಗಿರಲು। ವಸುಮತಿ

ಸುತೆಯೆಂದ ಮನದಲಿ। ಅಸುರ ಸಹಿತಲೆ ಹೊರವು ನೆನುತಲೇ ಎಸದಿದ್ದ ಕೋರೆದಾಡಿಗಳನು ಕಂಡು ಕ್ಷಮಿಸಿದನು॥5॥ ದುರ್ಬುದ್ಧಿಯಿಂದಲಾಮನಕೆ ಊರ್ಬಿಸುತೆ ತಾನೆನುತಲೆ ಭಾವಿಸಿದನು। ದುರ್ಗಟದ ಪರಿಹರಕೆ ನೆನೆದನು ಶ್ರೀರಾಮ ನಾಮವನು॥6॥ ಆರ್ಭಕನೆಂದೆಣಿಸಿ ಮನದಲಿ ಆದಿಮೂರುತಿ ರಕ್ಷಿಸೆನುತಲಿ ನಿರ್ಗುಣಾತ್ಮಕ ರಾಮಚಂದ್ರರ ಚರಣಸ್ಮರಣೆಯಲಿ॥7॥ ಏರಿ ಬಂದೆನು ಅಸುರನಗರಿಯ ಊರನಾದ್ಯಂತವನು ಹುಡುಕಿದೆ ಇನ್ಯಾರು ಈ ಲಂಕೇಲಿ ಕದ್ದು। ಕೊಂಡೊಯ್ದ ರ್ಯಾರೆನುತ॥8॥ ಧೀರತಾ ಬಾಲದಲಿ ಸುತ್ತಲು ಅಂಬಾರದಲಿ ಪ್ರತಿವಾಕ್ಯ ನುಡಿಯಿತು ಮಾರುತನು ತನ್ನ ಪರಿಮಳದಿ ಕಂಡನಾ ಸ್ಥಳವ॥9॥ ಏರಿದನು ಶಿಂಶುಪದ ವೃಕ್ಷವ ಧೀರರಾವಣ ತಾ ಹೊರಟನು। ಸಾರೆ ತನ್ನರಸಿಯರು ತನ್ನಯಸತಿ ಸಮೂಹದಲಿ॥10॥ ಬೇರು ಬೇರುಪಚಾರದಿಂದಲಿ ನಾರಿಜಾನಕಿ ಒಡಬಡಿಸಲು। ನೀರೆ ಜಾನಕಿ ಇದ್ದಳಾ ರಘುಪತಿಯ ಧ್ಯಾನದಲಿ॥11॥ ನರನಿಂದ ನಿನಗೇನು ಪ್ರಯೋಜನ ತಿರುಗಿ ಹೋದರು ರಾಮಲಕ್ಷ್ಮಣರು। ಗರ್ವದಲಿ ಬಂದ ದುರ್ಬುದ್ಧಿಯನು ಸಾಕು ಬಿಡು ಎಂದ॥11॥ ಎನ್ನ ಭಾಗ್ಯವ ನೋಡೆ ಸೀತೆ ನಿಮ್ಮ ರಾಮರ ಹಂಬಲ ಏತಕ್ಕೆ। ಅರಣ್ಯದಲಿ ತಿರುಗೋರು ರಾಮಲಕ್ಷ್ಮಣರು ಕಳ್ಳರಂದದಲಿ॥12॥ ತೊರೆದು ಬಿಡು ಶ್ರೀರಾಮ ಹಂಬಲ ಹಿರಿಯಳಾಗೆನ್ನ ಸಂಸ್ಥಾನಕ್ಕೆ ಸರ್ವನಾರಿಯರನ್ನು ನಿನ್ನ ಪರಿಚಾರಕರ ಮಾಡುವೆನು॥14॥ ಇಂದಿರೆಯು ತನ್ನ ಹಸ್ತದಲಿ ತೃಣವೊಂದು ಮುರಿಯುತ ಅಸುರನಿಗಿತೆಂದಳು। ಕುಂದದೇ ಕುಲಗೇಡಿ ಖೂಳಹೋಗೆಂದಳಾ ಸೀತೆ॥15॥ ನಂದನರು ಸಹವಾಗಿ ನಿನ್ನನ್ನು ಕೊಂದು ಬಿಡುವುದು ರಾಮಬಾಣವು ಬಂದು। ರಘುಕುಲನು ಚಂಡನಾಡುವನು ಹತ್ತು ಶಿರಗಳನು॥16॥ ಅಂದ ಮಾತನು ಕೇಳಿ ಅಸುರನು ಚಂದ್ರಾಯುಧವನೇ ಪಿಡಿದು। ಎತ್ತಲು ಬಂದು ಮಂಡೋದರಿಯು ಹಸ್ತವನು ಪಿಡಿದು ನಿಂದಿಹಳು॥17॥ ಸಂದೇಹ ಪಡಬೇಡ ಜಾನಕಿ ಕುಂದದಿರು ಜಗದಾದಿ ಲಕ್ಷ್ಮಿಯೇ। ಬೆಂದು ಹೋಗುವಿರಿ ಕಣ್ಣತೆರೆದರೆ ಬೇಡವೆಂತೆಂದಳು॥18॥ ನೋಡಿದರೆ ಬೇಯುವನೆಂದೆನುತಲೆ ಓಡಿದನು ವನವ ಬಿಟ್ಟು। ಹೊರಹಿಂಕೆ ಸಾರೆ ತನ್ನರಸಿಯರು ತನ್ನಯ ಸತಿ ಸಮೂಹದಲಿ॥19॥ ಧೂತರಿಂದರಮನೆಯ ಹೊಕ್ಕನು ರೂಢೀಶ ಶ್ರೀರಾಮಚಂದ್ರರ ನೋಡಿ। ಜೈಸುವೆವೆಂಬ ಅಹಂಕಾರ ಗರ್ವದಲಿ॥20॥ ಎಡೆ ಎಡೆಗೆ ಅಸುರ ಬಾಧೆಗಳ ತಡೆಯಲಾರೆನು। ಎನ್ನ ಪ್ರಾಣವ ಬಿಡುವೆ ನೆಂದೆನುತ ಯೋಚಿಸಲು। ತ್ರಿಜಟೆಯು ನಡೆತರಲು॥21॥ ನಡು ಇರುಳು ನಾಕಂಡೆ ಸ್ವಪ್ನವ ಪೊಡವಿಪತಿ ಅಸುರರನೆ ಜಯಿಸುವ ನಿಮ್ಮೊಡಗೊಂಡು ಕೊಂಡೊಯ್ಯುವನು ತಾಯೆ ಚಿಂತಿಸುವುದ್ಯಾಕಿನ್ನು ॥22॥ ಪತಿಯ ಕಾವಲಿನ ಅರಸಿಯರು ಖಳಮಕದಿಂದ ನಯಭಯದಿಂದ। ನುಡಿದರು ಮೃತವಾಗೋಕಾಲಬಂದಿದೆ ಅಸುರ ಸಂತತಿಗೆ॥23॥ ಧೀರ ಹನುಮಂತ ವೃಕ್ಷಾಗ್ರದಿ ಶ್ರೀರಾಮಾಯಣದ ಕಥೆಯ ಪಾರಾಯಣದ ಮಾಡುತಿದ್ದನು। ಪರಮ ಹರುಷದಲಿ ಪೂರ್ವ ಸಂಗತಿಯಿಂದ ಪೇಳಲು ಯಾರೆಂದು ದೇವಿ ಬೆಸಗೊಂಡಳು। ಧಾರಿಣೀದೇವಿ ನಿಮ್ಮ ಮಗ ಧೀರ ಹನುಮಂತ ನಾನೆಂದ। ರಕ್ಕಸರ ಮಾಯೆ ಎಂದರಿಯದೆ ಸಿಕ್ಕಿದನು। ದಶಕಂಠ ನೋಷಕೆ ರಕ್ಕಸಾಂತಕ ರಾಮರ್ವಾಕ್ಯವ ನಾನೆಂತು ನಂಬಲಿ ನಿಜವ ಪೇಳೆನಗೆ॥24॥ ಚಿಕ್ಕ ಲಕ್ಷ್ಮಣನಾ ನೋಯಿಸಿ ಕಡುದುಃಖಕ್ಕೆ ಗುರಿಯಾದೆ। ನೀಪರಿ ಮರ್ಕಟವೆ ನಾನೆಂತು ನಂಬಲಿ ನಿಜವ ಪೇಳೆನಗೆ॥25॥ ರಾಮದೂತನು ತಾನೆಂದೆನುತಲೆ ಭೂಮಿಯನು ಮುಟ್ಟಿದನು। ದೃಢದಲಿ ರಾಮಮುದ್ರಿಕೆಯ ಮುಂದಿಟ್ಟು ಮನದಣಿಯೆ ಸ್ತುತಿಸಿದನು। ಆದಿಮೂರುತಿ ಅಮೃತ ಸೋದರಿ ಮೇದಿನಿ ಬಾಲೆ ಜಗತ್ಪಾಲೆ। ಜಗದಾದಿ ಮೂರುತಿ ಲೀಲೆ ಭಕ್ತರ ಮೇಲೆ ದಯಾಶೀಲೆ॥26॥ ಪಾದಪದ್ಮವ ಕಂಡು ಧನ್ಯನಾದೆನು ಇಂದಿನ ದಿನದಲೆನುತಲೇ ಶ್ರೀಹರಿಯ ಕರುಣಾ ಕಟಾಕ್ಷ ಸಿದ್ದಿಸಿತು ಎನಗೆಂದ। ಭಕ್ತವತ್ಸಲರಾಮಚಂದ್ರರು ಸುಕ್ಷೇಮ। ಸುಗ್ರೀವ ಲಕ್ಷ್ಮಣ ಲಕ್ಷ್ಮೀದೇವಿ ನಿಮ್ಮ ಚರಣವನು ಕಂಡು ಬಾರೆಂದರು॥27॥

## ಎಷ್ಟು ಸಾಹಸವಂತ ನೀನೇ ಬಲವಂತ (ಸುಂದರಕಾಂಡ)

ಎಷ್ಟು ಸಾಹಸವಂತ ನೀನೇ ಬಲವಂತ। ಇಷ್ಟಾದಾಯಕ ಭಳಿಭಳಿರೆ ಹನುಮಂತ॥ ಅಟ್ಟುತ ಖಳರನು ಮೆಟ್ಟಿ ಸೀಳುತಲಿ। ಕುಟ್ಟಿಕೊಂಡಾಡುತ ಧಿಟ್ಟ ನೀನಹುದೊ॥ಪಲ್ಲ॥ ರಾಮರಪ್ಪಣೆಯಿಂದ ಶರಧಿಯ ದಾಟಿ। ಆ ಮಹಾ

ಅಸುರೆಯ ಸೀಳಿ ಬಿಸಾಟಿ।। ಸ್ವಾಮಿಕಾರ್ಯವನು ಕೂಲದಿ ಯೋಚಿಸಿ। ಪ್ರೇಮದಿ ನಡೆದನು ಆರೆಲೆಸಾಟಿ।।1।। ದೂರದಿಂದ ಅಸುರನ ಪುರವನ್ನೆ ನೋಡಿ। ಮನದಿ ಶ್ರೀರಾಮರ ಸ್ಮರಣೆಯ ಮಾಡಿ। ಹಾರುತ ಹರುಷದಿ ಹರಿಸಿ ಲಂಕಿಣಿಯನು। ವಾರಿಜ ಮುಖಿಯಳ ಕಂಡು ಮಾತಾಡಿ।।2।। ರಾಮರ ಕ್ಷೇಮವ ರಮಣಿಗೆ ಹೇಳಿ। ತಾಮಸ ಮಾಡದೆ ಮುದ್ರಿಕೆಯ ನೀಡಿ। ಭೂಮಿಜೆ ಜಾನಕಿ ಕುರುಹು ನೀಡಲಾಗ। ಆ ಮಹಾವನದೊಳು ಫಲಗಳ ಬೇಡಿ।।3।। ಕಣ್ಣಿಗೆ ಬೇಕಾದ ಹಣ್ಣನ್ನು ಸವಿದ್ಯೋ। ಹಣ್ಣಿನ ನೆವದಲಿ ಅಸುರರ ಬಡಿದ್ಯೋ। ಟಣ್ಣನೆ ಟಣ್ಣನೆ ಹಾರಿ ನಗೆದಾಡುತ। ಬಣ್ಣಿಸಿ ಅಸುರರ ಬಲವನು ಮುರಿದ್ಯೋ।।4।। ಶೃಂಗಾರ ವನದಲಿ ಇದ್ದ ರಾಕ್ಷಸರ। ಲಿಂಗವಳಿಸಿದ್ಯೋ ಅತಿಶಯಶೂರಾ। ನುಂಗಿ ಅಸ್ತ್ರವನು ಅಕ್ಷಯಕುವರನ। ಭಂಗಿಸಿ ಬಿಸುಟಿದ್ಯೊ ಬಂದ ರಕ್ಕಸರಾ।।5।। ದೂರ ಪೇಳುವರೆಲ್ಲಾ ರಾವಣನೊಡನೆ। ಚೀರುತ ಕರೆಸಿದ ಇಂದ್ರಜಿತುವನ್ನೆ।। ಚೋರ ಕಪಿಯನು ಹಿಡಿದು ತಾ ಎನ್ನುತ। ಶೂರರ ಕಳಿಸಿದ ನಿಜಸುತರೊಡನೆ।।6।। ಹಿಡಿದನು ಇಂದ್ರಜಿತನ ಕಡುಕೋಪದಿಂದ। ಹೆಡಮುರಿಗೆ ಕಟ್ಟಿದ ಬ್ರಹ್ಮಸ್ತ್ರದಿಂದ। ಗುಡುಗುಡುಗುಡುಗುತ ಕಿಡಿಕಿಡಿ ಕಾರುತ। ನಡೆದನು ಲಂಕೆಯ ಅರಸನಿದ್ದೆಡೆಗೆ।।7।। ಕಂಡ ರಾವಣನು ಉದ್ದಂಡ ಕಪಿಯನ್ನೆ। ಮಂಡೆಯ ತೂಗುತ ಮಾತನಾಡಿಸಿದ। ಭಂಡ ಮಾಡುವೆನು ಬಿಡುಸುಡು ಕಪಿಯನ್ನು। ಕಂಡು ದುರದುರನೆ ನಡೆದನಾಗ।।8।। ಛಲವ್ಯಾಕೋ ನಿನಗಿಷ್ಟು ಎಲೆ ಕೋಡಗನೆ। ನೆಲೆಯಾವುದ್ಹೇಳೋ ನಿನ್ನೊಡೆಯನ ಹೆಸರನ್ನೆ।।ಬಲವಂತರಾಮರ ಬಂಟ ಬಂದಿಹೆನೋ। ಹಲವು ಮಾತ್ಯಾಕೋ ಹನುಮನೆ ನಾನು।।9।। ಬಡರಾವಣ ನಿನ್ನ ಬಡಿದು ಹಾಕುವೆನು। ಎನ್ನೊಡೆಯನಪ್ಪಣೆಯಿಲ್ಲೆಂದು ತಾಳಿದೆನು।। ಪುಡಿ ಮಾಡುವೆನು ಫುಲ್ಲರಕ್ಕಸನೆ। ಕೊಡುವೆನು ನಿನ್ನಪ್ಪಣೆ ಅಕ್ಷರವಾ।।10।। ನಿನ್ನಂಥ ದೂತರು ರಾಮರ ಬಳಿಗೆ। ಇನ್ನೆಷ್ಟು ಮಂದಿಗಳುಂಟು ಹೇಳೋ ನೀತ್ವರಿಯಾ। ನನ್ನಂಥ ದೂತರು ನಿನ್ನಂಥ ಪ್ರೇತರು ಇನ್ನೂರು ಮುನ್ನೂರು ಕೋಟಿ ಕೇಳರಿಯಾ।।11।। ಕಡುಕೋಪದಿಂದಲಿ ಖೂಳ ರಾವಣನು। ಸುಡಿಸುಡಿ ಬಾಲವ ಸುತ್ತಿವಸನವನು। ಒಡೆಯನ ಮಾತಿಗೆ ಗಡಿಬಿಡಿಯಿಲ್ಲದೆ। ಒಡನೆ ಮುತ್ತಿದರು ಗಡುಮನೆ ಯವರು।।12।। ತಂದರು ವಸನವ ತಂಡ ತಂಡದಲೆ। ಒಂದೊಂದು ಮೂಟೆಯು ಎಂಭತ್ತು ಕೋಟಿ। ಚಂದದಿ ಹರಳಿನ ತೈಲದಿನಿಲ್ಲಿಸಿ। ಇಂದಿಗೆ ಹನುಮನ ಬಾಲವ ಬೆಳೆಸುತ ।।13।। ಶಾಲು ಶಕಲಾತಿಯು ಸಾಲದೆ ಇರಲು। ಸೀತೆಯ ವಸ್ತ್ರವ ಸೆಳೆದು ತಾರೆನಲು। ಬಾಲವ ನಿಲ್ಲಿಸಿ ಬೆಂಕಿಯ ನಿಡುತಲೆ। ಕಾಲಮೃತ್ಯುವಿನ ಕೆಣಕಿದರಲ್ಲೆ।।14।। ಕುಣಿಕುಣಿದಾಡುತ್ತ ಕೂಗಿ ಬೊಬ್ಬಿಡುತ। ಇಣಕಿಣಕಿ ನೋಡುತ ಅಸುರರಣಕಿಸುತ। ಝುಣಝುಣ ವೆನ್ನುತ ಬಾಲದ ಗಂಟೆಯು ಮನದಿ ಶ್ರೀರಾಮರ ಸ್ಮರಣೆಮಾಡುತ್ತ।।15।। ಮಂಗಳಂ ಶ್ರೀರಾಮಚಂದ್ರರೆ ನಿಮಗೆ। ಮಂಗಳಂ ಭೂಪತಿ ಚರಣಂಗಳಿಗೆ। ಮಂಗಳವೆನುತಿರೆ ರಾವಣ ನೋಡಲಾಗ। ಭಂಗಿಸಿ ಅವನ ಗಡ್ಡಂಗಳಿಗೆ।।16।। ಹತ್ತಿತು ಅಸುರನ ಗಡ್ಡ ಮೀಸೆಗಳು। ಸುತ್ತಿತು ಹೊಗೆಯು ಬ್ರಹ್ಮಾಂಡ ಕೋಟಿಗಳು। ಚಿತ್ತದಿ ರಾಮರು ಕೊಪ್ಪಿಸುವರೆಂದು ಚಿತ್ತದಿ ನಡೆದನು ಅರಸ ನಿದ್ದೆಡೆಗೆ ।।17।। ಸೀತೆಯ ಕ್ಷೇಮವ ಶ್ರೀರಾಮಗ್ಹೇಳಿ। ಪ್ರೀತಿಯಿಂದ ಕೊಟ್ಟ ಕುರುಹ ಕರದಲಿ ತಾಳಿ। ಸೇತುವೆಗಟ್ಟಿ ಚದುರಂಗ ಮಾರ್ಬಲ। ಮುತ್ತಿತು ಲಂಕೆಗೆ ಸೂರೆ ಗೈಯುತಲಿ।।18।। ವೆಗ್ಗಳವಾಯಿತು ರಾಮರದಂಡು। ಮುತ್ತಿತು ಅಸುರರ ಕೋಟಿಯ ಕಂಡು। ಹೆಗ್ಗದಿ ರಾಮರ ನುಗ್ಗು ಮಾಡುವೆನು। ಝುಗ್ಗದಿ ಪೇಳ್ವೆನು ರಾವಣಗಂದು।।19।। ರಾವಣ ಮೊದಲಾದ ರಾಕ್ಷಸರ ಕೊಂದು। ಭಾವಶುದ್ಧದಿ ವಿಭೀಷಣಗೆ ಬಾಳೆಂದು। ದೇವಿ ಸೀತೆಯರನೊಡಗೊಂಡು ಅಯೋಧ್ಯೆ। ದೇವ ಶ್ರೀರಾಮರು ರಾಜ್ಯ ವಾಳಿದರು।।20।। ಶಂಖ ದೈತ್ಯನ ಕೊಂದ ಶರಣಾರಯ್ಯ। ಶಂಖ ಗಿರಿಯಲಿ ನಿಂತ ಹನುಮಂತರಾಯ।। ಪಂಕಜಾಕ್ಷ ಶ್ರೀಹಯವದನ ಕಟಾಕ್ಷದಿ ಬಿಂಕದಿ ಪಡೆದನು ಅಜನ ಪದವಿಯನು।।21।।

ಆರತಿ ಪಾಡುವೆನು ಮಾರುತಿಗೆ ರಾಗ: ಬೇಹಾಗ್

ಆರತಿ ಪಾಡುವೆನು ಮಾರುತಿಗೆ। ಧೀರ ಶ್ರೀರಾಮ ಸಾರಥಿಗೆ। ಸೀತಾ ರಾಮರ ಸಾರಥಿಗೆ।।ಪ।। ಲಂಘಿಸಿ ಲಂಕೆಯ

ದಾಟುತಲಿ ಸೀತೆಗೆ ಉಂಗುರ ತೋರುತಲಿ। ಆ ಮಹಾಜಾನಕಿಯ ಕಾಣುತಲಿ ತಾರಕ ನಾಮವ ಜಪಿಸುತಲಿ।।1।। ಹೊಟ್ಟೆಗೆ ಹಣ್ಣನು ಬೇಡುತಲಿ ಘಟ್ಟಿಸಿ ಮರಗಳ ಕುಟ್ಟುತಲಿ। ಆ ಮಹಾಲಂಕೆಯ ಕಾಣುತಲಿ ಅಗ್ನಿಗೆ ಆಹುತಿ ತೋರುತಲಿ।।2।। ಶರಧಿಗೆ ಸೇತುವೆ ಕಟ್ಟುತಲಿ ದುಷ್ಟರನ್ನೆಲ್ಲ ಕುಟ್ಟುತಲೀ। ಆ ಮಹಾಜಾನಕಿಯ ಬೇಡುತಲಿ ಚೂಡಾಮಣಿಯನು ತಂದವಗೆ।।3।।

ಲಾಲಿ ಶ್ರೀ ಹನುಮಂತ ರಾಗ: ಮಧ್ಯಮಾವತಿ

ಲಾಲಿ ಶ್ರೀ ಹನುಮಂತ। ಲಾಲಿ ಬಲವಂತ। ಲಾಲಿ ಕುಂತಿಯಕಂದ। ಆನಂದ ತೀರ್ಥ।।ಲಾಲಿ।। ವನಧಿಯನು ಹಾರುತಲಿ। ವನಜಾಕ್ಷಿಯನು ಕಂಡು। ಇನಕುಲತಿಲಕನ ಅಂಗುಲಿಯ ನೀಡಿ। ಜಾನಕಿಗೆ ನಮಿಸುತ್ತ। ವನಗಳನು ಕೆಡಿಸಿ। ವಾನರ ರೂಪದಲಿ ಹರಿಚರಣ ಭಜಿಸಿ ।।ಲಾಲಿ।।1।। ಕುಂತಿಯ ಸುತನಾಗಿ। ಹಂತಕರ ಕೊಂದು। ಕಾಂತೆಯು ಕೇಳಲು। ಪುಷ್ಪವನು ತಂದೆ। ಅಂತರಂಗದಿ ಹರಿಯ। ನಿರುತದಲಿ ಭಜಿಸಿ। ಕಂತುಪಿತ ನಾ ದಯದಿ। ಮೆರೆದ ಜಗಜಟ್ಟಿ।।ಲಾಲೀ।।2।। ವೇದವತಿಯಲ್ಲಿ ಮೇದಿನಿಗೆ ಬಂದು। ವೇದಾರ್ಥ ಭಾಷ್ಯವನು ರಚಿಸುತ್ತ ಮೆರೆದೆ। ಮೋದಮುನಿ ಎನಿಸಿದ ಸಾಧುಜನ ವಂದ್ಯ। ವೇದ ಪುರುಷ ವರಾಹ ಹರಿ ವಿಠಲನ್ನ ದೂತ।।ಲಾಲೀ।।3।।

ಜೋ ಜೋ ಜೋ ಜೋ ಜೋ ಮುಖ್ಯಪ್ರಾಣಾ (ಲಾಲಿ)

ಜೋ ಜೋ ಜೋ ಜೋ ಜೋ ಮುಖ್ಯಪ್ರಾಣಾ। ಜೋ ಜೋ ಮಲ್ಲರ ಗಂಟಲ ಗಾಣಾ।।ಪ।। ಜೋ ಜೋ ಸರ್ವ ವಿದ್ಯಾ ಪ್ರವೀಣ। ಜೋ ಜೋ ಜೋ ಎಂದು ಪಾಡಿ ತೂಗಿದರು।। ಲಾಲೀ ।।ಅ.ಪ.।। ಈ ಯುಗದಲಿ ಬಾಲ ಬ್ರಹ್ಮಚಾರಿಯಾಗಿ। ಆ ಯುಗದಲಿ ಕಪಿ ರಾಜ್ಯವನಾಳೀ। ತೋರಮುತ್ತಿನ ಕಂಠಿ ಕುಂಡಲ ಧಾರೀ। ಪೂಜಿಪರ ಪಾಲಿಪ ಸುಜನ ಉಪಕಾರೀ।। ಲಾಲಿ।।1।। ಕುಂತಿಯ ಗರ್ಭದಿ ಜನಿಸಿದೆಯೋ ಭೀಮ। ಕಾಮಿಕೀಚಕನ ಕುಟ್ಟಿ ರಣಧೀರ। ಕಾಮಿನಿ ದ್ರೌಪತಿ ಕಷ್ಟ ನಿರ್ದೂರ। ಕಾಮಿತಾರ್ಥವನೀವ ಕಲ್ಪತರು ಭೀಮ।।ಲಾಲೀ।।2।। ಸೌಂದರ್ಯ ರೂಪದ ಶ್ರೀಮದಾನಂದ। ತಂದೆ ಹಯವದನನ ಮೋಹದ ಕಂದ। ಬಂದು ಉಡುಪಿಯಲಿ ಸ್ಥಿರವಾಗಿ ನಿಂದ। ನಿದ್ರೆಯ ಮಾಡಯ್ಯ ಹರಿಧ್ಯಾನಂದಿಂದ ।।ಲಾಲೀ।।3।।

ಮಂಗಳಂ ಮುಖ್ಯ ಪ್ರಾಣೇಶಗೆ ರಾಗ: ಸುರುಟಿ

ಮಂಗಳಂ ಮುಖ್ಯ ಪ್ರಾಣೇಶಗೆ। ಜಯ ಮಂಗಳ ವಾಯು ಕುಮಾರನಿಗೆ।।ಪ।। ಅಂಜನಾದೇವಿಯ ಕಂದಗೆ ಮಂಗಳ, ಕಂಜಾಕ್ಷ ಹನುಮಂತಗೆ ಮಂಗಳ। ಸಂಜೀವನ ತಂದಾತಗೆ ಮಂಗಳ ಸಜ್ಜನ ಪರಿಪಾಲಗೆ ಮಂಗಳ।।1।। ಅತಿಬಲವಂತ ಶ್ರೀ ಭೀಮಗೆ ಮಂಗಳ, ಪ್ರತಿಮಲ್ಲರ ಗೆಲಿದಗೆ ಮಂಗಳ। ಸತಿಯ ಸೀರೆಯ ಸೆಳೆಯ ಬಂದವನ ಪೃಥಿವಿ ಮ್ಯಾಲೆ ಕೆಡಹಿದಾತಗೆ ಮಂಗಳ।।2।। ಸರಸ ಸುಶಾಸ್ತ್ರವ ಪೇಳ್ದಗೆ ಮಂಗಳ, ನಿರುತ ಶ್ರೀರಾಮ ಬಂಟಗೆ ಮಂಗಳ। ದೊರೆಸಿರಿ ಕೃಷ್ಣನ ಪೂಜೆಯಮಾಡುವ ಗುರುಮಧ್ವಮುನಿರಾಯಗೆ ಮಂಗಳ।।3।।

ಮಂಗಳಂ ಮುಖ್ಯ ಪ್ರಾಣೇಶಗೆ ಮೂಜಗವಂದಿತಗೆ

ಮಂಗಳಂ ಮುಖ್ಯ ಪ್ರಾಣೇಶಗೆ ಜಯ ಮಂಗಳ ಮೂಜಗವಂದಿತಗೆ।।ಪ।। ಅಂಜನೆತನಯಂಗೆ ಮಾಪ್ರತಿ ಮಹಿಮಂಗೆ ಕಂಜನಾಭನ ಕಾರ್ಯದನುಕೂಲಗೆ ಸಂಜೀವನವ ತಂದ ಸಾಹಸವಂತಗೆ ಶ್ರೀ ರಂಜಿಪ ಹನುಮಗೆ ಮಂಗಳ।।1।। ಆ ಮಹಗಡಲ ಲಂಘಿಸಿ ಹೋಗಿ ಲಂಕೆಯ ಧಮಧುಮ ಮಾಡಿ ವನವ ಕಿತ್ತು ರಾಮ ಮುದ್ರಿಕೆ ಜಾನಕಿಗೆ ತಂದಿತ್ತ ಹೇಮಾದ್ರಿ ಹನುಮಗೆ ಮಂಗಳ।।2।। ಸುತ್ತ ಸಾಗರ ಮಧ್ಯದಲ್ಲಿ ಲಂಕೆಯ ಮುತ್ತಿ ವನಜಾಕ್ಷಿಯ ಮುಂದೆಬಂದು। ಹತ್ತು ತಲೆಯ ರಾವಣನೈಶ್ವರ್ಯವನಳಿದಗೆ ಖ್ಯಾತ ಹನುಮಗೆ ಮಂಗಳ।।3।। ಜಾತಿಬಂಧುಗಳ ಒಡಗೊಂಡ ಸಮುದ್ರದ ಸೇತುವ ಕಟ್ಟಿಸಾಹಸದಿಂದಲಿ। ಸೀತಾಪತಿಯ ಬಲವ ನಡೆಸಿದ ಪ್ರಖ್ಯಾತ ಹನುಮಗೆ ಮಂಗಳ।।4।। ಈ ಕಾಡಕಪಿಯಲ್ಲಿ ನಿಮ್ಮ

ಸೇವಕನೆಂದು ಬೇಡವೆಂದು ಸೀತೆಯ ಭಯಬಿಡಿಸಿ। ಚೂಡಾರತ್ನ ಶ್ರೀರಾಮಗಿತ್ತ ಬಂಡ ಕೊಂಡಾಡಿಸಿಕೊಂಬಗೆ ಮಂಗಳ॥5॥ ಬಲ್ಲಿದ ರಾವಣೇಶ್ವರನ ಮಾರ್ಬಲವನು ಕಲ್ಲ ಮರದೊಳಿಟ್ಟು ಕೆಡಹಿದಗೆ ಜಲ್ಲುಕ ದೈತ್ಯರಿಗೆಲ್ಲ ಎದೆಯ ಶೂಲವಗಿದ ಧಲ್ಲ ಹನುಮಗೆ ಮಂಗಳ॥6॥ ಬಲು ದೈತ್ಯರನೆಲ್ಲ ಗೆಲೆದು ಮುದ್ದೇನಹಳ್ಳಿಲಿ ಸ್ಥಿರವಾಗಿ ನಿಂದು ಭಕ್ತರ ಹೊರೆವ। ಹೆಳವನಕಟ್ಟೆ ವೆಂಕಟೇಶನ ದೂತ ಚಲದಂಗ ಹನುಮಗೆ ಮಂಗಳ॥7॥

ವಾನರೇಂದ್ರನ ರೂಪವ ರಾಗ : ದುರ್ಗ-ಅಟ್ಟತಾಳ

ವಾನರೇಂದ್ರನ ರೂಪವ ತಾಳಿ। ವನಧಿಯ ದಾಟಿ ಜಾನಕಿಗುಂಗುರವಿತ್ತ। ದಾನವೇಂದ್ರನ ವನವನೆಲ್ಲವ ಕಿತ್ತು ಪಟ್ಟಣವನೆ ಸುಟ್ಟು। ಇನಕುಲದ ರಾಮಗೆರಗಿದ ಹನುಮಂತಗೆ॥ಮಂಗಳಂ॥ ದುಷ್ಟ ದುರ್ಯೋಧನನ ಮಡುಹಿ। ಜ್ಯೇಷ್ಠಗೆ ಪಟ್ಟಗಟ್ಟಿ ಅವನಿಯೊಳು ಮೆರೆದವನಿಗೆ। ದುಷ್ಟ ರಾಯರನೆಲ್ಲ ಮಡುಹಿದಖಿಳೇಶ್ವರನ। ಕೃಷ್ಣಗತಿ ಪ್ರಿಯನಾದ ಭೀಮಸೇನನಿಗೆ॥ಮಂಗಳಂ॥ ಯತಿರೂಪವ ತಾಳಿ ಶ್ರುತಿಶಾಸ್ತ್ರದಿಂ। ಶ್ರೀಪತಿಯು ಸರ್ವೋತ್ತಮನೆಂದೆನಿಸಿದವಗೆ। ಯತಿ ವೇದ ವ್ಯಾಸನಾದ ಪುರಂದರ ವಿಠಲನ್ನ। ಗತಿಮಾರ್ಗವ ತೋರಿದ ಮದ್ವಮುನಿಗೆ॥ಮಂಗಳಂ॥

ನೀ ನಾಮ ರೂಪಮುನಕು ರಾಗ: ಸೌರಾಷ್ಟ್ರ

ನೀ ನಾಮ ರೂಪಮುನಕು ನಿತ್ಯಜಯಮಂಗಳಂ॥ಪ॥ ಪವಮಾನಸುತುಡುಬಟ್ಟು ಪಾದಾರವಿಂದ ಮುಲಕು॥1॥ ಪಂಕಜಾಕ್ಷಿ ನೆಲಕೊನ್ನ ಅಂಕಯುಗ ಮುನಕು॥2॥ ನಳಿನಾರಿಗೆ ರುಚಿರು ನವ್ವುಗಲ ಮೋಮುನಕು॥3॥ ನವಮುಕ್ತಾಹಾರಮುಲು ನಟಿಯಿಂಚು ಉರಮುನಕು ॥4॥ ಪ್ರಹ್ಲಾದನಾರದಾದಿ ಭಕ್ತುಲು ಪೊಗಡುಚುಂಡು॥5॥ ರಾಜೀವನಯನ ತ್ಯಾಗರಾಜ ವಿನುತುಮ್ಮೆನ॥6॥

